ಶಕ್ಯವಿಲ್ಲವಾದ್ದರಿಂದ ಅವುಗಳು ತಾತ್ಪರ್ಯ ನಿರ್ಣಾಯಕವಲ್ಲ. ಇದು ಒಂದು ಪೂರ್ವಪಕ್ಷ.

**ಇನ್ನೊಂದು ಪೂರ್ವಪಕ್ಷವೇನೆಂದರೆ :-** ವೇದಾದಿಗಳಿಂದ ರುದ್ರ ಜಗತ್ ಕಾರಣ ಎಂದು ತಿಳಿಯುತ್ತದೆ. ಅದಕ್ಕೆ ಬಾಧವಿಲ್ಲದ ಪ್ರಯುಕ್ತ ವೇದ ತಾತ್ಪರ್ಯವೂ ಸಿದ್ಧವಾಗುತ್ತದೆ. ವಿಷ್ಣುವಿಗೆ ಜಗತ್ ಕಾರಣತ್ವ ಬೋಧಕ ವಾಕ್ಯಗಳೇ ಬಾಧಕವೆನ್ನುವುದಾದರೆ ಸಮಾನ ಬಲಉಳ್ಳಂತಹ ಶಿವಕರ್ತೃತ್ವ ಬೋಧಕ ವಾಕ್ಯಗಳೇ ಅವುಗಳಿಗೆ ಬಾಧಕವಾಗಲಿ ಎಂಬ ಶಂಕೆಯು ಬರುವುದರಿಂದ 'ಒಂದು ಕಾಲದಲ್ಲಿ ಶಿವ ಕಾರಣ ವಿಷ್ಣುವಲ್ಲ, ಮತ್ತೊಂದು ಕಾಲದಲ್ಲಿ ವಿಷ್ಣುವೇ ಕಾರಣ ಶಿವನಲ್ಲ' ಎಂದು ಆ ವಾಕ್ಯವನ್ನು ಅರ್ಥೈಸಬೇಕು ಎಂದು, ವೇದಜನ್ಯವಾದ ಆಪಾತ ಪ್ರತೀತಿಯನ್ನು ಅವಲಂಬಿಸಿದ ಪೂ.ಪ. ಅಥವಾ - ಶೈವಾದಿ ಆಗಮಗಳಿಗೆ ಅಪ್ರಾಮಾಣ್ಯವನ್ನು ಹೇಳಿದ್ದರಿಂದ ಅವುಗಳಿಗೆ ವೇದತಾತ್ಪರ್ಯನಿಶ್ಚಾಯಕತ್ವ ಇಲ್ಲ ಎಂದು ಹೇಳಕೂಡದು ವೇದದಲ್ಲಿಯೂ ಕೂಡ ರುದ್ರ ಜಗತ್ಕಾರಣ ಎಂದು ಪ್ರತೀತವಾಗುತ್ತಿದೆ. ವೇದ ಜನ್ಯ ಪ್ರತೀತಿ ಸಹಿತವಾದ ಶೈವಾದಿ ಆಗಮಗಳಿಗೆ ಪ್ರಾಮಾಣ್ಯವನ್ನು ಹೇಳಬಹುದಾದ್ದರಿಂದ ಆ ವೇದದ ಆಪಾತ ಪ್ರತೀತಿ ಸಹಿತವಾದ ಆಗಮವನ್ನು ಅವಲಂಬಿಸಿದ ಒಂದೇ ಪೂ.ಪ. ಎಂದು ಭಾವಿಸಬೇಕು.

ಆಗಮಾವಲಂಬಿ ಮತ್ತು ವೇದಾವಲಂಬಿ ಎರಡು ಪೂರ್ವಪಕ್ಷಗಳೆಂಬುದು ಸುಧಾಭಿಪ್ರಾಯ. ವೇದಜನ್ಯ ಆಪಾತ ಪ್ರತೀತಿ ಸಹಿತ ಆಗಮಾವಲಂಬಿಯಾದ ಒಂದೇ ಪೂರ್ವಪಕ್ಷವೆಂಬುದು ಟೀಕಾದ ಅಭಿಪ್ರಾಯ.

**ಸಿದ್ಧಾಂತ :-** ವೇದದಲ್ಲಿ ಎರಡು ವಾಕ್ಯಗಳಿಗೆ ಆಪಾತತಃ ಪರಸ್ಪರ ವಿರೋಧ ಬಂದಾಗ ಏಕವಾಕ್ಯತ್ವ ನಿಶ್ಚಯಕ್ಕಾಗಿ ತಾತ್ಪರ್ಯ ನಿರ್ಣಯವನ್ನು ಅವಶ್ಯ ಮಾಡಲೇಬೇಕು. ಶೈವಾದಿ ಆಗಮಗಳಿಂದ ನಿರ್ಣಯ ಮಾಡೋಣವೆಂದರೆ ಅವುಗಳಿಗೆ ಪ್ರಾಮಾಣ್ಯವಿಲ್ಲ. ಮಾನಾಂತರ ಅವಿರುದ್ಧವಾದ್ದರಿಂದಲೇ ಪ್ರಮಾಣವಾಗಲಿ ಎನ್ನುವುದು ಸರಿಯಲ್ಲ. ವೇದಜನ್ಯ ಆಪಾತ ಪ್ರತೀ-ತಾರ್ಥವು ಉಪಕ್ರಮಾದಿ ಅನನುಗುಣವಾಗಿದ್ದರೆ ಆ ಅರ್ಥದಲ್ಲಿ ಶೈವಾದಿ ಆಗಮಗಳು ತಾತ್ಪರ್ಯ ನಿರ್ಣಯಕವಲ್ಲವಾದ್ದರಿಂದ ವ್ಯಾಖ್ಯಾನತ್ವವೇ

ಅಯುಕ್ತವಾಗುತ್ತದೆ. ಆಪಾತ ಪ್ರತೀತಿಯು ಅಜ್ಞಾನ ಮೂಲಕವಾದ್ದರಿಂದ ನಿರ್ಣಾಯಕವಲ್ಲ. ವ್ಯಾಖ್ಯಾನದಿಂದ ಮೂಲದ ತಾತ್ಪರ್ಯನಿರ್ಣಯ ಮಾಡುವುದಾದರೂ ಮೊದಲು ವ್ಯಾಖ್ಯಾನಕ್ಕೆ ಎಲ್ಲಿ ತಾತ್ಪರ್ಯ ಎಂದು ನಿರ್ಣಯವಾಗಬೇಕು. ಅದಕ್ಕಾಗಿಯಾದರೂ ಉಪಕ್ರಮಾದಿಗಳನ್ನು ಅನುಸರಿಸಲೇ ಬೇಕು. ಕೈ ಬಿಡುವಂತಿಲ್ಲ. ಅವಗಳಲ್ಲಿ ಬಲಾಬಲ ನಿರ್ಣಯ ಹೇಗೆಂಬುದನ್ನು ಮೂಲಗ್ರಂಥಗಳಲ್ಲಿ ಹೇಳಿದ್ದಾರೆ. ಆದ್ದರಿಂದ ಅವುಗಳಿಂದಲೇ ವೇದತಾತ್ಪರ್ಯನಿರ್ಣಯವು ಅನಿವಾರ್ಯವಾದಾಗ ಅವುಗಳನ್ನು ಅವಲಂಬಿಸಿದಾಗ ವಿಷ್ಣುವೇ ಕಾರಣ ಎಂದು ಶಾಸ್ತ್ರ ತಾತ್ಪರ್ಯ ವಿಷಯ ಎಂದು ಸಿದ್ಧವಾಗುತ್ತದೆ. ಹೀಗಾಗಿ ಎರಡೂ ಪೂ.ಪ ಗಳು ಮತ್ತು ಕೊನೆಯದು ಸರಿಯಲ್ಲ. ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲವೆಂಬುದೇ ಈ ಅಧಿಕರಣದ ಫಲ.

## ॥ ಓಂ ಈಕ್ಷತೇರ್ನಾಶಬ್ದಂ ಓಂ ॥ ೧-೧-೫

ಪರಬ್ರಹ್ಮನೇ ಮುಖ್ಯವೃತ್ತಿಯಿಂದ ಶಾಸ್ತ್ರ ತಾತ್ಪರ್ಯಗೋಚರ ಎಂಬ ಪೂರ್ವಾಧಿಕರಣ ಸಿದ್ಧಾಂತವನ್ನು ಆಕ್ಷೇಪಿಸಿ ಪೂರ್ವಪಕ್ಷ ಮಾಡುವುದರಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಎಂಬ ಸಂಗತಿ ಇದೆ.

ಮುಖ್ಯವಾಗಿ ಶಾಸ್ತ್ರ ಪ್ರತಿಪಾದ್ಯತ್ವ ಬ್ರಹ್ಮನಿಗೆ ಯುಕ್ತವೋ ಅಯುಕ್ತವೋ ಎಂದು ಸಂದೇಹ. ಅಯುಕ್ತ ಎಂದು ಪೂರ್ವಪಕ್ಷ. ಏಕೆಂದರೆ ಬ್ರಹ್ಮನಿಗೆ ವಾಚ್ಯತ್ವವೇ ಇಲ್ಲ. 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯು ಬ್ರಹ್ಮನು ಯಾವ ಶಬ್ದದಿಂದಲೂ ವಾಚ್ಯನಲ್ಲ ಎಂದು ಹೇಳುತ್ತಿದೆ.

**ಪ್ರಶ್ನೆ:-** 'ಪುರಿಶಯಂ ಪುರುಷ ಮೀಕ್ಷತೇ' ಎಂಬ ಪ್ರಮಾಣ ವಚನವು ಬ್ರಹ್ಮನಿಗೆ ಈಕ್ಷಣೀಯತ್ವವನ್ನು (ಜ್ಞೇಯತ್ವವನ್ನು) ಜ್ಞಾನ ಗೋಚರತ್ವವನ್ನು ಹೇಳುತ್ತದೆ. ಬ್ರಹ್ಮನಾದರೂ ಕೇವಲ ಉಪನಿಷತ್ತಿಗೆ ಮಾತ್ರ ಗೋಚರ. ಶಬ್ದಕ್ಕಿಂತ ಇತರವಾದ ಯಾವ ಪ್ರಮಾಣದಿಂದ ಅವನ ಜ್ಞಾನವನ್ನು ಪಡೆಯಲು ಶಕ್ಯವಿಲ್ಲ. ಶಬ್ದದಿಂದಲೇ ಅವನನ್ನು ತಿಳಿಯಬೇಕು. ವಾಚ್ಯತ್ವವಿಲ್ಲದಿದ್ದರೆ ಅದು ಸಾಧ್ಯವಿಲ್ಲ. ಆದ್ದರಿಂದ ವಾಚ್ಯತ್ವವನ್ನು ಬ್ರಹ್ಮನಿಗೆ ಒಪ್ಪಲೇಬೇಕು.

**ಪರಿಹಾರ :-** ಪುರಿಶಯಂ ಎಂಬ ಈಕ್ಷಣ ಶ್ರುತಿಯು ಗೌಣಾತ್ಮನಿಗೆ ಜ್ಞಾನಗೋಚರತ್ವವನ್ನು ಹೇಳುತ್ತಿದೆ. ಆದ್ದರಿಂದ ಅವನು ವಾಚ್ಯನಾಗಲಿ. ಶುದ್ಧಾತ್ಮನೂ ಕೂಡ ಜ್ಞೇಯ ಎಂದು ಹೇಳುವುದಾದರೂ 'ಲಕ್ಷಣಾ' ಎಂಬ ಗೌಣ ವೃತ್ತಿಯಿಂದ ಜ್ಞೇಯನೇ ಹೊರತು ಮುಖ್ಯವಾದ ವಚನ ವೃತ್ತಿಯಿಂದಲ್ಲ. 'ಅವಚನೇನ್ನೈವ ಪ್ರೋವಾಚ' ಎಂಬು ಶ್ರುತಿಯು 'ಲಕ್ಷಣಾವೃತ್ತಿಯಿಂದ ಬ್ರಹ್ಮನನ್ನು ಉಪದೇಶಿಸಿದ' ಎಂದೇ ಹೇಳುತ್ತದೆ.

**ಪ್ರಶ್ನೆ:-** ಎಲ್ಲ ಶಬ್ದಗಳೂ ಬ್ರಹ್ಮನಿಗೆ ಲಕ್ಷಕವೇ ಹೊರತು ವಾಚಕವಲ್ಲ ಎನ್ನುವುದಾದರೆ 'ಈ ಪದಕ್ಕೆ ಲಕ್ಷ್ಯಾರ್ಥ ಯಾವುದು' ಎಂಬ ಪ್ರಶ್ನೆಗೆ ಉತ್ತರವಾಗಿ ಒಂದು ಲಕ್ಷಕ ಪದವನ್ನೇ ಹೇಳಬೇಕು. ಅದಕ್ಕೆ ಪೂರ್ವದಲ್ಲಿ ಆ ಅರ್ಥವು (ವಸ್ತುವು) ವಾಚ್ಯಾರ್ಥ ಸಂಬಂಧಿಯಾಗಿ ತಿಳಿಯಲ್ಪಟ್ಟಿರಬೇಕು. ತೀರದಲ್ಲಿ ಗಂಗಾಶಬ್ದವನ್ನು ಪ್ರಯೋಗಿಸಬೇಕಾದರೆ ಮೊದಲು ಆ ತೀರವು ಗಂಗಾಸಂಬಂಧಿಯಾಗಿ ತಿಳಿಯಲ್ಪಟ್ಟಿರಬೇಕು. ಅದರಂತೆ ಬ್ರಹ್ಮನ ವಿಷಯ-ದಲ್ಲಿ ಕೂಡ. ಅಂತಹ ಜ್ಞಾನಕೋಸ್ಕರವಾಗಿ ಮತ್ತೊಂದು ಲಕ್ಷಕ ಶಬ್ದವನ್ನೇ ಪ್ರಯೋಗಿಸಿದರೆ ಅನವಸ್ಥಾ ದೋಷ ಬರುತ್ತದೆ.

**ಪರಿಹಾರ :-** ಬ್ರಹ್ಮನಿಗೆ ವಾಚ್ಯತ್ವ ಪಕ್ಷದಲ್ಲಿ ಅವನನ್ನು ಬೋಧಿಸಲು ವಾಚಕ ಶಬ್ದವನ್ನು ಪ್ರಯೋಗ ಮಾಡಬೇಕಾದರೂ ಮೊದಲು ಆ ಶಬ್ದಕ್ಕೂ ಅರ್ಥಕ್ಕೂ ಸಂಬಂಧ ಜ್ಞಾನ ಬಂದಿರಬೇಕು. ಅದು ಬರಬೇಕಾದರೆ ಅದಕ್ಕೂ ಮೊದಲು ಸಂಬಂಧಿಜ್ಞಾನ ಬೇಕಾಗುತ್ತದೆ. ಅದಕ್ಕಾಗಿ ಮತ್ತೊಂದು ವಾಚಕ ಶಬ್ದ ಹೇಳಬೇಕು. ಅನವಸ್ಥಾ ಸಮಾನವೇ ಆದ್ದರಿಂದ ಮುಖ್ಯ ವೃತ್ತಿಯಿಂದಲೇ ಜ್ಞೇಯ ಎಂಬುದು ಸರಿಯಲ್ಲ.

ಇನ್ನು ಬ್ರಹ್ಮ ಸರ್ವಶಾಸ್ತ್ರ ಪ್ರತಿಪಾದ್ಯ ಎಂಬುದೂ ಸರಿಯಲ್ಲ. 'ಅನಂತಾ ವೈ ವೇದಾಃ' ಎಂಬ ಶ್ರುತಿಯ ಪ್ರಕಾರ ವೇದಗಳು ಅನಂತವಾಗಿರುವುದರಿಂದ ಅಲ್ಪಾಯುಗಳಿಗೆ ಆ ವೇದ ಸ್ವರೂಪದ ಜ್ಞಾನವೇ ದುರ್ಲಭವಾಗಿ ಬ್ರಹ್ಮ ಸರ್ವಶಾಸ್ತ್ರ ಪ್ರತಿಪಾದ್ಯ ಎಂಬ ಜ್ಞಾನವಂತೂ ಸುತರಾಂ ಬರಲು ಸಾಧ್ಯವಿಲ್ಲ.

**ಸಿದ್ಧಾಂತ :-** 'ಆತ್ಮನ್ಯೇವಾತ್ಮಾನಂ ಪಶ್ಯೇತ್' 'ಯಸ್ಯಾನುವಿತ್ತಃ ಪ್ರತಿ ಬುದ್ಧ ಆತ್ಮಾ' ಇತ್ಯಾದಿ ವಾಕ್ಯಗಳಲ್ಲಿ ಜ್ಞೇಯನಾದವನಲ್ಲಿ 'ಆತ್ಮ' ಶಬ್ದ ಪ್ರಯೋಗ

ಇರುವುದರಿಂದ ಮತ್ತು ಅವನ ಜ್ಞಾನಿಗೆ ಮೋಕ್ಷವನ್ನೂ ಹೇಳಿರುವುದರಿಂದ ಜ್ಞೇಯನು ಶುದ್ಧ ಬ್ರಹ್ಮನೇ ಆಗಬೇಕು. ಲಕ್ಷಣಯಾ ಜ್ಞೇಯತ್ವವನ್ನು ಹೇಳಿದರೆ ಅನವಸ್ಥಾ ಬರುತ್ತದೆ. ಅವನು ಸ್ವಪ್ರಕಾಶ ಹಾಗಾಗಿ ನಿತ್ಯಸಿದ್ಧ ಎಂದು ಅನವಸ್ಥಾಪರಿಹಾರ ಮಾಡಿದರೆ ಆಗ ನಿತ್ಯಸಿದ್ಧನಾದ್ದರಿಂದಲೇ ಶಾಸ್ತ್ರ ವ್ಯರ್ಥ-ವಾಗುತ್ತದೆ. ಆದ್ದರಿಂದ ಅವನನ್ನು ವಾಚ್ಯ ಎಂದು ಒಪ್ಪಬೇಕು. ವಾಚ್ಯತ್ವ ಪಕ್ಷದಲ್ಲಿ ಅನವಸ್ಥಾ ಇಲ್ಲ. ಏಕೆಂದರೆ ಬ್ರಹ್ಮನನ್ನು ಪರಿಚಯಿಸಲು ಯೌಗಿಕ ಶಬ್ದವನ್ನು ಹೇಳಬಹುದು. ಅಂತಹ ಶಬ್ದಗಳಿಗೂ ಬ್ರಹ್ಮನಿಗೂ ಮೊದಲು ಸಂಬಂಧ ಜ್ಞಾನ ಬೇಕಾಗಿಲ್ಲ. ಆ ಶಬ್ದಗಳು ವಾಕ್ಯಕ್ಕೆ ಸಮಾನ. ವಾಕ್ಯಕ್ಕೂ ವಾಕ್ಯಾರ್ಥಕ್ಕೂ ಪೂರ್ವದಲ್ಲಿ ಸಂಬಂಧ ಜ್ಞಾನವಿಲ್ಲದಿದ್ದರೂ ಅಪೂರ್ವ-ವಾದ ಒಂದು ವಸ್ತುವನ್ನು (ಪದಾರ್ಥಸಂಸರ್ಗಉಳ್ಳದ್ದನ್ನು) ವಾಕ್ಯವು ಬೋಧಿಸುತ್ತದೆ. ಅದರಂತೆ ಯೌಗಿಕ ಶಬ್ದವೂ ಕೂಡ ಅಪೂರ್ವ ಬ್ರಹ್ಮನನ್ನು ಬೋಧಿಸಬಹುದು. ಲಕ್ಷ್ಯತ್ವ ಪಕ್ಷದವರು ಬ್ರಹ್ಮನನ್ನು ಅಖಂಡ (ಸಂಸರ್ಗ-ಉಳ್ಳವನಲ್ಲ) ಎಂದು ಹೇಳುವುದರಿಂದ ಮೇಲೆ ಹೇಳಿದ ಅನವಸ್ಥಾ ಪರಿಹಾರ ಅವರಿಗೆ ಶಕ್ಯವಿಲ್ಲ. ಯತೋ ವಾಚೋ ಎಂಬ ಶ್ರುತಿಯಾದರೂ ಬ್ರಹ್ಮನನ್ನು ಯಾರೂ ಪೂರ್ಣವಾಗಿ ಹೇಳಲಾರರು ಎಂದೇ ಪ್ರತಿಪಾದಿಸುತ್ತದೆ ಹೊರತು ವಾಚ್ಯತ್ವ ವನ್ನೇ ನಿಷೇಧ ಮಾಡುವುದಿಲ್ಲ. ಇನ್ನು, ಸಕಲ ವೇದಗಳ ಜ್ಞಾನ ಯಾರಿಗೂ ಇಲ್ಲದಿದ್ದರೂ ಸಕಲ ವೇದಗಳ ಅಭಿಪ್ರಾಯ ಒಂದೇ ಆಗಿದೆ ಎಂದು 'ಸರ್ವೇ ವೇದಾಃ' ಎಂಬ ವಚನವು ಹೇಳುತ್ತದೆ. ಸರ್ವಜ್ಞರಾದ ವ್ಯಾಸರು ಒಂದು ಶಾಖಾವನ್ನು ನಿರ್ಣಯ ಮಾಡಿದಾಗ ಅದರ ದೃಷ್ಟಾಂತದಿಂದ ಬೇರೇ ಶಾಖೆಗಳೂ ಕೂಡ ಹೀಗೇ ಬೋಧಿಸುತ್ತವೆ ಎಂದು ಅನುಮಾನದಿಂದ ತಿಳಿಯಲು ಸಾಧ್ಯವಿದೆ. ಆದ್ದರಿಂದ ಮುಖ್ಯತಃ ಸರ್ವಶಾಸ್ತ್ರ ಪ್ರತಿಪಾದ್ಯತ್ವ ಬ್ರಹ್ಮನಿಗೆ ಯುಕ್ತವೇ ಆಗಿದೆ. ಆದ್ದರಿಂದ ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ. ಈ ಅಧಿಕರಣದಲ್ಲಿ ಮುಖ್ಯ ವೃತ್ತಿಯಿಂದ ಶಾಸ್ತ್ರ ಪ್ರತಿಪಾದ್ಯತ್ವ ಹಾಗೂ ಸಕಲ ಶಾಸ್ತ್ರ ಪ್ರತಿಪಾದ್ಯತ್ವ ಎಂಬ ಎರಡು ಪ್ರಮೇಯಗಳು ಸಮರ್ಥಿಸ-ಲ್ಪಟ್ಟಿದ್ದರೂ ಇವೆರಡೂ ಕೂಡ ಒಂದೇ 'ಸಂ' ಶಬ್ದದ ಅರ್ಥಗಳಾಗಿರು-ವುದರಿಂದ ಒಂದೇ ಅಧಿಕರಣ ಮಾಡಲಾಗಿದೆ.

'ಸರ್ವೇ ವೇದಾ ಯತ್ ಪದಮಾಮನಂತಿ' ಎಂಬ ಶ್ರುತಿಯು ಸಕಲ ಶಬ್ದ ಸಮನ್ವಯವನ್ನು ಹೇಳಿದೆ ಆದರೂ ಅದರ ಮೇಲಿನ ಬಾಧಕಗಳನ್ನು ಪರಿಹರಿಸುವುದರಿಂದ ಮುಂದಿನ ಭಾಗ ಸಾರ್ಥಕವಾಗಿದೆ.

ಸಮನ್ವಯ ಸೂತ್ರದಲ್ಲಿ ಸಮನ್ವಯವು ಪ್ರತಿಜ್ಞಾನವಾಗಿದೆ. ಅದಕ್ಕೆ ಕಾರಣೀಭೂತವಾದ ವಾಚ್ಯತ್ವವನ್ನು ಈ ಈಕ್ಷತ್ಯಧಿಕರಣದಲ್ಲಿ ಹೇಳಿದ್ದರಿಂದ ಈ ಅಧ್ಯಾಯದ ಮುಂದಿನ ಭಾಗದಲ್ಲಿ ಸಮನ್ವಯವು ಉಪಪನ್ನವಾಗುತ್ತದೆ.

ವೈದಿಕ ಶಬ್ದಗಳು – ೪ ವಿಧ

ತತ್ರ ಪ್ರಸಿದ್ಧ, ಅನ್ಯತ್ರ ಪ್ರಸಿದ್ಧ, ಉಭಯತ್ರ ಪ್ರಸಿದ್ಧ. ಅನ್ಯತ್ರೈವ ಪ್ರಸಿದ್ಧ ಎಂಬುದಾಗಿ. ಇವುಗಳಲ್ಲಿ ತತ್ರ ಪ್ರಸಿದ್ಧ (ಬ್ರಹ್ಮನಲ್ಲಿ ಪ್ರಸಿದ್ಧ) ಶಬ್ದಗಳ ಸಮನ್ವಯವನ್ನು ಸಮರ್ಥಿಸುವ ಅಗತ್ಯವಿಲ್ಲ. ಇನ್ನುಳಿದ ಶಬ್ದಗಳು ನಾಮಾತ್ಮಕ ಲಿಂಗಾತ್ಮಕ ಎಂದು ಎರಡು ವಿಧ.

ಈ ಶಬ್ದಗಳ ಪೈಕಿ ಮಹಾಮಲ್ಲ ಭಂಗ ನ್ಯಾಯದಿಂದ (ಮೊದಲು ಮಹಾಮಲ್ಲನನ್ನು ಸೋಲಿಸಿ ಅನಂತ ಸಣ್ಣ ಪುಟ್ಟ ಮಲ್ಲರನ್ನು ಸೋಲಿಸುವುದು ರೂಢಿಯಲ್ಲಿದೆ.) ಅನ್ಯತ್ರ ಪ್ರಸಿದ್ಧ ಶಬ್ದಗಳ ಸಮನ್ವಯ ಮಾಡಬೇಕು. ಆದರಲ್ಲಿಯೂ ನಾಮಾತ್ಮಕ ಶಬ್ದಗಳು ನೇರವಾಗಿ ಧರ್ಮಿವಾಚಕವಾಗಿ ಪ್ರಧಾನವಾದ್ದರಿಂದ ಆದ್ಯಪಾದದಲ್ಲಿ ಅನ್ಯತ್ರ ಪ್ರಸಿದ್ಧ ನಾಮಗಳ ಸಮನ್ವಯ.

ಧರ್ಮದ್ವಾರಾ ಧರ್ಮಿಬೋಧಕ ಲಿಂಗಾತ್ಮಕ ಶಬ್ದಗಳ ಸಮನ್ವಯ ಎರಡನೇ ಪಾದದಲ್ಲಿ. ಉಭಯತ್ರ ಪ್ರಸಿದ್ಧ ನಾಮ ಲಿಂಗಾತ್ಮಕ ಶಬ್ದಗಳ ಸಮನ್ವಯ ಮೂರನೇ ಪಾದದಲ್ಲಿ ಮಾಡಲಾಗಿದೆ. ಅನ್ಯತ್ರೈವ ಪ್ರಸಿದ್ಧ ಶಬ್ದಗಳ ಸಮನ್ವಯ ಯದ್ಯಪಿ ಮಹಾಪ್ರಯತ್ನ ಸಾಧ್ಯ. ಆದರೂ ಅವುಗಳ ಉಪಾಸನೆಗೆ ಎಲ್ಲರೂ ಅರ್ಹರಲ್ಲವಾದ್ದರಿಂದ ಮತ್ತು ಮೊದಲಿಗೇ ಆ ಸಮನ್ವಯವು ತಿಳಿಯಲಶಕ್ಯವಾದ್ದರಿಂದ ಕೊನೆಯ ಪಾದದಲ್ಲಿ ಮಾಡಲಾಗಿದೆ. ಅನ್ಯತ್ರ ಪ್ರಸಿದ್ಧಾದಿಶಬ್ದಗಳಲ್ಲಿ ಪರಸ್ಪರ ಇರುವ ವ್ಯತ್ಯಾಸ ಮತ್ತು ರೂಢ ಯೌಗಿಕವಾದ ನಾಮಲಿಂಗಗಳ ವಿಚಾರವನ್ನು ಚಂದ್ರಿಕಾದಿಂದ ತಿಳಿಯಬೇಕು.

## ।। ಓಂ ಆನಂದಮಯೋಽಭ್ಯಾಸಾತ್ ।। ೧-೧-೬

ಸರ್ವ ಮುಮುಕ್ಷುಗಳಿಂದಲೂ ಅಪೇಕ್ಷಿತವಾದದ್ದು ಆನಂದ. ಭಗವಂತ-ನನ್ನು ಪೂರ್ಣಾನಂದ ಎಂದು ಉಪಾಸನೆ ಮಾಡಿದರೆ ಅಪೇಕ್ಷಿತವಾದ ಆನಂದ ಪ್ರಾಪ್ತಿಯಾಗುತ್ತದೆ. ಹಾಗಾಗಿ ಮೊದಲು ಆನಂದ ಎಂಬ ಮಹಾಗುಣವನ್ನೇ ಸಮನ್ವಯ ಮಾಡುವುದು ಉಚಿತ.

ಹಿಂದಿನ ಅಧಿಕರಣದಲ್ಲಿ ಬ್ರಹ್ಮ ಶಬ್ದಕ್ಕೆ ಗೌಣಾರ್ಥವನ್ನು (ಜೀವ) ಮಾಡಬಾರದು ಎಂದು ಹೇಳಿದೆ ಆದರೆ ಅದು ಸರಿಯಲ್ಲ. ಏಕೆಂದರೆ 'ಏತಂ ಆನಂದಮಯಾಮಾತ್ಮಾನಂ', ಎಂಬ ಶ್ರುತಿಯಲ್ಲಿ ಆತ್ಮ ಶಬ್ದಕ್ಕೆ ಜೀವ ಎಂಬ ಅರ್ಥವನ್ನು ಮಾಡಿದ್ದಾರೆ. ಹೀಗೆ ಈ ಅಧಿಕರಣವು ಹಿಂದಿನ ಅಧಿಕರಣದ ಮೇಲಿನ ಆಕ್ಷೇಪದಿಂದ ಪ್ರವೃತ್ತವಾಗಿರುವುದರಿಂದ ''ಆಕ್ಷೇಪಿಕೀ'' ಎಂಬ ಸಂಗತಿಯೂ ಇದೆ.

ಈ ಅಧಿಕರಣದ ವಿಷಯ - ತೈತ್ತಿರೀಯ ಶ್ರುತಿಯಲ್ಲಿ ಹೇಳಲ್ಪಟ್ಟ ಗುಣಿವಾಚಕಗಳಾದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನ-ಮಯ ಮತ್ತು ಆನಂದಮಯ ಶಬ್ದಗಳು ಹಾಗೂ ಗುಣಾವಾಚಕಗಳಾದ ಆನಂದ, ವಿಜ್ಞಾನ ಮೊದಲಾದ ಶಬ್ದಗಳು.

ಈ ಶಬ್ದಗಳ ಅರ್ಥ ವಿಷ್ಣುವೋ ಅಥವಾ ಅವನಿಗಿಂದ ಅನ್ಯರಾದ ಚತುರ್ಮುಖಾದಿಗಳೋ ಎಂಬುದೇ ಸಂದೇಹ

ಚತುರ್ಮುಖಾದಿಗಳೇ ಎಂಬುದು ಪೂರ್ವಪಕ್ಷ,

ಹೇಗೆಂದರೆ, ಅನ್ನಮಯಾದಿ ಶಬ್ದಗಳು ವಿಕಾರಾರ್ಥಕವಾದ ಮಯಟ್ ಪ್ರತ್ಯಯಾಂತಗಳಾಗಿವೆ. ಬ್ರಹ್ಮನಾದರೋ ''ನಿರ್ವಿಕಾರಃ ಅಕ್ಷರಃ ಶುದ್ಧಃ'' ಎಂಬುದಾಗಿ ಹೇಳಲ್ಪಟ್ಟು ನಿರ್ವಿಕಾರನಾಗಿದ್ದಾನೆ, ವಿಕಾರಕ್ಕೆ ಅಭಿಮಾನಿಯೂ ಆಗಿಲ್ಲ ಹಾಗಾಗಿ ಅನ್ನಮಯಾದಿಗಳು ವಿಷ್ಣುವಿಗಿಂತ ಭಿನ್ನ.

ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯ ಎಂಬ ಅರ್ಥವನ್ನು ಇಟ್ಟು-ಕೊಂಡರೂ ಬ್ರಹ್ಮನಲ್ಲಿ ಸುಖವಿಜಾತೀಯವಾದ ದುಖಃವನ್ನು ಕಿಂಚಿತ್

ಒಪ್ಪಬೇಕಾಗುತ್ತದೆ. ಆದರೆ ಬ್ರಹ್ಮನಲ್ಲಿ ದುಃಖಲೇಶವೂ ಇಲ್ಲ. ಮಯಟ್ ಪ್ರತ್ಯಯಕ್ಕೆ ತಾದಾತ್ಮ್ಯ ಎಂಬ ಅರ್ಥವನ್ನು ಮಾಡಿದರೆ ಆಗ ವೈಯರ್ಥ್ಯ ಎಂಬ ದೋಷ ಬರುವುದರಿಂದ ವಿಕಾರಾರ್ಥವನ್ನೇ ಮಾಡಿ ವಿಷ್ಣುವಿಗಿಂತ ಅನ್ಯನೇ ಅನ್ನಮಯಾದಿ ಶಬ್ದವಾಚ್ಯ ಎನ್ನಬೇಕು.

ಅನ್ನಮಯ ಶಬ್ದದಲ್ಲಿ ಮಯಟ್ ಪ್ರತ್ಯವು ವಿಕಾರಾರ್ಥದಲ್ಲೇ ಪ್ರಯುಕ್ತವಾಗಿದೆ. ಏಕೆಂದರೆ ''ಅನ್ನಾತ್ ಪುರುಷಃ'' ಎಂದು ಅನ್ನವಿಕಾರವಾದ ಪುರುಷ ಶಬ್ದಾರ್ಥವಾದ ದೇಹವನ್ನು ಪರಾಮರ್ಶನ ಮಾಡಿ ಆ ಪುರುಷನು ಅನ್ನರಸಮಯ ಎಂದು ಹೇಳಿದ್ದಾರೆ. ಮತ್ತು ಪ್ರತ್ಯಕ್ಷವಾಗಿ ಆದೇಹವನ್ನು ಕುರಿತು ಇದು ತಲೆ, ಇದು ಬಲಗೈ, ಇದು ಎಡಗೈ, ಇದು ಕಾಲು ಎಂಬುದಾಗಿ ಅವಯವ ನಿರ್ದೇಶವನ್ನು ಮಾಡಿದ್ದಾರೆ. ಹಾಗಾಗಿ ಅನ್ನಮಯ ಶಬ್ದದಲ್ಲಿ ಮಯಟ್ ಪ್ರತ್ಯಯವು ವಿಕರಾರ್ಥಕ. ಉಳಿದಕಡೆ ಬೇರೆ ಅರ್ಥ ಮಾಡುವುದು ಸರಿಯಲ್ಲವಾದ್ದರಿಂದ ಎಲ್ಲಾ ಶಬ್ಧಗಳಲ್ಲಿಯೂ ವಿಕಾರಾರ್ಥ-ವನ್ನೇ ಒಪ್ಪುವುದು ನ್ಯಾಯ ಸಮ್ಮತ.

ಮತ್ತೇನೆಂದರೆ ಅನ್ನಮಯಾದಿಗಳಿಗೆ ಪರಸ್ಪರ ಭೇದವನ್ನು ಮತ್ತು ಆಂತರತ್ವ (ಒಂದರ ಒಳಗೆ ಒಂದು)ವನ್ನು ಹೇಳಿದ್ದಾರೆ. ಮತ್ತು ಅವುಗಳಿಗೆ ಪರಸ್ಪರ ಶರೀರಶರೀರಿ ಭಾವವನ್ನು ಹೇಳಿದ್ದಾರೆ. ಹಾಗಾಗಿ ಇವು ಐದೂಕೂಡ ಕೋಶಗಳೇ ಆಗಬೇಕು. ಬ್ರಹ್ಮನಾದರೋ 'ಏಕಮೇವಾದ್ವಿತೀಯಂ', 'ಅಶ-ರೀರಃಪ್ರಜ್ಞಾತ್ಮಾ' ಎಂಬುದಾಗಿ ಹೇಳಲ್ಪಟ್ಟಿರುವುದರಿಂದ, ಪಂಚತ್ವಸಂಖ್ಯೆ, ಅನ್ಯತ್ವ, ಆಂತರತ್ವ, ಶರೀರ ಇದ್ಯಾವುದೂ ಬ್ರಹ್ಮನಲ್ಲಿ ಕೂಡುವುದಿಲ್ಲ.

ಆನಂದಮಯನಲ್ಲಿ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂಬುದಾಗಿ ಬ್ರಹ್ಮನು ಆನಂದಮಯನ ಪಾದ ಎಂಬುದಾಗಿ ಹೇಳಿರುವುದರಿಂದ, ಆನಂದಮಯನು ಬ್ರಹ್ಮನಾಗಲು ಸಾಧ್ಯವಿಲ್ಲ. ಅವಯವ ಅವಯವಿಗಳಿಗೆ ಐಕ್ಯವು ಕೂಡುವು-ದಿಲ್ಲ. ಮತ್ತು ಎರಡಕ್ಕೂ ಪೂರ್ಣತ್ವ ಇರಲು ಸಾಧ್ಯವಿಲ್ಲ.

ಆದ್ದರಿಂದ ಅನ್ನಮಯಾದಿಗಳು ಕೋಶ ಎಂದಾಗಲೀ ವಿಕಾರಾರೂಪವಾದ ಪ್ರಕೃತಿ ಎಂದಾಗಲೀ ವಿಕಾರಕ್ಕೆ ಅಭಿಮಾನಿಯಾದ ಲಕ್ಷ್ಮೀ ಎಂದಾಗಲೀ ಜೀವ

ಎಂದಾಗಲೀ ಅಥವಾ ಭಾಷ್ಯದಲ್ಲಿ ಹೇಳಿರುವಂತೆ ಇನ್ಯಾವುದಾದರೂ ಆಗಲಿ ಎಂದು ಹೇಳಬೇಕೇ ಹೊರತು ವಿಷ್ಣು ಎಂಬುದಾಗಿ ಸರ್ವಥಾ ಹೇಳಬಾರದು.

**ಸಿದ್ಧಾಂತ :-** ಅನ್ನಮಯಾದಿಗಳು ಐದೂ ಬ್ರಹ್ಮನೇ. ಏಕೆಂದರೆ ಐದರ ವಿಷಯದಲ್ಲಿಯೂ ಬ್ರಹ್ಮ ಶಬ್ದವಿದೆ. ''ಯೇ ಅನ್ನಂ ಬ್ರಹ್ಮ ಉಪಾಸತೇ'' ''ಪ್ರಾಣಂ ಬ್ರಹ್ಮ ಉಪಾಸತೇ'' ಎಂದು ಮೊದಲಾಗಿ, ವಿಜ್ಞಾನಮಯ ಮತ್ತು ಆನಂದಮಯನಲ್ಲಿ ಬ್ರಹ್ಮ ಶಬ್ದವು ಅನೇಕಬಾರಿ ಶ್ರುತವಾಗಿದೆ.

ಈ ಐದರಲ್ಲಿಯೂ ಬ್ರಹ್ಮ ಶಬ್ದ ಪರ್ಯಾಯವಾದ ಆತ್ಮಶಬ್ದವು ಅನೇಕ ಬಾರಿ ಶ್ರುತವಾಗಿದೆ.

ಇನ್ನು ಅನ್ನಮಯನಲ್ಲಿ ''ಅದ್ಯತೇ ಅತ್ತಿ ಚ ಭೂತಾನಿ'' ಎಂಬುದಾಗಿ ಬ್ರಹ್ಮನ ಲಿಂಗಗಳಾದ ಸರ್ವೋಪಜೀವ್ಯತ್ವ', ಸರ್ವ ಸಂಹರ್ತೃತ್ವ, ಜ್ಯೇಷ್ಠತ್ವ, ಉಪಾಸಕ ಪ್ರಾಪ್ಯತ್ವ ಮೊದಲಾದವುಗಳನ್ನು ಹೇಳಿದ್ದಾರೆ.

ಪ್ರಾಣಮಯನಲ್ಲಿ 'ಪ್ರಾಣಂ ದೇವಾ ಅನು ಪ್ರಾಣಂತಿ' ಎಂಬುದಾಗಿ ಸರ್ವದೇವ ಪ್ರೇರಕತ್ವವನ್ನು ಹೇಳಿದ್ದಾರೆ. ಹಾಗೆ ಪೂರ್ಣಾಯು ರೂಪ ಮೋಕ್ಷ ಪ್ರದತ್ವವನ್ನು ಹೇಳಿದ್ದಾರೆ. ಇವೆರೆಡು ಬ್ರಹ್ಮನದೇ ಲಿಂಗಗಳು.

ಮನೋಮಯನಲ್ಲಿ 'ಯತೋ ವಾಚೋ ನಿವರ್ತಂತೇ' ಎಂಬುದಾಗಿ ವಾಕ್ ಮನಸ್ಸುಗಳಿಗೆ ಗೋಚರನಲ್ಲ ಎಂಬ ಬ್ರಹ್ಮಲಿಂಗವನ್ನು ಮತ್ತು ಭಯ-ವಿಲ್ಲದ ಮೋಕ್ಷಕ್ಕೆ ಕಾರಣ ಎಂಬುದಾಗಿಯೂ ಹೇಳಿದ್ದಾರೆ.

ವಿಜ್ಞಾನಮಯನಲ್ಲಿ 'ವಿಜ್ಞಾನಂ ದೇವಾಃ ಸರ್ವೇ ಬ್ರಹ್ಮ ಜ್ಯೇಷ್ಠಮುಪಾಸತೇ' ಎಂಬುದಾಗಿ ಸರ್ವದೇವೋಪಾಸ್ಯತ್ವ, ಜ್ಯೇಷ್ಠತ್ವ, ಮುಕ್ತಿ ಹೇತುತ್ವ, ಉಪಾಸಕ ಪ್ರಾಪ್ಯತ್ವ ಮೊದಲಾದ ಬ್ರಹ್ಮ ಲಿಂಗಗಳನ್ನು ಹೇಳಿದ್ದಾರೆ.

ಆನಂದಮಯನಲ್ಲಿ 'ಸೋಽಕಾಮಯತ' ಎಂಬುದಾಗಿ ಸಂಕಲ್ಪಪೂರ್ವಕ ಸೃಷ್ಟಿಕರ್ತೃತ್ವ, ಸರ್ವಾಂತರ್ಯಾಮಿತ್ವ, ಮುಕ್ತಿಹೇತುಜ್ಞಾನವಿಷಯತ್ವ ಮೊದಲಾದ ಬ್ರಹ್ಮಲಿಂಗಗಳನ್ನು ಹೇಳಿದ್ದಾರೆ.

ಅನ್ನಮಯಾದಿ ಐದರಲ್ಲೂ 'ಸ ಯ ಏವಂವಿತ್', 'ಏತಂ ಅನ್ನಮಯಂ, ಆತ್ಮಾನಂ ಉಪಸಂಕ್ರಾಮತಿ' ಎಂಬುದಾಗಿ ಬ್ರಹ್ಮವಿತ್ ಪ್ರಾಪ್ಯತ್ವ ಎಂಬ ಲಿಂಗವಿದೆ. ಹೀಗೆ ಐದರಲ್ಲೂ ಲಿಂಗಬಾಹುಲ್ಯ ಕಂಡು ಬಂದಿದೆ. ಹಾಗಾಗಿ ಅನ್ನಮಯಾದಿಗಳು ಬ್ರಹ್ಮನೇ ಆಗಬೇಕು.

ಹಾಗೆಯೇ ಈ ವಿಷಯದಲ್ಲಿ 'ವಾಕ್ಯ' ಎಂಬ ತಾತ್ಪರ್ಯ ಲಿಂಗವೂ ಇದೆ. 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್' ಎಂದು ಬ್ರಹ್ಮನು ಆನಂದಮಯನಲ್ಲದೇ ಹೋದರೆ ಅವನು ವಿಶ್ವಚೇಷ್ಟಕ ಹೇಗಾದಾನು ಎಂಬುದಾಗಿ ಹೇತುತ್ವ ಪ್ರತಿಪಾದಕ ವಾಕ್ಯವಿದೆ.

ಈ ವಿಷಯದಲ್ಲಿ ಪ್ರಕರಣ ಎಂಬ ತಾತ್ಪರ್ಯಲಿಂಗವೂ ಇದೆ, ಬ್ರಹ್ಮ ಜ್ಞಾನಿಯು ಬ್ರಹ್ಮನನ್ನು ಹೊಂದುತ್ತಾನೆ ಎಂಬುದಾಗಿ ಹೇಳಿ ಆ ಬ್ರಹ್ಮನ ಲಕ್ಷಣವೇನು ಎಂದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಮಂತ್ರ-ವರ್ಣದಿಂದ ಲಕ್ಷಣವನ್ನು ಹೇಳಿ ಆ ಲಕ್ಷಣದ ವ್ಯಾಖ್ಯಾನವನ್ನು ಮುಂದೆ ಅನ್ನಮಯಾದಿ ಪದಗಳಿಂದ ಮಾಡಿರುವುದರಿಂದ ಇದು ಬ್ರಹ್ಮಪ್ರಕರಣ.

ಈ ವಿಷಯದಲ್ಲಿ ಭೃಗುವಲ್ಲೀ ಸಮಾಖ್ಯಾನವೂ ಇದೆ. ಭೃಗುವಲ್ಲಿಯು ಬ್ರಹ್ಮಪರ ಎಂಬುದಾಗಿ ನಿರ್ಣೀತವಾಗಿದೆ.

ಈ ವಿಷಯದಲ್ಲಿ ಸ್ಥಾನ (ಅನೇಕ ಪ್ರಕರಣ ಸಮೂಹ) ಎಂಬ ತಾತ್ಪರ್ಯ ಲಿಂಗವೂ ಇದೆ. ಈ ಉಪನಿಷತ್ತು ಬ್ರಹ್ಮಪರ ಎಂಬುದಾಗಿ ಸ್ಮೃತಿ ರೂಪ ಪ್ರಮಾಣದಿಂದ ಸಿದ್ಧವಾಗಿದೆ. ಅನ್ನಮಯಾದಿ ಪ್ರಕರಣವು ಉಪನಿಷತ್ತಿನ ಭಾಗವಾದ್ದರಿಂದ ಇದು ಬ್ರಹ್ಮಪರವೇ ಆಗಬೇಕು.

'ಬ್ರಹ್ಮ' 'ಆತ್ಮ' ಶಬ್ದಗಳು ಭಾಷ್ಯದಲ್ಲಿ ಹೇಳಿರುವ ಪ್ರಮಾಣಗಳಿಂದ ಕೇವಲ ವಿಷ್ಣುವಾಚಕ ಎಂಬುದಾಗಿ ಸಿದ್ಧವಾಗಿದೆ. ಭೃಗುವಲ್ಲಿಯು ಇದಕ್ಕೆ ಹೇಗೆ ಸಾಮಾಖ್ಯಾನ ಎಂಬುದನ್ನು ಮೂಲಗ್ರಂಥಗಳಲ್ಲಿ ಹೇಳಿದ್ದಾರೆ.

**ಬಾಧಕ ಪರಿಹಾರ :-** ಮಯಟ್ ಪ್ರತ್ಯಯದ ಅನುಪಪತ್ತಿ ಇಲ್ಲ. ಏಕೆಂದರೆ ಪ್ರಾಚುರ್ಯಾರ್ಥದಲ್ಲಿ ಮಯಟ್ ಪ್ರತ್ಯಯವನ್ನು ಸ್ವೀಕರಿಸಲಾಗಿದೆ. ಪ್ರಾಚುರ್ಯವು ಎರಡು ವಿಧ. ಮೊದಲನೆಯದು ವಿಜಾತೀಯ

ಸಮಾನಾಧಿಕರಣ ಅಲ್ಪತ್ವ. ಎರಡನೆಯದು ವಿಭಿನ್ನಾಧಿಕರಣೇ ಸಜಾತೀಯ ಅಲ್ಪತ್ವ. ಇದರಲ್ಲಿ ಮೊದಲನೆಯವಿಧ ಕೂಡದಿದ್ದರೂ ಎರಡನೆಯ ವಿಧವಾದ ಪ್ರಾಚುರ್ಯವನ್ನು ಹೇಳಬಹುದು. ಹೇಗೆಂದರೆ, ಬ್ರಹ್ಮನಿಗಿಂತ ಭಿನ್ನನಾದ ಜೀವನಲ್ಲಿರುವ ಸುಖ ಅಲ್ಪ, ಅದಕ್ಕಿಂತ ಪ್ರಚುರವಾದ ಸುಖವಿದೆ ಬ್ರಹ್ಮನಲ್ಲಿ.

ಅನ್ಯತ್ವ, ಆಂತರತ್ವದ ಅನುಪಪತ್ತಿಯೂ ಇಲ್ಲ. ಏಕೆಂದರೆ ಬ್ರಹ್ಮನಿಗೆ ಅಧಿಷ್ಠಾನವಾದ ಕೋಶವನ್ನು ಕುರಿತು ಅನ್ಯತ್ವಾದಿಗಳನ್ನು ಹೇಳಿದ್ದಾರೆ. ಕೋಶಗಳು ಬ್ರಹ್ಮನ ಶರೀರವಾದ್ದರಿಂದ ಶರೀರದ ಧರ್ಮವನ್ನು ಶರೀರಿಯಲ್ಲಿ ಔಪಚಾರಿಕವಾಗಿ ಹೇಳುವುದು ಕಂಡಿದೆ. ಬ್ರಹ್ಮನಿಗೆ ಅನೇಕ ರೂಪ-ಗಳಿರುವದರಿಂದ ಪಂಚತ್ವ ಸಂಖ್ಯೆಯನ್ನು ಕೂಡಿಸಬಹುದು. ವಿಶೇಷದ ಬಲದಿಂದ ಸ್ಮೃತಿಯಲ್ಲಿ ಹೇಳಲ್ಪಟ್ಟಂತೆ ಅಖಂಡನಾದ ಬ್ರಹ್ಮನಲ್ಲಿ ಅನ್ಯತ್ವಾದಿ-ಗಳನ್ನು ಕೂಡಿಸಬಹುದು.

ಹಾಗಾದರೆ 'ಸ ವಾ ಏಷಃ' ಎಂಬುದಾಗಿ ದೇಹ ಪರಾಮರ್ಶವನ್ನು ಮಾಡಿರುವುದು ಹೇಗೆ ಸಾಧ್ಯ ಎಂದರೆ 'ಆತ್ಮನ ಆಕಾಶಃ' ಎಂದು ಮೊದಲಾಗಿ 'ಅನ್ನಾತ್ ಪುರುಷಃ' ಎಂಬಲ್ಲಿಯವರೆಗೆ ಆಕಾಶಾದಿಗಳ ಪ್ರಾದುರ್ಭಾವದ ಜೊತೆಗೆ ಅವುಗಳ ನಿಯಾಮಕನಾದ ಹರಿಯ ಪ್ರಾದುರ್ಭಾವವನ್ನೂ ಹೇಳಲಾಗಿದೆ. ಪುರುಷಪದದಿಂದ ಹರಿಯು ಪ್ರಕೃತನಾಗಿರುವುದರಿಂದ ಅವನನ್ನು ಪರಾಮರ್ಶಿಸಲಾಗಿದೆ. ಇದನ್ನು 'ಕಾರಣತ್ವೇನ ಚಾಕಾಶಾದಿಷು' ಎಂಬ ಸೂತ್ರದಲ್ಲಿ ಹೇಳಿದ್ದಾರೆ. ರಸಶಬ್ದದಿಂದ ಅನ್ನಮಯದೇಹವನ್ನು ವ್ಯಾವೃತ್ತಿ-ಗೊಳಿಸಿ, ವ್ಯವಹಿತವಾದ ಆತ್ಮನನ್ನು ಪರಾಮರ್ಶಿಸುವ ತದ್ ಶಬ್ದವನ್ನು ವಿಶೇಷಣವಾಗಿ ಹೇಳಿರುವುದರಿಂದ ಇದು ಹರಿಯ ಪರಾಮರ್ಶವೇ ಆಗಿದೆ. ಇಲ್ಲದೆಹೋದರೆ 'ಏಷ ಅನ್ನಮಯಃ' ಎಂಬುದಾಗಿ ಹೇಳಿದ್ದರೆ ಸಾಕಾಗಿತ್ತು.

ಇನ್ನು ಪ್ರತ್ಯಕ್ಷವಾಗಿ ಮಾಡಿರುವ ಅವಯವ ನಿರ್ದೇಶವು ವಸ್ತ್ರದಿಂದ ಆವೃತವಾದ ಅಂಗವನ್ನು ನಿರ್ದೇಶಿಸುವಂತೆ ಎಂದು ಕೂಡಿಸಬಹುದು.

ಬ್ರಹ್ಮನು ಆನಂದಮಯನ ಪಾದವಾದ್ದರಿಂದ ಆನಂದಮಯ ಬ್ರಹ್ಮ-ನಾಗುವುದು ಹೇಗೆ ಎಂಬ ಪ್ರಶ್ನೆಗೂ ಅವಕಾಶವಿಲ್ಲ ಏಕೆಂದರೆ ಆನಂದಮಯ

ಮತ್ತು ಅವಯವನಾದ ಬ್ರಹ್ಮ ಎರಡೂ ಪೂರ್ಣ ಎಂಬುದನ್ನು ಬೇರೆ ಗ್ರಂಥಗಳಲ್ಲಿ ಸಮರ್ಥಿಸಲಾಗಿದೆ.

ಹಾಗಾಗಿ, ಸಾಧಕಗಳಿರುವುದರಿಂದ ಯಾವುದೇ ಬಾಧಕವಿಲ್ಲದಿರುವುದ-ರಿಂದ ಅನ್ನಮಯಾದಿ ಐದೂ ಕೂಡ ಆಯಾ ಕೋಶದಲ್ಲಿರುವ ಅನಿರುದ್ಧಾದಿ ಬ್ರಹ್ಮನ ರೂಪಗಳೇ ಎಂಬುದಾಗಿ ಸಿದ್ಧವಾಗುತ್ತದೆ.

ಈ ಅಧಿಕರಣದ ಪ್ರಯೋಜನವೇನೆಂದರೆ, ಬ್ರಹ್ಮನು ಆನಂದಮಯನ ಅವಯವವಾದ್ದರಿಂದ ಅವಯವಿಯನ್ನು ಬಿಟ್ಟು ಅವಯವದ ಜಿಜ್ಞಾಸೆ ಸರಿಯಲ್ಲ ಹಾಗಾಗಿ ಬ್ರಹ್ಮ ಜಿಜ್ಞಾಸೆ ಕೊಡುವುದಿಲ್ಲ ಎಂಬುದು ಪೂರ್ವಪಕ್ಷ ಪ್ರಯೋಜನ. ಈ ಆಕ್ಷೇಪದ ಸಮಾಧಾನವೇ ಸಿದ್ಧಾಂತ ಪ್ರಯೋಜನ.

## ।। ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ।। ೧-೧-೭

'ಅದೃಶ್ಯೇಽನಾತ್ಮ್ಯೇ' ಎಂಬಲ್ಲಿ ಆನಂದಮಯನ ಧರ್ಮವಾದ ಅದೃಶ್ಯತ್ವವು ಶ್ರುತವಾಗಿದೆ. ಆ ಅದೃಶ್ಯತ್ವವು ಅಂತಸ್ಥನಲ್ಲಿಯೂ ಶ್ರುತವಾಗಿದೆ. ಆದರೆ ಅಂತಸ್ಥನು ವಿಷ್ಣುವಲ್ಲ. ಹಾಗಾಗಿ ಆನಂದಮಯನೂ ವಿಷ್ಣುವಾಗಲು ಸಾಧ್ಯವಿಲ್ಲ. ಹೀಗೆ ಹಿಂದಿನ ಅಧಿಕರಣದ ಮೇಲಿನ ಆಕ್ಷೇಪದಿಂದ ಈ ಅಧಿಕರಣವು ಹೊರಟಿದೆ, ಹಾಗಾಗಿ 'ಆಕ್ಷೇಪಿಕೀ' ಎಂಬ ಸಂಗತಿ ಇದೆ.

'ಅಂತಃ ಪ್ರವಿಷ್ಟಂ...' ಎಂಬ ಶ್ರುತಿಯಲ್ಲಿ 'ನ ವಿಜಾನಂತಿ ದೇವಾ' ಎಂಬುದಾಗಿ ಅಂತಸ್ಥನಲ್ಲಿ ಅದೃಶ್ಯತ್ವವು ಶ್ರುತವಾಗಿದೆ. ದೇವತೆಗಳೇ ತಿಳಿಯದೆ ಹೋದ ಮೇಲೆ ಉಳಿದವರ ಪಾಡೇನು ಎಂದು ಕೈಮುತ್ಯ ನ್ಯಾಯದಿಂದ ಅದೃಶ್ಯತ್ವವು ಸಿದ್ಧವಾಗುತ್ತದೆ.

ಆ ಅಂತಸ್ಥನು ವಿಷ್ಣುವೋ ಇಂದ್ರಾದಿಗಳೋ ಎಂಬುದೇ ಸಂದೇಹ, ಇಂದ್ರಾದಿಗಳೇ ಎಂಬುದು ಪೂರ್ವಪಕ್ಷ. 'ಇಂದ್ರೋರಾಜಾ' ಎಂಬುದಾಗಿ ಇಂದ್ರಶಬ್ದವಿರುವುದರಿಂದ. 'ಸಪ್ತ ಯುಂಜಂತಿ ರಥಮೇಕ ಚಕ್ರಂ' ಎಂಬುದಾಗಿ ಸೂರ್ಯನ ಲಿಂಗವಿರುವುದರಿಂದ ಸೂರ್ಯನಾಗಬಹುದು ಅಥವಾ 'ಅಪಾಂ ನೇತಾರಂ' ಎಂಬುದಾಗಿ ವರುಣ ಲಿಂಗವಿರುವುದರಿಂದ

ವರುಣನಾಗಬಹುದು. 'ತ್ವಷ್ಟಾರಂ ರೂಪಾಣಿ ವಿಕುರ್ವಂತಂ' ಎಂಬುದಾಗಿ ತ್ವಷ್ಟೃ ಶಬ್ದವಿರುವುದರಿಂದ ಅಂತಸ್ಥನು ತ್ವಷ್ಟಾ ಆಗಬಹುದು.

ಅದೃಶ್ಯತ್ವ ಎಂಬ ವಿಷ್ಣು ಲಿಂಗವೂ ಇದೆಯಲ್ಲಾ ? ಎಂದರೆ ಅದು ನಿರೂಢ ಇಂದ್ರಾದಿ ಶ್ರುತಿಗಳಿಂದ ಮತ್ತು ಉಕ್ತ ಲಿಂಗಗಳಿಗಿಂತ ದುರ್ಬಲವಾಗಿದೆ.

ವಿಷ್ಣು ಲಿಂಗಗಳು ಅನೇಕವಿದೆಯಲ್ಲಾ ಎಂದರೆ ಶ್ರುತಿಯು ಸ್ವಭಾವತಃ ಪ್ರಬಲವಾಗಿದೆ. 'ತಯೋಃ ಸ್ವಭಾವೋ ಬಲವಾನ್' ಎಂಬ ಪ್ರಮಾಣದಿಂದ ಬಹುತ್ವ ಪ್ರಯುಕ್ತ ಪ್ರಾಬಲ್ಯಕ್ಕಿಂತ ಸ್ವಭಾವ ಪ್ರಯುಕ್ತ ಪ್ರಾಬಲ್ಯವು ಶ್ರೇಷ್ಠ. ವಿಷ್ಣು ಲಿಂಗಗಳು ನಿರವಕಾಶವಾದ್ದರಿಂದ ಪ್ರಬಲವಾಗಿವೆ. ಎಂದರೆ ಇಂದ್ರಾದಿ-ಗಳಿಗೂ ವಿಷ್ಣುವಿಗೂ ಐಕ್ಯವನ್ನು ಒಪ್ಪಬೇಕು ಇದರಿಂದ ವಿಷ್ಣು ಲಿಂಗಗಳೆಲ್ಲಾ ಅನುಪಹಿತರೂಪದ ಅಭಿಪ್ರಾಯದಿಂದ ಇಂದ್ರನಲ್ಲಿ ಬರುತ್ತದೆ. ಉಪಹಿತ (ಔಪಾಧಿಕ) ರೂಪದಿಂದ ಇಂದ್ರನು ಅಂತಸ್ಥನಾಗುತ್ತಾನೆ.

**ಸಿದ್ಧಾಂತ :-** ಅಂತಸ್ಥನು ವಿಷ್ಣುವೇ. 'ಅಂತಃ ಸಮುದ್ರೇ ಮನಸಾ ಚರಂತಂ' ಎಂಬುದಾಗಿ ಸಮುದ್ರಾಂತಸ್ಥತ್ವ, ಬ್ರಹ್ಮಾಂಡ ವೀರ್ಯತ್ವವೇ ಮೊದಲಾದ, ವಿಷ್ಣು ಲಿಂಗಗಳಿವೆ. ಇವು ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತ್ಯಾದಿಗಳಿಂದ ನಿರವಕಾಶ ಎಂದು ಸಿದ್ಧವಾಗಿದೆ. 'ಇಂದ್ರಸ್ಯ ಆತ್ಮಾ', 'ವಾಯೋಃ ಆತ್ಮಾನಾಂ', 'ಅಂತ-ರಾದಿತ್ಯೇ' ಎಂಬುದಾಗಿ ಇವೇ ಪ್ರಕರಣದಲ್ಲಿ ಅಂತಸ್ಥನಿಗೂ ಇಂದ್ರಾದಿಗಳಿಗೂ ಭೇದವನ್ನು ಹೇಳಿರುವುದರಿಂದ ಐಕ್ಯವು ಕೂಡುವುದಿಲ್ಲ. ಇಂದ್ರಾದಿ ಶಬ್ದಗಳ ಪ್ರವೃತ್ತಿನಿಮತ್ತವಾದ ಐಶ್ವರ್ಯಾದಿಗಳು ವಿಷ್ಣುವಿನಲ್ಲಿಯೂ ಇವೆ. ಮತ್ತು ಇಂದ್ರಾದಿಗಳಲ್ಲಿ ಇರುವ ಐಶ್ವರ್ಯಾದಿಗಳು ವಿಷ್ಣುವಿನ ಅಧೀನ ಹಾಗಾಗಿ ತದಧೀನತ್ವ ನ್ಯಾಯದಿಂದ ವಿಷ್ಣುವಿನಲ್ಲಿ ಮಹಾಯೋಗವು ಇದೆ. 'ಇಂದ್ರಂ ಮಿತ್ರಂ ವರುಣಮಗ್ನಿಂ ಆಹುಃ' ಎಂಬುದಾಗಿ ವಿಷ್ಣುವಿನಲ್ಲಿ ಇಂದ್ರಾದಿ ಶಬ್ದಗಳು ಶ್ರುತವಾಗಿವೆ. ಇಂದ್ರಾದಿ ಶಬ್ದಗಳಿಗೆ ವಿಷ್ಣುವಿನಲ್ಲಿ ವಿದ್ವತ್ ರೂಢಿಯೂ ಇದೆ. ಸಪ್ತಾಶ್ವತ್ವ ಮೊದಲಾದ ಅನ್ಯಲಿಂಗಗಳನ್ನು ಕೂಡ ಶಾಸ್ತ್ರ-ದೃಷ್ಟ್ಯಾ ಎಂಬ ಸೂತ್ರೋಕ್ತ ನ್ಯಾಯದಿಂದ ವಿಷ್ಣುವಿನಲ್ಲಿ ಅಂತರ್ಯಾಮಿ ವಿವಕ್ಷೆಯಿಂದ ಕೂಡಿಸಬಹುದು ಹಾಗಾಗಿ ಅಂತಸ್ಥನು ವಿಷ್ಣುವೇ ಆಗಬೇಕು.

ಹಿಂದಿನ ಅಧಿಕರಣದ ಮೇಲಿನ ಆಕ್ಷೇಪ ಹಾಗು ಸಾಮಾಧಾನವೇ ಕ್ರಮವಾಗಿ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಆಕಾಶಸ್ತಲ್ಲಿಂಗಾತ್ ಓಂ ॥ ೧-೧-೮

ಈ ಅಧಿಕರಣದಲ್ಲಿ ಅಧಿಕಶಂಕೆಯನ್ನು ಮಾಡಿ ಹಿಂದಿನ ನ್ಯಾಯದ ಅತಿದೇಶವನ್ನು ಮಾಡುವುದರಿಂದ ಆತಿದೇಶಿಕೀ ಸಂಗತಿ ಇದೆ. ಅಥವಾ ಹಿಂದಿನ ಅಧಿಕರಣ ನ್ಯಾಯವು ಅನ್ವಯಿಸುವುದಿಲ್ಲ ಎಂದು ವಿಲಕ್ಷಣವಾಗಿ ಪೂರ್ವ- ಪಕ್ಷವು ಹುಟ್ಟುವುದರಿಂದ ಪ್ರತ್ಯುದಾಹರಣ ಎಂಬ ಸಂಗತಿ ಇದೆ.

ಛಾಂದೋಗ್ಯದ ಮೊದಲನೇ ಅಧ್ಯಾಯದಲ್ಲಿ 'ಅಸ್ಯ ಲೋಕಸ್ಯ ಕಾ ಗತಿಃ ಆಕಾಶ ಇತಿ ಹೋವಾಚ' ಎಂಬುದಾಗಿ ಶಾಲಾವತ್ಯರ ಪ್ರಶ್ನೆಗೆ ಉತ್ತರವಾಗಿ ಶ್ರುತವಾದ ಆಕಾಶ ಶಬ್ದವು ಭೂತಾಕಾಶ ವಾಚಕವೋ ಅಥವಾ ವಿಷ್ಣು ವಾಚಕವೋ ಎಂಬುದೇ ಸಂದೇಹ. ಆಕಾಶ ಶಬ್ದವು ಆಕಾಶ ಎಂಬ ಅರ್ಥದಲ್ಲಿ ರೂಢವಾದ್ದರಿಂದ ಭೂತಾಕಾಶ ವಾಚಿಯೇ ಎಂಬುದಾಗಿ ಪೂರ್ವಪಕ್ಷ.

ವಿಷ್ಣು ಲಿಂಗಗಳ ವಿರೋಧವಿಲ್ಲ. ಏಕೆಂದರೆ ಲಿಂಗಗಳಿಗಿಂತ ಶ್ರುತಿಯು ಪ್ರಬಲ. ಲಿಂಗವು ದುರ್ಬಲ. ಲಿಂಗಗಳು ನಿರವಕಾಶವಾದ್ದರಿಂದ ರೂಢಿಯನ್ನು ಬಾಧಿಸುತ್ತವೆ, ಎಂಬುದು ಹಿಂದಿನ ಅಧಿಕರಣದಲ್ಲಿಯೇ ಸಿದ್ಧವಾಗಿರು- ವುದರಿಂದ ಈ ಪೂರ್ವಪಕ್ಷವೇ ಹುಟ್ಟುವುದಿಲ್ಲ ಎಂದು ಶಂಕಿಸಬಾರದು, ಏಕೆಂದರೆ ಹಿಂದೆ ಇಂದ್ರಾದಿ ಶಬ್ದಗಳ ಪ್ರವೃತ್ತಿನಿಮಿತ್ತವಾದ ಐಶ್ವರ್ಯಾದಿ- ಗಳು ಇಂದ್ರನಲ್ಲಿ ವಿಷ್ಣುವಿನ ಪ್ರಸಾದದಿಂದ ಪ್ರಾಪ್ತವಾಗುವುದರಿಂದ ಅದು ವಿಷ್ಣುವಿನ ಅಧೀನ. ಹೀಗೆ ತದಧೀನತ್ವ ನ್ಯಾಯದಿಂದ ವಿಷ್ಣುವಿನಲ್ಲಿ ಇಂದ್ರಾದಿ ಶಬ್ದಗಳಿಗೆ ಮಹಾಯೋಗವಿದೆ. ಆದರೆ ಪ್ರಕೃತದಲ್ಲಿ ಆಕಾಶವು ಅಚೇತನವಾದ್ದರಿಂದ ಯಾರ ಅನುಗ್ರಹದ ಅಪೇಕ್ಷೆಯು ಅದಕ್ಕೆ ಇಲ್ಲ. ಹೀಗಾಗಿ ಆಕಾಶ ಶಬ್ದದ ಪ್ರವೃತ್ತಿ ನಿಮಿತ್ತವಾದ ವಿವರತ್ವವೂ ವಿಷ್ಣುವಿನ ಅಧೀನವಲ್ಲ. ಅದು ವಿಷ್ಣುವಿನಲ್ಲಿ ಇಲ್ಲವೂ ಇಲ್ಲ. ಹೀಗಾಗಿ ಆಕಾಶ ಶಬ್ದವು ವಿಷ್ಣು ವಾಚಿಯಾಗಲು ಸಾಧ್ಯವಿಲ್ಲ ಭೂತಾಕಾಶ ವಾಚಕವೇ ಆಗಬೇಕು ಎಂಬ ಅಧಿಕಾಶಂಕಾ ಹುಟ್ಟುತ್ತದೆ.

ಅಥವಾ ಹಿಂದೆ ಯಾವ ಸಮುದ್ರಾಂತಸ್ಥತ್ವ ಲಿಂಗದಿಂದ ಸಿದ್ಧಾಂತವನ್ನು ಮಾಡಲಾಗಿತ್ತೋ ಆ ಲಿಂಗವು ಇಲ್ಲಿಲ್ಲ. ಹಾಗಾಗಿ ಬೇರೆ ಲಿಂಗಗಳಿಂದ ಸಿದ್ಧಾಂತವನ್ನು ಮಾಡಬೇಕು. ಆದರೆ ಇಲ್ಲಿರುವ ಲಿಂಗಗಳು ವಿಷ್ಣುಪರ ಎಂಬುದಾಗಿ ನಿಶ್ಚಯವಾಗಿಲ್ಲ. ಆದ್ದರಿಂದ ನಿರೂಢವಾದ ಆಕಾಶ ಶ್ರುತಿಯು ಪ್ರಬಲವಾಗಿ ಭೂತಾಕಾಶಪರವೇ ಆಗುತ್ತದೆ. ಎಂಬ ಪೂರ್ವಪಕ್ಷ ಹುಟ್ಟಲು ಅವಕಾಶವಿದೆ.

**ಸಿದ್ಧಾಂತ :-** 'ಸ ಏಷ ಪರೋವರೀಯಾನ್ ಉದ್ಗೀಥಃ ಸ ಏಷ ಅನಂತಃ' ಎಂಬುದಾಗಿ ಪರೋವರೀಯಸ್ತ್ವ, ಉದ್ಗೀಥತ್ವ , ಅನಂತತ್ವ ಮೊದಲಾದ ವಿಷ್ಣು ಲಿಂಗಗಳು ಶ್ರುತಿ ಸ್ಮೃತಿಗಳಿಂದ ವಿಷ್ಣು ನಿಷ್ಠವೇ ಆಗಿವೆ ಎಂಬುದಾಗಿ ಸಿದ್ಧವಾಗಿದೆ. ನಿರವಕಾಶವಾಗಿ ಪ್ರಬಲವಾದ ಲಿಂಗಗಳಿಂದ ಆಕಾಶ ಶಬ್ದಕ್ಕೆ ಲೋಕಪ್ರಸಿದ್ಧವಾದ ಅರ್ಥವನ್ನು ಬಿಟ್ಟು ವಿಷ್ಣು ಎಂಬ ಅರ್ಥವನ್ನೇ ಅವಶ್ಯ-ವಾಗಿ ಒಪ್ಪಬೇಕು.

ಆಕಾಶ ಶಬ್ದದ ಪ್ರವೃತ್ತಿ ನಿಮಿತ್ತವಾದ ವಿವರತ್ವವು ವಿಷ್ಣುವಿನಲ್ಲಿ ಇಲ್ಲ ಎಂದು ಹೇಳಬಾರದು ಏಕೆಂದರೆ 'ನಭೋ ದದಾತಿ ಶ್ವಸತಾಂ' ಎಂಬ ಸ್ಮೃತಿಯಿಂದ ಆಕಾಶವೂ ವಿಷ್ಣುವಿನ ಅಧೀನ ಎಂಬುದಾಗಿ ಸಿದ್ಧವಾಗುತ್ತದೆ. ಚೇತನವೇ ಅವನ ಅಧೀನವಾದ ಮೇಲೆ ಜಡವು ಅವಶ್ಯವಾಗಿ ಆಗಲೇಬೇಕು. ಹೀಗೆ ಆಕಾಶದಲ್ಲಿರುವ ವಿವರತ್ವವು ವಿಷ್ಣುವಿನ ಅಧೀನ. ಆ ವಿವರತ್ವವು ವಿಷ್ಣುವಿನಲ್ಲಿ ಇಲ್ಲದೇ ಹೋದರೂ ಅನ್ಯಗತವಾದ ವಿವರತ್ವವನ್ನು ಕುರಿತು ಸ್ವಾತಂತ್ರ್ಯವಿರುವುದರಿಂದ ವಿವರತ್ವವು ವಿಷ್ಣುವಿನ ಅಧೀನ. ಇನ್ನು 'ಸರ್ವ-ಭೂತ ಗುಣೈರ್ಯುಕ್ತಃ' ಎಂಬುದಾಗಿ ಪ್ರಮಾಣವಿರುವುದರಿಂದ ವಿವರತ್ವವು ವಿಷ್ಣುವಿನಲ್ಲಿ ಇದ್ದು, ಆಕಾಶ ಶಬ್ದವು ಮುಖ್ಯವಾಗಿ ವಿಷ್ಣು ವಾಚಕವಾಗಲು ಯಾವ ಅನುಪಪತ್ತಿಯೂ ಇಲ್ಲ.

ಈ ಆಕಾಶವು ವಿಷ್ಣುವಲ್ಲ ಎಂದಾದರೆ ಆನಂದಮಯ ಅಧಿಕರಣದಲ್ಲಿ ಬಂದ ಆಕಾಶವೂ ವಿಷ್ಣುವಲ್ಲ ಎಂದಾಗಲೀ ಎಂಬ ಆಕ್ಷೇಪ ಮತ್ತು ಅದಕ್ಕೆ ಸಮಾಧಾನ. ಇದೇ ಕ್ರಮವಾಗಿ ಪೂರ್ವಪಕ್ಷ ಸಿದ್ಧಾಂತ ಫಲ.

## ।। ಓಂ ಅತಏವ ಪ್ರಾಣಃ ಓಂ ।। ೧-೧-೯

ಈ ಅಧಿಕರಣದಲ್ಲೂ ಆತಿದೇಶಿಕೀ (ಹಿಂದಿನ ನ್ಯಾಯವನ್ನು ಒಪ್ಪಿ ಅಧಿಕ ಶಂಕೆ ಮಾಡಿದರೆ) ಎಂಬ ಸಂಗತಿ ಇದೆ. ಅಥವಾ ಪ್ರತ್ಯುದಾಹರಣ (ಹಿಂದಿನ ನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ ಎಂದು ಶಂಕಿಸಿದ್ದರಿಂದ) ಎಂಬ ಸಂಗತಿ ಇದೆ. ಅಥವಾ ಶ್ರುತಿಯಲ್ಲಿ ಹೇಳಲ್ಪಟ್ಟ ಕ್ರಮದ ಅನುಸಾರವಾಗಿ ಆಕಾಶದ ನಂತರ ಪ್ರಕೃತವಾದದ್ದು ವಾಯು. ಅದರ ವಿಚಾರ ಇಲ್ಲಿ ಮಾಡಲಾಗಿದೆ.

'ತದ್ವೈ ತ್ವಂ ಪ್ರಾಣೋ ಅಭವಃ' ಎಂಬ ತೈತ್ತಿರೀಯ ಆರಣ್ಯಕದ' ಭರ್ತಾ ಸನ್ ಭ್ರಿಯಮಾಣ' ಎಂಬ ಅನುವಾಕದಲ್ಲಿ ಶ್ರುತನಾದ ಪ್ರಾಣನು ಮುಖ್ಯ-ವಾಯುವೋ ವಿಷ್ಣುವೋ ಎಂಬುದೇ ಸಂದೇಹ.

ಪ್ರಾಣ ಶಬ್ದವು ಮುಖ್ಯವಾಯುವಿನಲ್ಲಿ ರೂಢವಾದ್ದರಿಂದ ಪ್ರಾಣ ಶಬ್ದ ವಾಚ್ಯನು ಮುಖ್ಯವಾಯುವೇ ಎಂಬುದು ಪೂರ್ವಪಕ್ಷ.

**ಪ್ರಶ್ನೆ** :- ಹಿಂದಿನ ನ್ಯಾಯವನ್ನು ಅನುಸರಿಸಿ ಇಲ್ಲಿರುವ ನಿರವಕಾಶ ಲಿಂಗ-ಗಳಿಂದ ಪ್ರಾಣ ಶಬ್ದವು ವಿಷ್ಣುವಾಚಕ ಆಗಬಹುದಲ್ಲಾ?

**ಉತ್ತರ** :- ಪ್ರಾಣ ಶಬ್ದಕ್ಕೆ ವಿಷ್ಣುವಿನಲ್ಲಿ ರೂಢಿಯಿಲ್ಲ. ಪ್ರಾಣ ಶಬ್ದದ ಪ್ರವೃತ್ತಿ ನಿಮಿತ್ತವಾದ 'ಪ್ರಾಣನ' - ಜೀವನ ಹೇತುತ್ವವೂ ವಿಷ್ಣುವಿನಲ್ಲಿ ಇಲ್ಲ. ಈ ಜೀವನ ಹೇತುತ್ವವು ಪ್ರಾಣನಲ್ಲಿ (ಮುಖ್ಯವಾಯುವಿನಲ್ಲಿ) ಅನ್ವಯ ವ್ಯತಿರೇಕದಿಂದ ಸಿದ್ಧವಾಗಿದೆ. 'ತತ್ ಪ್ರಾಣೇ ಪ್ರಪನ್ನ ಉದತಿಷ್ಠತ್' 'ಯತ್ ಪ್ರಾಪ್ತಿಃ ಯತ್ ಪರಿತ್ಯಾಗಃ' ಎಂಬ ಶ್ರುತಿ ಸ್ಮೃತಿಗಳಲ್ಲಿ ಹೇಳಲ್ಪಟ್ಟಂತೆ ಮುಖ್ಯ-ವಾಯುವಿದ್ದರೆ ಜೀವನ, ಇಲ್ಲದಿದ್ದರೆ ಇಲ್ಲ ಎಂಬ ಅನ್ವಯ ವ್ಯತಿರೇಕದಿಂದ ಜೀವನ ಹೇತುತ್ವ ಮುಖ್ಯವಾಯುವಿನಲ್ಲಿ ಸಿದ್ಧವಾಗುವುದು.

ಪ್ರತ್ಯಕ್ಷದಿಂದಲೂ ಕೂಡ, ಅನ್ವಯ ವ್ಯತಿರೇಕ ಮೂಲಕವಾಗಿ ಜೀವನ ಹೇತುತ್ವ ಪ್ರಾಣನಲ್ಲಿ ಸಿದ್ಧವಾಗುತ್ತದೆ.

**ಪ್ರಶ್ನೆ** :- ಪ್ರತ್ಯಕ್ಷದಿಂದ ಜೀವನಹೇತುತ್ವವು ಭೂತವಾಯುವಿಗೆ (ಶ್ವಾಸಕ್ಕೆ) ಸಿದ್ಧವಾಗುತ್ತದೆ ಪ್ರಾಣನಲ್ಲಿ ಹೇಗೆ?

**ಉತ್ತರ :-** ಘಟವನ್ನು ಕುರಿತ ಹೇತತ್ವವು ಪ್ರತ್ಯಕ್ಷದಿಂದ ಕುಲಾಲ ಶರೀರಕ್ಕೆ ಸಿದ್ಧವಾದರೂ ತನ್ಮೂಲಕ ಕುಲಾಲನಿಗೂ ಹೇಗೆ ಸಿದ್ಧವಾಗುತ್ತದೋ ಅದೇ ರೀತಿ ಭೂತವಾಯುವು ಮುಖ್ಯಪ್ರಾಣನ ಶರೀರವಾದ್ದರಿಂದ ಭೂತ ವಾಯುವಿನಲ್ಲಿ ಸಿದ್ಧವಾದ ಜೀವನ ಹೇತುತ್ವವು ಮುಖ್ಯಪ್ರಾಣ-ನಲ್ಲಿಯೂ ಸಿದ್ಧವಾಗುತ್ತದೆ.

ಹೀಗೆ ಯೌಗಿಕವಾಗಿಯೂ ಪ್ರಾಣ ಶಬ್ದವು ವಿಷ್ಣುವಿನಲ್ಲಿ ಕೂಡುವುದಿಲ್ಲ-ವಾದ್ದರಿಂದ ಪ್ರಾಣನು ವಿಷ್ಣವಾಗಲು ಸಾಧ್ಯವಿಲ್ಲ.

ಹಿಂದಿನಂತೆ ಇಲ್ಲಿ ನಿರವಕಾಶವಾದ ವಿಷ್ಣು ಲಿಂಗಗಳು ಇಲ್ಲ. ಹಾಗಾಗಿ ಈ ಪೂರ್ವಪಕ್ಷ ಹುಟ್ಟುತ್ತದೆ.

**ಸಿದ್ಧಾಂತ :-** ಪ್ರಾಣಶಬ್ದವಾಚ್ಯನು ವಿಷ್ಣುವೇ. 'ಅದ್ಭ್ಯಃ ಸಂಭೂತಃ' ಎಂಬ ಅನುವಾಕದಲ್ಲಿ ಶ್ರುತವಾದ 'ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬಲ್ಲಿ ಶ್ರೀ ಲಕ್ಷ್ಮೀಪತಿತ್ವ ಎಂಬ ನಿರವಕಾಶವಾದ ವಿಷ್ಣು ಲಿಂಗವಿರುವುದರಿಂದ ಲೋಕಪ್ರಸಿದ್ಧವಾದ ರೂಢಿಯನ್ನು ಕೈಬಿಡಬೇಕು.

**ಪ್ರಶ್ನೆ :-** ಹಿಂದಿನ ಅನುವಾಕದಲ್ಲಿ ಶ್ರುತವಾದ ಲಕ್ಷ್ಮೀಪತಿತ್ವ ಎಂಬ ಲಿಂಗ-ದಿಂದ ಈ ಅನುವಾಕದಲ್ಲಿ ಇರುವ ಪ್ರಾಣ ಶಬ್ದಕ್ಕೆ ವಿಷ್ಣು ಎಂಬ ಅರ್ಥವನ್ನು ಹೇಗೆ ಮಾಡುವುದು?

**ಉತ್ತರ :-** ಈ ಎರಡೂ ಅನುವಾಕಗಳೂ ಸಮಾನಾರ್ಥಕ.

ಹೇಗೆಂದರೆ; ಹ್ರೀಶ್ಚತೇ ಎಂಬುದಾಗಿ ಹಿಂದಿನ ಅನುವಾಕದಲ್ಲಿ ತೇ ಎಂಬ ಯುಷ್ಮದ್ ಶಬ್ದದಿಂದ ಉಕ್ತನಾದವನನ್ನು ಈ ಅನುವಾಕದಲ್ಲಿ ತದ್ವೈ ತ್ವಂ ಪ್ರಾಣ ಎಂಬಲ್ಲಿನ ತ್ವಂ ಎಂಬ ಯುಷ್ಮದ್ ಶಬ್ದದಿಂದ ಪರಾಮರ್ಶ ಮಾಡಲಾಗಿದೆ.

'ಭರ್ತಾ ಸನ್' ಎಂಬ ಅನುವಾಕದಲ್ಲಿ 'ತಮೇವ ಮೃತ್ಯುಂ ಅಮೃತಂ ತಮಾಹುಃ' ಎಂಬಲ್ಲಿ ಅಮೃತತ್ವವೇ ಮೊದಲಾದ ವಿಷ್ಣು ಲಿಂಗಗಳು ಶ್ರುತವಾಗಿವೆ.

'ತತ್‌ಪ್ರಾಣ' ಎಂಬ ಅನ್ವಯ ವ್ಯತಿರೇಕ ಬೋಧಕವಾದ ಶ್ರುತಿಯಲ್ಲಿರುವ ಪ್ರಾಣ ಶಬ್ದವು' ಪ್ರಾಣಃ ತಥಾನುಗಮಾತ್' ಎಂಬ ಸೂತ್ರೋಕ್ತ ನ್ಯಾಯದ ಅನುಸಾರವಾಗಿ ವಿಷ್ಣುಪರವೇ ಆಗುತ್ತದೆ.

ಅನ್ವಯ ವ್ಯೆತಿರೇಕದಿಂದ ಸಿದ್ಧವಾದ ಜೀವನ ಹೇತುತ್ವವೂ ವಿಷ್ಣು-ವಿನಲ್ಲಿಯೂ ಬರುತ್ತದೆ. ಭೂತ ವಾಯುವು ಮುಖ್ಯಪ್ರಾಣನಿಗೆ ಶರೀರವಾದಂತೆ ಮುಖ್ಯಪ್ರಾಣನು ವಿಷ್ಣುವಿನ ಶರೀರವಾದ್ದರಿಂದ ಅನ್ವಯ ವ್ಯತಿರೇಕವೂ ವಿಷ್ಣುವಿಗೆ ಸಂಬಂಧಪಟ್ಟದ್ದಾಗಿ ಅವನಲ್ಲಿ ಜೀವನ ಹೇತುತ್ವವು ಸಿದ್ಧಿಸುವುದು.

ಇನ್ನು ವಾಯುವಿನಲ್ಲಿರುವ ಜೀವನ ಹೇತುತ್ವವು ವಿಷ್ಣುವಿನ ಅಧೀನವಾದ್ದ-ರಿಂದ ತದಧೀನತ್ವ ನ್ಯಾಯದಿಂದ ವಿಷ್ಣುವಿನಲ್ಲಿ ಪ್ರಾಣಶಬ್ದಕ್ಕೆ ಮಹಾ-ಯೋಗವೇ ಇದೆ.

ಪ್ರಾಣ ಶಬ್ದವು 'ಪ್ರಾಣಸ್ಯ ಪ್ರಾಣಃ' ಎಂಬ ಶ್ರುತಿಯಲ್ಲಿ ವಿಷ್ಣು ಎಂಬ ಅರ್ಥದಲ್ಲಿಯೇ ಪ್ರಯೋಗಿಸಲ್ಪಟ್ಟಿದೆ.

ಹೀಗೆ ಯೋಗ ಮತ್ತು ರೂಢಿ ಇವೆರಡರಿಂದಲೂ ವಿಷ್ಣುವೇ ಪ್ರಾಣಪದ ವಾಚ್ಯನು.

'ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬಲ್ಲಿ ಲಕ್ಷ್ಮೀಪತಿತ್ವವು ಹೇಳಲ್ಪಟ್ಟಿದ್ದರೂ ಶ್ರೀಪತಿತ್ವವು ಹೇಳಲ್ಪಟ್ಟಿಲ್ಲ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬ ಭಾಷ್ಯದಲ್ಲಿ ಹೇಳಲ್ಪಟ್ಟ ಇದೇ ರೀತಿಯ ಇನ್ನೊಂದು ಶ್ರುತಿಯಿಂದ 'ಹ್ರೀ' ಶಬ್ದಕ್ಕೆ 'ಶ್ರೀ' ಎಂಬ ಅರ್ಥವನ್ನೇ ಮಾಡಬೇಕೆಂದು ತಿಳಿಯುತ್ತದೆ.

ಪ್ರಾಣ ಶಬ್ದವಾಚ್ಯನು ಅನ್ಯನಾದರೆ ಪ್ರಾಣನಿಗೆ ಹೇಳಲ್ಪಟ್ಟ ಪೂರ್ಣಾನಂದ ಎಂಬ ಅರ್ಥವುಳ್ಳ ಮಹಾಭೋಗವು ವಿಷ್ಣುವಿಗಿಂತ ಅನ್ಯನಿಗೆ ಸಿದ್ಧವಾಗಿ ಪೂರ್ಣಾನಂದ ಎಂಬ ಅರ್ಥವುಳ್ಳ ಆನಂದಮಯನೂ ವಿಷ್ಣುವಿಗಿಂತ ಅನ್ಯನೇ ಆಗಬೇಕು ಎಂಬ ಆಕ್ಷೇಪ ಮತ್ತು ಅದಕ್ಕೆ ಸಮಾಧಾನ ಇದೇ ಕ್ರಮವಾಗಿ ಪೂರ್ವಪಕ್ಷ ಮತ್ತು ಸಿದ್ಧಾಂತದ ಪ್ರಯೋಜನ.

## ॥ ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ ॥ ೧-೧-೧೦

ಈ ಅಧಿಕರಣದಲ್ಲೂ ಪ್ರತ್ಯುದಾರಣ ಸಂಗತಿ ಹಾಗು ಶ್ರೌತ ಕ್ರಮವನ್ನು ಅನುಸರಿಸುವ ಸಂಗತಿ ಇದೆ.

'ವಿ ಮೇ ಕರ್ಣಾ ಪತಯತೋ ವಿ ಚಕ್ಷುರ್ವೀದಂ ಜ್ಯೋತಿಃ' ಎಂಬ ಋಗ್ವೇದದ ಅಗ್ನಿಸೂಕ್ತದಲ್ಲಿ ಶ್ರುತವಾದ ಜ್ಯೋತಿಯು ಅಗ್ನಿಯೋ ಅಥವಾ ವಿಷ್ಣುವೋ ಎಂಬುದೇ ಸಂದೇಹ. ಅಗ್ನಿ ಎಂಬುದೇ ಪೂರ್ವಪಕ್ಷ.

ಜ್ಯೋತಿಃ ಶಬ್ದವು ಅಗ್ನಿ ಎಂಬ ಅರ್ಥದಲ್ಲಿ ರೂಢವಾಗಿದೆ. ಜ್ಯೋತಿ ಶಬ್ದಕ್ಕೆ ತಮೋ ವಿರೋಧಿ ಎಂಬ ಅರ್ಥವೇ ಇರುವುದಾದರೂ ಹೃದಯ ಗುಹಾನಿಹಿತತ್ವ ಎಂಬ ಲಿಂಗ ಇರುವುದರಿಂದ ಮತ್ತು 'ತ್ವಾಮಗ್ನೇ ತಮಸಿ' ಎಂಬುದಾಗಿ ಅಗ್ನಿ ಶಬ್ದದ ಸಾನ್ನಿಧ್ಯ ಇರುವುದರಿಂದ ಇಲ್ಲಿರುವ ಜ್ಯೋತಿಃ ಶಬ್ದಕ್ಕೆ ಅಗ್ನಿ ಎಂಬ ಅರ್ಥವೇ ಸಿದ್ಧಿಸುವುದು.

**ಪ್ರಶ್ನೆ** :- ಹಿಂದಿನ ಅಧಿಕರಣದಲ್ಲಿ ಹೇಗೊ ಹಾಗೆ ಇಲ್ಲಿಯೂ ಕೂಡ ನಿರವಕಾಶಲಿಂಗದಿಂದ ಶ್ರುತಿಯು ಬಾಧಿತವಾಗಿ ಈ ಪೂರ್ವಪಕ್ಷವು ಹುಟ್ಟುವುದಿಲ್ಲವಲ್ಲ?

**ಉತ್ತರ** :- ಹಿಂದಿನ ಅಧಿಕರಣಕ್ಕೂ ಈ ಅಧಿಕರಣಕ್ಕೂ ವ್ಯತ್ಯಾಸವಿದೆ. ಹಿಂದೆ ಬಂದ ಪ್ರಾಣ ಶಬ್ದವು ವಾಯುಸೂಕ್ತದಲ್ಲಿ ಬಂದಿರುವ ಪ್ರಾಣ ಶಬ್ದವಲ್ಲ. ಆದರೆ ಇಲ್ಲಿರುವ ಜ್ಯೋತಿಃ ಶಬ್ದವು ಅಗ್ನಿಸೂಕ್ತಗತವಾಗಿದೆ. ಹಾಗಾಗಿ ಜ್ಯೋತಿಃ ಶಬ್ದಕ್ಕೆ ಸೂಕ್ತಾನುಗ್ರಹವಿದೆ. ಹಿಂದೆ ಸಮನ್ವಯ ಮಾಡಲ್ಪಟ್ಟ ಪ್ರಾಣ ಶಬ್ದಕ್ಕೆ ಸೂಕ್ತಾನುಗ್ರಹವಿಲ್ಲ.

**ಪ್ರಶ್ನೆ** :- ಜ್ಯೋತಿಃ ಶಬ್ದವು ಭೂತಪರವೋ ದೇವತಾಪರವೋ ? (ಅಗ್ನಿ) ಭೂತಪರವಾದರೆ ಆಕಾಶಾಧಿಕರಣದ ನ್ಯಾಯದಿಂದಲೇ ಇದೂ ಕೂಡ ವಿಷ್ಣುವಿನಲ್ಲಿ ಸಾವಕಾಶ ಎಂದಾಗುವುದು. ದೇವತಾಪರವಾದರೆ ಅಂತರ್ಯಾ-ಮ್ಯಧಿಕರಣ ನ್ಯಾಯದಿಂದಲೇ ವಿಷ್ಣುಪರವಾಗುವುದು. ಜ್ಯೋತಿಃ ಶಬ್ದವು ವಿಷ್ಣುಪರ ಎಂದು ಸಿದ್ಧವಾದ ಮೇಲೆ ಆ ಶಬ್ದವಿರುವ ಅಗ್ನಿಸೂಕ್ತವೂ ಕೂಡ ವಿಷ್ಣುಪರ ಎಂದೇ ಸಿದ್ಧವಾಗುವುದು. ಹೀಗೆ ಜ್ಯೋತಿಃಶಬ್ದವು ಮತ್ತು

ಅಗ್ನಿಸೂಕ್ತವು ಸಾವಕಾಶ ಎಂದು ಸಿದ್ಧವಾದರೆ ಹೃದಯಗುಹಾನಿಹಿತತ್ವ ಎಂಬ ನಿರವಕಾಶ ಲಿಂಗದಿಂದ ಶ್ರುತಿ ಸೂಕ್ತಗಳಿಗೆ ಬಾಧವನ್ನು ಹೇಳಬಹುದು. ಸಾವಾಕಾಶ ನಿರವಕಾಶಗಳ ಮಧ್ಯದಲ್ಲಿ ನಿರವಕಾಶವೇ ಪ್ರಬಲ.

**ಪರಿಹಾರ** :- ಹೃದಯಗುಣನಿಹಿತತ್ವ ಎಂಬ ಲಿಂಗವೂ ಕೂಡ ಜಾಠರಾಗ್ನಿ-ಯಲ್ಲಿ ಸಾವಕಾಶವೇ ಆಗಿದೆ. ಶ್ರುತಿ ಲಿಂಗಗಳ ಮಧ್ಯೆ ಶ್ರುತಿಯು ಸ್ವಭಾವತಃ ಪ್ರಬಲ ಹೀಗೆ ಪ್ರಬಲವಾದ ಶ್ರುತಿ (ಜ್ಯೋತಿ)ಯಿಂದಲೇ ಸಾವಕಾಶವಾದ ಲಿಂಗಕ್ಕೆ ಬಾಧವನ್ನು ಹೇಳಬಹುದು. ಮತ್ತು ಅಗ್ನಿ ಸೂಕ್ತವೂ ವಿಷ್ಣುಪರ ಎಂದು ಹೇಳಿದರೆ 'ಇದು ಅಗ್ನಿಸೂಕ್ತ; 'ಇದು ವಾಯುಸೂಕ್ತ' ಎಂಬ ವ್ಯವಸ್ಥೆಯೇ ಕೂಡುವುದಿಲ್ಲ.

**ಪ್ರಶ್ನೆ** :- 'ಅಭಿವ್ಯಕ್ತೇಃ ಇತಿ ಆಶ್ಮರಥ್ಯಃ' ಎಂಬಲ್ಲಿ ಹೇಳಿರುವ ನ್ಯಾಯದಿಂದ ಅಗ್ನಿಸೂಕ್ತ ವಾಯುಸೂಕ್ತ ಎಂಬ ವ್ಯವಸ್ಥೆಯು ಕೂಡುತ್ತದೆಯಲ್ಲಾ?

**ಉತ್ತರ** :- 'ಇದು ಅಗ್ನಿಸೂಕ್ತ ವಿಷ್ಣು ಸೂಕ್ತವಲ್ಲ' ಎಂಬ ಲೋಕಪ್ರಸಿದ್ಧ-ವಾದ ವ್ಯವಹಾರವನ್ನು ಕೂಡಿಸಲು ಸಾಧ್ಯವಿಲ್ಲ. ಹೀಗೆ ಅಗ್ನಿಸೂಕ್ತವು ನಿರವ-ಕಾಶವಾದ್ದರಿಂದ ಆ ಸೂಕ್ತಗತವಾದ ಜ್ಯೋತಿಃಶಬ್ದವು ಅಗ್ನಿಪರವೇ ಎಂದು ಹೇಳಬೇಕು.

**ಸಿದ್ಧಾಂತ** :- 'ವಿ ಮೇ ಕರ್ಣಾ ಪತಯತೋ' ಎಂಬಲ್ಲಿ ಅಪರಿಚ್ಛಿನ್ನ ವೈಭವರೂಪವಾದ ಕರ್ಣಾದಿ ವಿದೂರತ್ವ ಎಂಬ ಲಿಂಗವು ಹೇಳಲ್ಪಟ್ಟಿದೆ. ಇದು ವಿಷ್ಣು ವಿನಲ್ಲಿ ಮಾತ್ರ ಇರುವ ಲಿಂಗ. ಹೀಗಾಗಿ ನಿರವಕಾಶ. ಜ್ಯೋತಿಃ ಶಬ್ದದ ಪ್ರವೃತ್ತಿ ನಿಮಿತ್ತವಾದ ಪ್ರಕಾಶತ್ವವು ವಿಷ್ಣುವಿನಲ್ಲಿದೆ. ಅಗ್ನ್ಯಾದಿಗಳಲ್ಲಿ ಇರುವ ಪ್ರವೃತ್ತಿನಿಮಿತ್ತವು ವಿಷ್ಣುವಿನ ಅಧೀನವಾದ್ದರಿಂದ ತದಧೀನತ್ವ ನ್ಯಾಯದಿಂದ ವಿಷ್ಣುವಿನಲ್ಲಿ ಮಹಾಯೋಗವು ಇದೆ. 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಎಂಬಲ್ಲಿ ಜ್ಯೋತಿಃ ಶಬ್ದವು ವಿಷ್ಣು ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಅಲ್ಲಿ ಬಂದಿರುವ ಜ್ಯೋತಿ ಶಬ್ದವು ವಿಷ್ಣುಪರ ಎಂಬುದನ್ನು 'ಜ್ಯೋತಿಷ್ಯೈಕೇಷಾಂ' ಎಂಬ ಸೂತ್ರದಲ್ಲಿ ಮುಂದೆ ಸಮರ್ಥನೆ ಮಾಡಲಿದ್ದಾರೆ.

ಇದು ವಿಷ್ಣು ಸೂಕ್ತವಲ್ಲ ಎಂಬ ಪ್ರಸಿದ್ಧಿಯೂ ಅಜ್ಞಾನ ಮೂಲಕವಾದದ್ದು. ಹೀಗಾಗಿ ಜ್ಯೋತಿಃಶಬ್ದ ಮತ್ತು ಅಗ್ನಿಸೂಕ್ತ ಸಾವಕಾಶವಾಗುತ್ತವೆ. ನಿರವಕಾಶ ವಿಷ್ಣು ಲಿಂಗದಿಂದ ಸಾವಾಕಾಶವಾದ ಶ್ರುತಿ ಸೂಕ್ತಗಳಿಗೆ ಬಾಧವನ್ನು ಹೇಳಬಹುದು. ಹೀಗೆ ಯೋಗ ಮತ್ತು ರೂಢಿಯಿಂದ ಜ್ಯೋತಿಃಶಬ್ದವು ವಿಷ್ಣುಪರವೇ ಆಗಿದೆ. ಅಗ್ನಿಸೂಕ್ತವು ಕೂಡ ವಿಷ್ಣುಪರವೇ.

ಜ್ಯೋತಿಃಶಬ್ದವು ಅಗ್ನಿಪರವಾದರೆ ಹೃದಯ ಗುಹಾನಿಹಿತತ್ವವು ವಿಷ್ಣುವಿ-ಗಿಂತ ಇತರನಾದ ಅಗ್ನಿಗೇ ಸಿದ್ಧವಾಗಿ 'ಯೋ ವೇದ ನಿಹಿತಂ ಗುಹಾಯಾಂ' ಎಂಬುದಾಗಿ ಆನಂದಮಯನಿಗೆ ಹೇಳಲ್ಪಟ್ಟ ಹೃದಯ ಗುಹಾನಿಹಿತತ್ವವೂ ಇತರನಿಗೆಂದು ಹೇಳಬೇಕು, ಎಂಬ ಆಕ್ಷೇಪ ಮತ್ತು ಅದರ ಸಮಾಧಾನ. ಇದೇ ಕ್ರಮವಾಗಿ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನ.

## ॥ ಓಂ ಛಂದೋಭಿಧಾನಾನ್ನೇತಿ ಚೇತ್ ನ ತಥಾ ಚೇತೋರ್ಪಣ ನಿಗದಾತ್ತಥಾ ಹಿ ದರ್ಶನಮ್ ಓಂ ॥ ೧-೧-೧೧

ಈ ಅಧಿಕರಣವು, ಪೂರ್ವ ಅಧಿಕರಣ ಸಿದ್ಧಾಂತದ ಮೇಲಿನ ಆಕ್ಷೇಪದಿಂದ ಹೊರಡುವುದರಿಂದ ಆಕ್ಷೇಪಿಕೀ ಎಂಬ ಸಂಗತಿಯಿದೆ. ಅಥವಾ ಹಿಂದಿನ ನ್ಯಾಯವು ಇಲ್ಲಿ ಅನ್ವಯಿಸುವುದಿಲ್ಲ ಎಂದು ಶಂಕಿಸುವುದರಿಂದ ಪ್ರತ್ಯುದಾ-ಹರಣ ಎಂಬ ಸಂಗತಿಯಿದೆ.

ಛಾಂದೋಗ್ಯದ ಮೂರನೇ ಅಧ್ಯಾಯದಲ್ಲಿ ಬಂದಿರುವ 'ಗಾಯತ್ರೀ ವಾ ಇದಂ ಸರ್ವಂ ಯದಿದಂ ಕಿಂಚ ವಾಗ್ವೈ ಗಾಯತ್ರೀ' ಎಂಬಲ್ಲಿ ಶ್ರುತವಾಗಿರುವ ಗಾಯತ್ರಿಯು ಇಪ್ಪತ್ತನಾಲ್ಕು ವರ್ಣಗಳಿಂದ ಕೂಡಿರುವ ಆದ್ದರಿಂದಲೇ ಗಾಯತ್ರೀ, ಎಂಬ ಹೆಸರುಳ್ಳ ಮಂತ್ರ ವಿಶೇಷವೋ ಅಥವಾ ವಿಷ್ಣುವೋ ಎಂಬುದೇ ಸಂದೇಹ.

ಗಾಯತ್ರೀ ಎಂಬುದು ಆ ಛಂದಸ್ಸಿನ ಮಂತ್ರವೇ ಎಂದು ಪೂರ್ವಪಕ್ಷ. ಗಾಯತ್ರೀ ಶಬ್ದವು ಛಂದಸ್ ಎಂಬ ಅರ್ಥದಲ್ಲಿ ರೂಢವಾದ್ದರಿಂದ.

**ಪ್ರಶ್ನೆ** :- ಜ್ಯೋತಿರಧಿಕರಣದಲ್ಲಿ ಹೇಗೋ ಹಾಗೇ ಇಲ್ಲಿರುವ ವಿಷ್ಣು-ಲಿಂಗಗಳಿಂದ ಗಾಯತ್ರೀ ಶ್ರುತಿಗೆ ಬಾಧ ಹೇಳಬಹುದಲ್ಲಾ?

**ಪರಿಹಾರ** :- (೧) ವಿಷ್ಣುವಿನಲ್ಲಿ ಪ್ರಸಿದ್ಧವಾದ ಶಬ್ದಗಳನ್ನು ಬಿಟ್ಟು ಅಪ್ರಸಿದ್ಧವಾದ 'ಗಾಯತ್ರೀ' ಎಂಬ ಶಬ್ದವನ್ನು ಪ್ರಯೋಗ ಮಾಡಿರುವುದ-ರಲ್ಲಿ ಯಾವ ಪ್ರಯೋಜನವೂ ಇಲ್ಲ.

(೨) ಹಿಂದೆ 'ಜ್ಯೋತಿ' ಎಂಬ ಒಂದೇ ಶಬ್ದವಿದ್ದದ್ದು. ಅದಕ್ಕೆ ಲಿಂಗದಿಂದ ಬಾಧವನ್ನು ಹೇಳಿದ್ದು ಸರಿ, ಆದರೆ ಇಲ್ಲಿ ಗಾಯತ್ರೀ ಶಬ್ದದ ಜೊತೆಗೆ 'ವಾಕ್', 'ಪೃಥಿವೀ' ಇತ್ಯಾದಿ ಅನೇಕ ಶಬ್ದಗಳಿವೆ. ಆ ಎಲ್ಲಾ ಶಬ್ದಗಳಿಗೂ ಬಾಧ ಹೇಳುವುದು ಸರಿಯಲ್ಲ.

(೩) ವಿಷ್ಣುವಿನಲ್ಲಿ ಗಾಯತ್ರೀ ಶಬ್ದಕ್ಕೆ ರೂಢಿಯಿಲ್ಲ. ಯೋಗವಿದ್ದರೂ 'ಯೋಗಾತ್ ರೂಢಿರ್ಬಲೀಯಸೀ' ಎಂಬ ನ್ಯಾಯದಿಂದ ಯೋಗವು ಅಪ್ರಧಾನವಾಗುತ್ತದೆ.

(೪) ಜ್ಯೋತಿರಾದಿ ಶಬ್ದಗಳಲ್ಲಿ ಇದ್ದಂತೆ, ವಿಷ್ಣುವಿನಲ್ಲಿ 'ಗಾಯತ್ರೀ' ಶಬ್ದದ ಮಹಾಯೋಗವೂ ಇಲ್ಲ. ಗಾಯತ್ರೀ ಎಂಬುದು ವೇದ ಮಂತ್ರ. ಅದು ನಿತ್ಯ. ನಿತ್ಯವಾದದ್ದು ಯಾರ ಅಧೀನವೂ ಅಲ್ಲ. ಹೀಗಾಗಿ ತದಧೀನತ್ವ ನ್ಯಾಯವನ್ನು ಆಶ್ರಯಿಸಿ ಮಹಾಯೋಗ ಹೇಳಲು ಸಾಧ್ಯವಿಲ್ಲ.

**ಪ್ರಶ್ನೆ** :- ಹಿಂದಿನ ಅಧಿಕರಣದಲ್ಲಿ ಜ್ಯೋತಿಃ ಶಬ್ದವು ವಿಷ್ಣುಪರ ಎಂಬುದಾಗಿ ನಿರ್ಣಯಿಸಲಾಗಿದೆ. ಅದೇ ಜ್ಯೋತಿಃ ಶಬ್ದವು ಈ ಪ್ರಕರಣದಲ್ಲೂ ಬಂದಿದೆ. 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' ಎಂಬ ಮುಂದಿನ ವಾಕ್ಯದಲ್ಲಿ ಜ್ಯೋತಿಃ ಶಬ್ದವಿದೆ. ವಿಷ್ಣುಪರ ಎಂದು ನಿರ್ಣೀತವಾದ ಜ್ಯೋತಿಃ ಶಬ್ದದಿಂದ ಹಿಂದಿನ ವಾಕ್ಯದಲ್ಲಿ ಬಂದ ಗಾಯತ್ರೀ ಶಬ್ದವೂ ವಿಷ್ಣುಪರವೇ ಆಗಬೇಕು ಎಂದು ಹೇಳಬಹುದಲ್ಲಾ ?

**ಪರಿಹಾರ** :- (೧) ಆ ಒಂದು ಜ್ಯೋತಿಃ ಶಬ್ದದಿಂದ 'ಗಾಯತ್ರೀ' 'ವಾಕ್', 'ಪೃಥಿವೀ' ಹೀಗೆ ಅನೇಕ ಶಬ್ದಗಳಿಗೆ ಬಾಧವನ್ನು ಹೇಳಲು ಸಾಧ್ಯವಿಲ್ಲ.

(೨) 'ತಜೋವೈ ಬ್ರಹ್ಮವರ್ಚಸಂ ಗಾಯತ್ರೀ' ಎಂಬಲ್ಲಿ ಜ್ಯೋತಿಃ ಶಬ್ದ ಪರ್ಯಾಯವಾದ ತೇಜಃ ಶಬ್ದವು ಶ್ರುತವಾಗಿದೆ. ಇಲ್ಲಿ ತೇಜಸ್ ಎಂದರೆ ಗಾಯತ್ರೀ. ಹೀಗೆ ಜ್ಯೋತಿಃ ಶಬ್ದವು 'ಗಾಯತ್ರೀ' ಎಂಬ ಅರ್ಥದಲ್ಲೇ ಸಾವಕಾಶವಾಯಿತು. ಹೀಗೆ ಜ್ಯೋತಿಃ ಶಬ್ದಕ್ಕೆ 'ಗಾಯತ್ರೀ' ಎಂಬ ಅರ್ಥವಾದ ಮೇಲೆ ಹಿಂದಿನ ಅಧಿಕರಣದಲ್ಲಿ ಬಂದ ಜ್ಯೋತಿಃ ಶಬ್ದಕ್ಕೂ 'ಗಾಯತ್ರೀ' ಎಂದೇ ಅರ್ಥಮಾಡುವುದು ಉಚಿತವಾಗುತ್ತದೆ.

(೩) 'ತ್ರಿಪಾದಸ್ಯಾಮೃತಂ ದಿವಿ' ಎಂಬುದಾಗಿ ಗಾಯತ್ರೀಯು 'ದ್ಯುಸ್ಥ' (ದ್ಯುಲೋಕಸ್ಥಿತ) ಎಂದು ಹೇಳಿದ್ದಾರೆ. ಜ್ಯೋತಿಯನ್ನಾದರೋ 'ಯದತಃ ಪರೋ ದಿವೋ ಜ್ಯೋತಿಃ' ಎಂಬುದಾಗಿ 'ದಿವಃ ಪರ' ಎಂದು (ದ್ಯುಲೋಕದ ಆಚೆ ಇರುವುದು) ಹೇಳಿದ್ದಾರೆ. ಇವೆರಡೂ ಒಂದೇ ಆಗಲು ಸಾಧ್ಯವಿಲ್ಲ.

(೪) ಹಿಂದಿನ ಅಧಿಕರಣದಲ್ಲಿ ಬಂದ ಜ್ಯೋತಿಸ್ಸಿಗೆ ಕರ್ಣಾದಿವಿದೂರತ್ವವನ್ನು ಹೇಳಿದ್ದಾರೆ. ಅದು ವಿಷ್ಣು ಲಿಂಗವಾದ್ದರಿಂದ ಆ ಜ್ಯೋತಿಃ ವಿಷ್ಣುವಾಗಬಹುದು. ಆದರೆ ಇಲ್ಲಿರುವ ಜ್ಯೋತಿಸ್ಸಿಗೆ 'ತದೇತದ್ದೃಷ್ಟಂ ಚ ಶ್ರುತಂ ಚ' ಎಂದು ಕರ್ಣಾದಿವಿರೂರತ್ವಕ್ಕೆ ವಿರುದ್ಧವಾದ ದೃಷ್ಟತ್ವ, ಶ್ರುತತ್ವ ಮೊದಲಾದವುಗಳನ್ನು ಹೇಳಿದ್ದಾರೆ. ಹೀಗಾಗಿ ಹಿಂದಿನ ಜ್ಯೋತಿಯು ಈ ಜ್ಯೋತಿಯು ಒಂದೇ ಆಗಲು ಸಾಧ್ಯವಿಲ್ಲ. ಅದು ವಿಷ್ಣುವಾದರೂ ಇದು ವಿಷ್ಣುವಲ್ಲ.

ಹೇಗೆ ಇಲ್ಲಿರುವ ಜ್ಯೋತಿಃ ಶಬ್ದವು ವಿಷ್ಣುಪರವಲ್ಲವಾದ್ದರಿಂದ, ಆ ಜ್ಯೋತಿಃ-ಶಬ್ದವನ್ನು ಇಟ್ಟುಕೊಂಡು ಗಾಯತ್ರೀ ವಿಷ್ಣುವಾಗಲಿ ಎಂದು ಹೇಳಬಾರದು.

**ಸಿದ್ಧಾಂತ :-** ಗಾಯತ್ರೀ ಶಬ್ದವಾಚ್ಯನಾದವನು ವಿಷ್ಣುವೇ. ಏಕೆಂದರೆ,

(೧) 'ತತೋ ಜ್ಯಾಯಾಂಶ್ಚ ಪುರುಷಃ' 'ಯದ್ವೈ ತದ್ಬ್ರಹ್ಮ' 'ಏತಾಮೇವ ಬ್ರಹ್ಮೋಪನಿಷದಂ ವೇದ' ಎಂದು ಈ ಪ್ರಕರಣದಲ್ಲಿ ವಿಷ್ಣುವಾಚಕಗಳಾದ 'ಪುರುಷ' 'ಬ್ರಹ್ಮ' ಎಂಬ ಅನೇಕ ಶಬ್ದಗಳಿವೆ.

(೨) 'ಗಾಯತ್ರೀ' ಶಬ್ದದ ಪ್ರವೃತ್ತಿ ನಿಮಿತ್ತವು 'ಗಾಯತಿ ಚ ತ್ರಾಯತಿ ಚ' ಎಂಬ ವ್ಯುತ್ಪತ್ತಿಯಿಂದ ಗಾನತ್ರಾಣಕರ್ತೃತ್ವ ಎಂಬುದಾಗಿದೆ. ಅದರರ್ಥ ಅಶೇಷವೇದೋಚ್ಚಾರಣ ಕರ್ತಾ ಹಾಗು ರಕ್ಷಕ ಎಂದು. ಇದು

ವಿಷ್ಣುವಿನಲ್ಲಿದೆ. ಹೀಗಾಗಿ ವಿಷ್ಣುವು ಯೋಗವೃತ್ತಿಯಿಂದ ಗಾಯತ್ರೀ ಶಬ್ದ-ವಾಚ್ಯನಾಗಲು ಶಕ್ಯವಿದೆ.

(೩) 'ಪಾದೋಸ್ಯ ವಿಶ್ವಾ ಭೂತಾನಿ' ಎಂಬಲ್ಲಿ ಭೂತಾದಿಪಾದತ್ವ ಎಂಬ ಲಿಂಗವನ್ನು ಹೇಳಿದ್ದಾರೆ. ಅದೇ ರೀತಿ 'ಏತಾಮೇವ ನಾತಿಶೀಯಂತ' ಎಂಬಲ್ಲಿ 'ಸರ್ವೋತ್ತಮತ್ವ' ಎಂಬ ಲಿಂಗವನ್ನು ಹೇಳಿದ್ದಾರೆ. ಹೀಗೆ ಅನೇಕ ವಿಷ್ಣು ಲಿಂಗಗಳು ಈ ಪ್ರಕರಣದಲ್ಲಿವೆ.

(೪) ಪ್ರಸಿದ್ಧ ಶಬ್ದವನ್ನು ಬಿಟ್ಟು ಅಪ್ರಸಿದ್ಧ ಶಬ್ದವನ್ನೇಕೆ ಹೇಳಿದ್ದಾರೆ ಎಂದರೆ. ಪ್ರತಿಯೊಂದು ಶಬ್ದದ ಪ್ರವೃತ್ತಿನಿಮಿತ್ತವೂ ವಿಷ್ಣುವಿನ ಒಂದು ಗುಣವೇ ಆಗಿದೆ. ಹೊಸ ಹೊಸ ಶಬ್ದಗಳನ್ನು ಹೇಳಿದಾಗ ಆ ಆ ಶಬ್ದಗಳ ಪ್ರವೃತ್ತಿ-ನಿಮಿತ್ತವಾದ ಗುಣಗಳನ್ನು ವಿಷ್ಣುವಿನಲ್ಲಿ ಉಪಾಸನೆ ಮಾಡಲು ಅನುಕೂಲ-ವಾಗುತ್ತದೆ. ಈ ದೃಷ್ಟಿಯಿಂದ ಅಪ್ರಸಿದ್ಧ ಶಬ್ದಗಳ ಪ್ರಯೋಗವನ್ನು ಮಾಡುತ್ತಾರೆ.

(೫) ಗಾಯತ್ರೀ ಶಬ್ದವು ಛಂದಸ್ಸಿನಲ್ಲಿ ರೂಢವಾಗಿದ್ದರೂ ಅಜ್ಞರೂಢಿ-ಗಿಂತಲೂ ಶ್ರೌತಯೋಗವೇ ಪ್ರಬಲ. ಗಾಯತಿ ಚ ತ್ರಾಯತಿ ಚ ಎಂಬ ಶ್ರುತ್ಯುಕ್ತವಾದ ಯೋಗ ವಿಷ್ಣುವಿನಲ್ಲೇ ಇರುವುದು.

(೬) ತದಧೀನತ್ವ ನ್ಯಾಯವನ್ನೂ ಇಲ್ಲಿ ಆಶ್ರಯಿಸಬಹುದು. ಗುಣಗಳು ಅನಾದಿಯಾದರೂ ಅದು ಹೇಗೆ ಗುಣಿಯ ಅಧೀನವೋ (ಉದಾ: ಆಕಾಶದ ಪರಿಮಾಣ ಆಕಾಶಾಧೀನ) ಅದೇ ರೀತಿ ವೇದವು ಅನಾದಿನಿತ್ಯವಾದರೂ ಅದು ಈಶ್ವರನ ಅಧೀನವೇ ಆಗಿದೆ. ಈ ವಿಚಾರವು 'ಸ್ವಭಾವಜೀವಕರ್ಮಾಣಿ . . .' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ವಿಷ್ಣುವಿನಲ್ಲಿ ಗಾಯತ್ರೀ ಶಬ್ದದ ಮಹಾಯೋಗವೇ ಇದೆ.

(೭) 'ಸರ್ವಛಂದೋಭಿದೋ ಹ್ಯೇಷಃ' ಎಂಬುದಾಗಿ ಪೌರಾಣಿಕ-ರೂಢಿಯೂ ಇದೆ.

ಈ ಎಲ್ಲಾ ಕಾರಣದಿಂದ ಗಾಯತ್ರೀ ವಿಷ್ಣುವೇ. ಅದೇ ರೀತಿ ಇಲ್ಲಿರುವ ಹಾಗು ಹಿಂದೆ ಬಂದಿರುವ ಜ್ಯೋತಿಯೂ ವಿಷ್ಣುವೇ ಎಂದು ಸಿದ್ಧವಾಗುವುದು.

**ಪ್ರಶ್ನೆ**:- 'ದ್ಯುಸ್ಥತ್ವ' 'ದಿವಃಪರತ್ವ', 'ಅದೃಶ್ಯತ್ವ' 'ದೃಷ್ಟತ್ವ' ಈ ವಿರುದ್ಧೋಪದೇಶಗಳನ್ನು ಹೇಗೆ ಕೂಡಿಸುವುದು?

**ಉತ್ತರ** :- ತ್ರಿಲೋಕ, ಸಪ್ತಲೋಕ ವಿವಕ್ಷೆಯಿಂದ ಹಾಗು ಆಕಾರ ವಿಶೇಷ ವಿವಕ್ಷೆಯಿಂದ ಕ್ರಮವಾಗಿ ಈ ಎರಡೂ ವಿರುದ್ಧೋಪದೇಶಗಳನ್ನು ಕೂಡಿಸಬಹುದು. ಹೇಗೆಂದರೆ - ತ್ರಿಲೋಕವಿವಕ್ಷೆಯಿಂದ ಗಾಯತ್ರಿಯು ದ್ಯುಸ್ಥ. ಅನಂತಾಸನ ಶ್ವೇತದ್ವೀಪ ವೈಕುಂಠ ಈ ಮೂರಕ್ಕೂ ದ್ಯುಲೋಕ ಎಂಬ ಹೆಸರಿದೆ. ಇಲ್ಲಿರುವ ಗಾಯತ್ರೀ ಶಬ್ದವಾಚ್ಯವಾದ ವಿಷ್ಣುವಿನ ಮೂರು ದ್ಯುಸ್ಥವಾದ ರೂಪಗಳೇ ದಿವಃಪರವೂ ಆಗುತ್ತವೆ. ಹೇಗೆಂದರೆ, ಮೇರು ಪರ್ವತ, ಸೂರ್ಯಮಂಡಲ, ಇಂದ್ರಸದನ ಇದಕ್ಕೂ ದ್ಯುಲೋಕ ಎಂಬ ಹೆಸರಿದೆ. ದ್ಯು ಎಂಬ ಹೆಸರುಳ್ಳ ಮೇರು ಪರ್ವತಕ್ಕಿಂತ ಮೇಲಿರುವ ಅನಂತಾಸನ ದಿವಃ ಪರವಾಯಿತು. ಹಾಗೇ ದ್ಯು ಎಂಬ ಹೆಸರುಳ್ಳ ಸೂರ್ಯಮಂಡಲ ಹಾಗು ಇಂದ್ರಸದನಕ್ಕಿಂತ ಕ್ರಮವಾಗಿ ಎತ್ತರದಲ್ಲಿರುವ ಶ್ವೇತದ್ವೀಪ ಹಾಗು ವೈಕುಂಠಗಳು ದಿವಃ ಪರವಾದವು. ಹೀಗೆ ವಿರುದ್ಧೋಪದೇಶವನ್ನು ಕೂಡಿಸಬಹುದು.

ಅದೇ ರೀತಿ ವಿಷ್ಣುವಿನ ಕೆಲವು ರೂಪಗಳು ಅದೃಶ್ಯ ಕೆಲವು ದೃಶ್ಯ ಎಂದು ಹೀಗೆ ದೃಶ್ಯತ್ವ ಅದೃಶ್ಯತ್ವ ಎಂಬ ವಿರುದ್ಧೋಪ ದೇಶವೂ ಕೂಡುತ್ತದೆ.

ಗಾಯತ್ರೀ ಶಬ್ದವಾಚ್ಯನಾದವನು ವಿಷ್ಣುವಿಗಿಂತ ಬೇರೆ ಎಂದಾದರೆ ಆಗ ಅದೇ ಪ್ರಕರಣದಲ್ಲಿರುವ ಜ್ಯೋತಿಯೂ ವಿಷ್ಣುವಲ್ಲ ಎಂದಾಗಿ ಜ್ಯೋತಿರಧಿಕರಣದಲ್ಲಿ ಬಂದ ಜ್ಯೋತಿಯೂ ವಿಷ್ಣುವಲ್ಲ ಎಂದಾಗಬೇಕು ಎಂಬ ಆಕ್ಷೇಪ ಹಾಗು ಸಮಾಧಾನ ಇದೇ ಕ್ರಮವಾಗಿ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನ. ಅಥವಾ ಗಾಯತ್ರಿಯು ವಿಷ್ಣುವಲ್ಲ ಎಂದಾದರೆ ಆಗ ಗಾಯತ್ರಿಯಲ್ಲಿ 'ಅಸ್ಯಾಂ ಇದಂ ಸರ್ವಂ ಪ್ರತಿಷ್ಠಿತಂ' ಎಂದು ಶ್ರುತವಾದ ಜಗದಾಧಾರತ್ವ ರೂಪವಾದ ಸ್ಥಿತಿಹೇತುತ್ವವು ವಿಷ್ಣುವಿಗಿಲ್ಲ ಎಂದಾಗಿ ಜನ್ಮಾಧಿ ಕರಣದಲ್ಲಿ ಹೇಳಲ್ಪಟ್ಟ ಸ್ಥಿತಿಹೇತತ್ವವೂ ವಿಷ್ಣುವಿಗಿಲ್ಲದೇ ಹೋಗಲಿ ಎಂಬ ಆಕ್ಷೇಪ ಹಾಗು ಅದರ ಸಮಾಧಾನವನ್ನು ಈ ಅಧಿಕರಣದ ಪ್ರಯೋಜನ ಎಂದು ಹೇಳಬಹುದು.

## ॥ ಓಂ ಪ್ರಾಣಸ್ತಥಾನುಗಮಾತ್ ಓಂ ॥ ೧-೧-೧೨

ಈ ಅಧಿಕರಣದಲ್ಲಿ, 'ಶ್ರುತಿಲಿಂಗ ಬಾಹುಲ್ಯ' ಎಂಬ ಹಿಂದಿನ ಅಧಿಕರಣದ ನ್ಯಾಯವನ್ನೇ ಆಶ್ರಯಿಸಿ ಪೂರ್ವಪಕ್ಷ ಪ್ರವೃತ್ತವಾಗುವುದರಿಂದ 'ಆಪವಾದಿಕೀ' ಎಂಬ ಸಂಗತಿಯಿದೆ.

ಐತರೇಯ ಉಪನಿಷತ್ತಿನಲ್ಲಿ ಬಂದಿರುವ 'ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಶ್ಚಕ್ಷುಃ ಶ್ರೋತಂ ಮನೋ ವಾಕ್ ಪ್ರಾಣಃ' ಎಂಬುದೇ ಮೊದಲಾದ ಅನೇಕ ವಾಕ್ಯಗಳಲ್ಲಿ ಶ್ರುತವಾದ ಪ್ರಾಣಶಬ್ದವು ಮುಖ್ಯ-ಪ್ರಾಣಾದಿಪರವೋ ವಿಷ್ಣುಪರವೋ ಎಂಬುದೇ ಸಂದೇಹ.

ಇಲ್ಲಿರುವ ಪ್ರಾಣಶಬ್ದವು ವಾಯು, ಇಂದ್ರ ಜೀವಪರವೇ ಆಗಿದೆ ಎಂಬುದು ಪೂರ್ವಪಕ್ಷ. ವಾಯ್ವಾದಿಪರವಾದ ಶ್ರುತಿಲಿಂಗಗಳು ಅನೇಕ-ವಿರುವುದರಿಂದ. ಹೇಗೆಂದರೆ,

೧) ಚಕ್ಷು ಶ್ರೋತ್ರಾದಿ ಶಬ್ದಗಳ ಜೊತೆಗೆ ಪ್ರಾಣಶಬ್ದಪಠಿತವಾಗಿದೆ. ಹಾಗಾಗಿ ಪ್ರಾಣಶಬ್ದವು ಪ್ರಾಣ ವಾಯುಪರವೇ ಆಗಬೇಕು. ಇಲ್ಲಿ ಸಹಪಾಠ ಎಂಬ ಲಿಂಗವಿದೆ. ಚಕ್ಷುರಾದಿ ಶಬ್ದಗಳು ಇಂದ್ರಿಯಾಭಿಮಾನಿಪರವಾಗಿವೆ.

೨) 'ತಾ ಅಹಿಂಸಂತ....' ಇತ್ಯಾದಿ ವಾಕ್ಯಗಳಲ್ಲಿ ಪ್ರಾಣವಿವಾದ (ದೇವತೆ-ಗಳಲ್ಲಿ ಯಾರು ಶ್ರೇಷ್ಠ ಎಂಬ ವಿವಾದ), ದೇಹದಿಂದ (ಚತುರ್ಮುಖನ) ಉತ್ಕ್ರಮಣ ಮತ್ತು ಪ್ರವೇಶ, ಆ ದೇಹೋತ್ಕ್ರಮಣ ಪ್ರವೇಶದಿಂದ ಉಂಟಾದ ದೇಹಪಾತ ಹಾಗು ಉತ್ಥಾನ ಕೊನೆಗೆ ಪ್ರಾಣಸಂವಾದ ಇದೆಲ್ಲವೂ ಮುಖ್ಯ-ಪ್ರಾಣನ ಲಿಂಗವೇ ಆಗಿದೆ. ಈ ಮುಖಪ್ರಾಣಲಿಂಗಗಳಿರುವಲ್ಲೇ ಪ್ರಾಣಶಬ್ದವೂ ಶ್ರುತವಾಗಿದೆ. ಅಥವಾ ಇಲ್ಲಿರುವ ಪ್ರಾಣಶಬ್ದವಾಚ್ಯ ಜೀವನಾಗಬಹುದು. ಜೀವಲಿಂಗಗಳಿರುವುದರಿಂದ, 'ತಂ ಯಚ್ಛತಂ ವರ್ಷಾಣ್ಯಭ್ಯಾಽರ್ಚತ್' ಎಂಬುದಾಗಿ ಶತಾಯುಷ್ಟ್ವವನ್ನು ಹೇಳಿದ್ದಾರೆ (ನೂರು ವರ್ಷ ಆಯಸ್ಸು ). ಇದು ಜೀವಲಿಂಗ. 'ಪ್ರಾಣೋವಂಶಃ' ಎಂಬುದಾಗಿ ಚಕ್ಷುರಾದಿಗಳಿಗೆ ಆಶ್ರಯ ಎಂದು ಹೇಳಿದ್ದಾರೆ. ಇದೂ ಜೀವಲಿಂಗವೇ. ಇದೇ ಪ್ರಕರಣದಲ್ಲಿ 'ಪುರುಷ' ಎಂಬ ಶಬ್ದಶ್ರುತವಾಗಿದೆ. ಪುರುಷ ಶಬ್ದಕ್ಕೆ ಜೀವ ಎಂಬ ಅರ್ಥ ಪ್ರಸಿದ್ಧವಾಗಿದೆ.

ಅಥವಾ ಪ್ರಾಣ ಎಂದರೆ ಇಂದ್ರನಾಗಬಹುದು. ಇಂದ್ರ ಶ್ರುತಿ ಲಿಂಗಗಳಿರುವುದರಿಂದ. 'ಇಂದ್ರೋ ವೃ ವೃತ್ರಂ ಹತ್ವಾ' ಎಂದು ವೃತ್ರಹನನ-ವನ್ನು ಹೇಳಿದ್ದಾರೆ. ವೃತ್ರಹಂತಾ ಇಂದ್ರನೇ. ಮಹಾವ್ರತಯಾಜಿತ್ವ ಇದು ಇಂದ್ರಲಿಂಗವೇ. 'ತಮಿಂದ್ರ ಉವಾಚ ಪ್ರಾಣೋ ವಾಹಮಸ್ಮಿ ಋಷೇ' ಎಂದು ಇಂದ್ರನೇ ಹೇಳಿದ 'ಅಹಂ ಪ್ರಾಣಃ' ಎಂಬ ಶಬ್ದ. ಈ ಶ್ರುತಿಲಿಂಗಗಳಾವುದೂ ವಿಷ್ಣುವಿನಲ್ಲಿ ಕೂಡುವುದಿಲ್ಲ.

**ಸಿದ್ಧಾಂತ** :- ಐತರೇಯ ಉಪನಿಷತ್ತಿನಲ್ಲಿ ಬಂದಿರುವ ಪ್ರಾಣ ವಿಷ್ಣುವೇ. ವಿಷ್ಣು ಪರವಾದ ಅನೇಕ ಶ್ರುತಿಲಿಂಗಗಳಿರುವುದರಿಂದ

೧) 'ಏತದ್ಬ್ರಹ್ಮ ಏತತ್ ಸತ್ಯಂ' 'ತಂ ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ ಪುರುಷಂ' 'ಅಃ ಇತಿ ಬ್ರಹ್ಮ' ಎಂಬುದಾಗಿ ಅನೇಕ ವಾಕ್ಯಗಳಲ್ಲಿ ಬ್ರಹ್ಮ ಶಬ್ದ ಶ್ರುತವಾಗಿದೆ. ಬ್ರಹ್ಮ ಶಬ್ದವು, ವಿಷ್ಣು ಪರ ಎಂದು ಹಿಂದೆ ನಿರ್ಣಯಿಸಲಾಗಿದೆ.

೨) 'ತಂ ದೇವಾಃ ಪ್ರಾಣಯಂತ' ಎಂಬಲ್ಲಿ ದೇವೋಪದೇಶ್ಯತ್ವ (ದೇವತೆ-ಗಳು ಶಿಷ್ಯರಿಗೆ ಉಪದೇಶ ಮಾಡಿದರು) ಎಂಬ ಲಿಂಗವಿದೆ.

'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೆ' ಎಂಬಲ್ಲಿ ಭೂತಿತ್ವ ಪ್ರಕಾರಕ ದೇವೋಪಾಸ್ಯತ್ವ (ಅವನನ್ನು ಸಂಪತ್ಪ್ರದ ಎಂದು ದೇವತೆಗಳು ಉಪಾಸನೆ ಮಾಡಿದರು), 'ಸರ್ವೇ ವೇದಾ' ಎಂಬಲ್ಲಿ ಸರ್ವವೇದಪ್ರತಿಪಾದ್ಯತ್ವ, 'ಪ್ರಾಣೋ ಹ್ಯೇಷ ಯ ಏಷ ತಪತಿ' ಎಂಬಲ್ಲಿ ಸೂರ್ಯಮಂಡಲಸ್ಥತ್ವ, 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' ಎಂಬಲ್ಲಿ ಸರ್ವಾಂತರ್ಯಾಮಿತ್ವ, 'ಆಪಿಪೀಲಿಕಾಭ್ಯಃ' ಪ್ರಾಣೇನ ಬೃಹತ್ಯಾವಿಷ್ಟ ಬ್ಧಾನಿ' ಎಂಬಲ್ಲಿ ಸರ್ವ-ವ್ಯಾಪಿತ್ವ ಎಂಬ ಲಿಂಗಗಳು ಇವೆ.

ಈ ಎಲ್ಲಾ ಲಿಂಗಗಳು ಭಾಷ್ಯದಲ್ಲಿ ಉಕ್ತವಾದ ಬೇರೆ ಪ್ರಮಾಣಗಳ ಬಲ-ದಿಂದ ಕೇವಲ ವಿಷ್ಣುಪರ ಎಂದು ಸಿದ್ಧವಾಗಿದೆ.

೩) ಮುಖ್ಯಪ್ರಾಣ ಪರವಾದ ಶ್ರುತಿಲಿಂಗಗಳಿಗಿಂತಲೂ ವಿಷ್ಣುಪರವಾದ ಶ್ರುತಿಲಿಂಗಗಳು ಅಧಿಕಸಂಖ್ಯೆಯಲ್ಲಿವೆ.

## ॥ ಓಂ ಪ್ರಾಣಸ್ತಥಾನುಗಮಾತ್ ಓಂ ॥ ೧-೧-೧೨

ಈ ಅಧಿಕರಣದಲ್ಲಿ, 'ಶ್ರುತಿಲಿಂಗ ಬಾಹುಲ್ಯ' ಎಂಬ ಹಿಂದಿನ ಅಧಿಕರಣದ ನ್ಯಾಯವನ್ನೇ ಆಶ್ರಯಿಸಿ ಪೂರ್ವಪಕ್ಷ ಪ್ರವೃತ್ತವಾಗುವುದರಿಂದ 'ಆಪವಾದಿಕೀ' ಎಂಬ ಸಂಗತಿಯಿದೆ.

ಐತರೇಯ ಉಪನಿಷತ್ತಿನಲ್ಲಿ ಬಂದಿರುವ 'ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಶ್ಚಕ್ಷುಃ ಶ್ರೋತಂ ಮನೋ ವಾಕ್ ಪ್ರಾಣಃ' ಎಂಬುದೇ ಮೊದಲಾದ ಅನೇಕ ವಾಕ್ಯಗಳಲ್ಲಿ ಶ್ರುತವಾದ ಪ್ರಾಣಶಬ್ದವು ಮುಖ್ಯ-ಪ್ರಾಣಾದಿಪರವೋ ವಿಷ್ಣುಪರವೋ ಎಂಬುದೇ ಸಂದೇಹ.

ಇಲ್ಲಿರುವ ಪ್ರಾಣಶಬ್ದವು ವಾಯು, ಇಂದ್ರ ಜೀವಪರವೇ ಆಗಿದೆ ಎಂಬುದು ಪೂರ್ವಪಕ್ಷ. ವಾಯ್ವಾದಿಪರವಾದ ಶ್ರುತಿಲಿಂಗಗಳು ಅನೇಕ-ವಿರುವುದರಿಂದ. ಹೇಗೆಂದರೆ,

೧) ಚಕ್ಷು ಶ್ರೋತ್ರಾದಿ ಶಬ್ದಗಳ ಜೊತೆಗೆ ಪ್ರಾಣಶಬ್ದಪಠಿತವಾಗಿದೆ. ಹಾಗಾಗಿ ಪ್ರಾಣಶಬ್ದವು ಪ್ರಾಣ ವಾಯುಪರವೇ ಆಗಬೇಕು. ಇಲ್ಲಿ ಸಹಪಾಠ ಎಂಬ ಲಿಂಗವಿದೆ. ಚಕ್ಷುರಾದಿ ಶಬ್ದಗಳು ಇಂದ್ರಿಯಾಭಿಮಾನಿಪರವಾಗಿವೆ.

೨) 'ತಾ ಅಹಿಂಸಂತ....' ಇತ್ಯಾದಿ ವಾಕ್ಯಗಳಲ್ಲಿ ಪ್ರಾಣವಿವಾದ (ದೇವತೆ-ಗಳಲ್ಲಿ ಯಾರು ಶ್ರೇಷ್ಠ ಎಂಬ ವಿವಾದ), ದೇಹದಿಂದ (ಚತುರ್ಮುಖನ) ಉತ್ಕ್ರಮಣ ಮತ್ತು ಪ್ರವೇಶ, ಆ ದೇಹೋತ್ಕ್ರಮಣ ಪ್ರವೇಶದಿಂದ ಉಂಟಾದ ದೇಹಪಾತ ಹಾಗು ಉತ್ಥಾನ ಕೊನೆಗೆ ಪ್ರಾಣಸಂವಾದ ಇದೆಲ್ಲವೂ ಮುಖ್ಯ-ಪ್ರಾಣನ ಲಿಂಗವೇ ಆಗಿದೆ. ಈ ಮುಖಪ್ರಾಣಲಿಂಗಗಳಿರುವಲ್ಲೇ ಪ್ರಾಣಶಬ್ದವೂ ಶ್ರುತವಾಗಿದೆ. ಅಥವಾ ಇಲ್ಲಿರುವ ಪ್ರಾಣಶಬ್ದವಾಚ್ಯ ಜೀವನಾಗಬಹುದು. ಜೀವಲಿಂಗಗಳಿರುವುದರಿಂದ, 'ತಂ ಯಚ್ಛತಂ ವರ್ಷಾಣ್ಯಭ್ಯಾಽರ್ಚತ್' ಎಂಬುದಾಗಿ ಶತಾಯುಷ್ಟ್ವವನ್ನು ಹೇಳಿದ್ದಾರೆ (ನೂರು ವರ್ಷ ಆಯಸ್ಸು ). ಇದು ಜೀವಲಿಂಗ. 'ಪ್ರಾಣೋವಂಶಃ' ಎಂಬುದಾಗಿ ಚಕ್ಷುರಾದಿಗಳಿಗೆ ಆಶ್ರಯ ಎಂದು ಹೇಳಿದ್ದಾರೆ. ಇದೂ ಜೀವಲಿಂಗವೇ. ಇದೇ ಪ್ರಕರಣದಲ್ಲಿ 'ಪುರುಷ' ಎಂಬ ಶಬ್ದಶ್ರುತವಾಗಿದೆ. ಪುರುಷ ಶಬ್ದಕ್ಕೆ ಜೀವ ಎಂಬ ಅರ್ಥ ಪ್ರಸಿದ್ಧವಾಗಿದೆ.

ಅಥವಾ ಪ್ರಾಣ ಎಂದರೆ ಇಂದ್ರನಾಗಬಹುದು. ಇಂದ್ರ ಶ್ರುತಿ ಲಿಂಗಗಳಿರುವುದರಿಂದ. 'ಇಂದ್ರೋ ವೃ ವೃತ್ರಂ ಹತ್ವಾ' ಎಂದು ವೃತ್ರಹನನವನ್ನು ಹೇಳಿದ್ದಾರೆ. ವೃತ್ರಹಂತಾ ಇಂದ್ರನೇ. ಮಹಾವ್ರತಯಾಜಿತ್ವ ಇದು ಇಂದ್ರಲಿಂಗವೇ. 'ತಮಿಂದ್ರ ಉವಾಚ ಪ್ರಾಣೋ ವಾಹಮಸ್ಮಿ ಋಷೇ' ಎಂದು ಇಂದ್ರನೇ ಹೇಳಿದ 'ಅಹಂ ಪ್ರಾಣಃ' ಎಂಬ ಶಬ್ದ. ಈ ಶ್ರುತಿಲಿಂಗಗಳಾವುದೂ ವಿಷ್ಣುವಿನಲ್ಲಿ ಕೂಡುವುದಿಲ್ಲ.

**ಸಿದ್ಧಾಂತ** :- ಐತರೇಯ ಉಪನಿಷತ್ತಿನಲ್ಲಿ ಬಂದಿರುವ ಪ್ರಾಣ ವಿಷ್ಣುವೇ. ವಿಷ್ಣು ಪರವಾದ ಅನೇಕ ಶ್ರುತಿಲಿಂಗಗಳಿರುವುದರಿಂದ

೧) 'ಏತದ್ಬ್ರಹ್ಮ ಏತತ್ ಸತ್ಯಂ' 'ತಂ ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ ಪುರುಷಂ' 'ಅಃ ಇತಿ ಬ್ರಹ್ಮ' ಎಂಬುದಾಗಿ ಅನೇಕ ವಾಕ್ಯಗಳಲ್ಲಿ ಬ್ರಹ್ಮ ಶಬ್ದ ಶ್ರುತವಾಗಿದೆ. ಬ್ರಹ್ಮ ಶಬ್ದವು, ವಿಷ್ಣು ಪರ ಎಂದು ಹಿಂದೆ ನಿರ್ಣಯಿಸಲಾಗಿದೆ.

೨) 'ತಂ ದೇವಾಃ ಪ್ರಾಣಯಂತ' ಎಂಬಲ್ಲಿ ದೇವೋಪದೇಶ್ಯತ್ವ (ದೇವತೆಗಳು ಶಿಷ್ಯರಿಗೆ ಉಪದೇಶ ಮಾಡಿದರು) ಎಂಬ ಲಿಂಗವಿದೆ.

'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೆ' ಎಂಬಲ್ಲಿ ಭೂತಿತ್ವ ಪ್ರಕಾರಕ ದೇವೋಪಾಸ್ಯತ್ವ (ಅವನನ್ನು ಸಂಪತ್ಪ್ರದ ಎಂದು ದೇವತೆಗಳು ಉಪಾಸನೆ ಮಾಡಿದರು), 'ಸರ್ವೇ ವೇದಾ' ಎಂಬಲ್ಲಿ ಸರ್ವವೇದಪ್ರತಿಪಾದ್ಯತ್ವ, 'ಪ್ರಾಣೋ ಹ್ಯೇಷ ಯ ಏಷ ತಪತಿ' ಎಂಬಲ್ಲಿ ಸೂರ್ಯಮಂಡಲಸ್ಥತ್ವ, 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' ಎಂಬಲ್ಲಿ ಸರ್ವಾಂತರ್ಯಾಮಿತ್ವ, 'ಆಪಿಪೀಲಿಕಾಭ್ಯಃ' ಪ್ರಾಣೇನ ಬೃಹತ್ಯಾವಿಷ್ಟ ಬ್ಧಾನಿ' ಎಂಬಲ್ಲಿ ಸರ್ವವ್ಯಾಪಿತ್ವ ಎಂಬ ಲಿಂಗಗಳು ಇವೆ.

ಈ ಎಲ್ಲಾ ಲಿಂಗಗಳು ಭಾಷ್ಯದಲ್ಲಿ ಉಕ್ತವಾದ ಬೇರೆ ಪ್ರಮಾಣಗಳ ಬಲದಿಂದ ಕೇವಲ ವಿಷ್ಣುಪರ ಎಂದು ಸಿದ್ಧವಾಗಿದೆ.

೩) ಮುಖ್ಯಪ್ರಾಣ ಪರವಾದ ಶ್ರುತಿಲಿಂಗಗಳಿಗಿಂತಲೂ ವಿಷ್ಣುಪರವಾದ ಶ್ರುತಿಲಿಂಗಗಳು ಅಧಿಕಸಂಖ್ಯೆಯಲ್ಲಿವೆ.

೪) ಮುಖ್ಯಪ್ರಾಣಾದಿಪರ ಎಂದು ಹಿಂದೆ ಉದಾಹರಿಸಿದ ಶ್ರುತಿ-ಲಿಂಗಗಳೆಲ್ಲವೂ ಅಂತರ್ಯಾಮಿವಿವಕ್ಷೆಯಿಂದ ವಿಷ್ಣುಪರ ಎಂದಾಗಿ ಸಾವಕಾಶವಾಗುತ್ತವೆ.

**ಪ್ರಶ್ನೆ** :- ಮುಖ್ಯಪ್ರಾಣಪರವಾದ 'ಪ್ರಾಣವಿವಾದ' ಮೊದಲಾದ ಲಿಂಗಗಳನ್ನು ವಿಷ್ಣುಪರ ಎಂದು ಹೇಳಿದರೆ ವಿಷ್ಣು ಮತ್ತು ಚತುರ್ಮುಖ ಇವರಿಬ್ಬರೂ ಈ ದೇವತೆಗಳ ವಿವಾದಕಾಲದಲ್ಲಿ ಉದಾಸೀನರಾಗಿದ್ದರು ಎಂಬುದರ ವಿರೋಧ ಬರುವುದಿಲ್ಲವೇ?

**ಉತ್ತರ** :- ವಿರೋಧವಿಲ್ಲ. ಉದಾಸೀನರಾಗಿದ್ದರು ಎಂದು ಹೇಳಿರುವುದು ಬಾಹ್ಯರೂಪವನ್ನು ಇಟ್ಟುಕೊಂಡು. ಅಂತರ್ಯಾಮಿರೂಪದಿಂದ ವಿಷ್ಣುವೇ ಉತ್ಕ್ರಮಣಾದಿಗಳನ್ನು ಮಾಡಿದ್ದು.

೫) ಇಂದ್ರನು ತನ್ನನ್ನು ಕುರಿತು ಅಹಂ ಪ್ರಾಣಃ ಎಂದು ಹೇಳಿ-ಕೊಂಡಿರುವುದರ ವಿರೋಧವೂ ಇಲ್ಲ. ಹೇಗೆ 'ಅಹಂ ಮನುರಭವಂ' ಎಂಬಲ್ಲಿ ವಾಮದೇವ ಪ್ರಯುಕ್ತವಾದ ಅಹಂ ಮನುಃ ಎಂಬುದಕ್ಕೆ ಲಕ್ಷಣಾವೃತ್ತಿಯಿಂದ ನಾನು ಎಂದರೆ ನನ್ನ ಅಂತರ್ಯಾಮಿ ಎಂಬ ಅರ್ಥ ಹೇಳಲ್ಪಟ್ಟಿದೆಯೋ ಅದೇ ರೀತಿ ಅಹಂ ಪ್ರಾಣಃ ಎಂಬಲ್ಲಿಯೂ ನಾನು ಎಂದರೆ ನನ್ನ ಅಂತರ್ಯಾಮೀ ಎಂದೇ ಅರ್ಥ. ಅಥವಾ 'ಸರ್ವಾಂತರ್ಯಾಮಿಕೋ ವಿಷ್ಣುಃ ಸರ್ವನಾಮ್ನಾಭಿಧಿಯತೇ ಏಷೋಽಹಂ ತ್ವಮಸೌ ಚ' ಎಂಬ ಸ್ಮೃತಿಯ ಆಧಾರದಿಂದ ಸರ್ವಾಂತರ್ಯಾಮಿಯಾದ್ದರಿಂದ ವಿಷ್ಣುವೇ ಏಷಃ, ಅಹಂ, ತ್ವಂ ಇತ್ಯಾದಿ ಎಲ್ಲಾ ಸರ್ವನಾಮಶಬ್ದಗಳಿಂದ ವಾಚ್ಯನಾಗಿದ್ದಾನೆ.

ಹೀಗಾಗಿ ಇಲ್ಲಿರುವ ಪ್ರಾಣ ವಿಷ್ಣುವೇ. ಐತರೇಯದಲ್ಲಿರುವ ಪ್ರಾಣ ಶಬ್ದವು ಅನ್ಯಪರ ಎಂದಾದರೆ 'ಅತ ಏವ ಪ್ರಾಣಃ' ಎಂಬಲ್ಲಿ ಪ್ರಸ್ತುತನಾದ ಪ್ರಾಣನೂ ಅನ್ಯನೇ ಎಂದಾಗಬೇಕು ಎಂಬ ಆಕ್ಷೇಪ ಮತ್ತು ಅದರ ಸಮಾಧಾನ ಇದೇ ಕ್ರಮವಾಗಿ ಪೂರ್ವಪಕ್ಷ ಸಿದ್ಧಾಂತ ಫಲ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಮೊದಲನೆಯ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.**

# ಮೊದಲನೆಯ ಅಧ್ಯಾಯದ ಎರಡನೆಯ ಪಾದ

## ॥ ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ ॥ ೧-೨-೧

ಹಿಂದಿನ ಪಾದದ ಕೊನೆಯ ಅಧಿಕರಣಕ್ಕೂ ಮುಂದಿನ ಪಾದದ ಮೊದಲನೆಯ ಅಧಿಕರಣಕ್ಕೂ ಸಂಗತಿಯನ್ನು ಹೇಳುವ ಅವಶ್ಯಕತೆ ಇಲ್ಲ. ಹೇಳಬೇಕು ಎಂದಾದರೆ, ಹಿಂದಿನ ಅಧಿಕರಣದ ಮೇಲಿನ ಆಕ್ಷೇಪದಿಂದ ಈ ಅಧಿಕರಣ ಪ್ರವೃತ್ತವಾದ್ದರಿಂದ 'ಆಕ್ಷೇಪಿಕೀ' ಎಂಬ ಸಂಗತಿಯನ್ನು ಇಟ್ಟುಕೊಳ್ಳಬಹುದು.

ಐತರೇಯೋಪನಿಷತ್ತಿನಲ್ಲಿ, 'ಚತ್ವಾರಃ ಪುರುಷಾ ಇತಿ ಬಾಧ್ವಃ' ಎಂಬ ಖಂಡದಲ್ಲಿ 'ತಸ್ಯೈತಸ್ಯಾಸಾವಾದಿತ್ಯೋ ರಸಃ' ಎಂದು ಆದಿತ್ಯನ ವಿಚಾರವನ್ನು ಆರಂಭ ಮಾಡಿದ್ದಾರೆ. ಈ ಆದಿತ್ಯನನ್ನೇ ಋಗ್ವೇದಿಗಳು ಬೃಹತೀಸಹಸ್ರದಲ್ಲಿ ವಿಚಾರ ಮಾಡುತ್ತಾರೆ ಎಂದು ಹೇಳಿ, ಅಗ್ನಿ, ಮಹಾವ್ರತ, ಪೃಥಿವೀ, ದ್ಯು, ವಾಯು, ಆಕಾಶ, ಓಷಧಿ, ವನಸ್ಪತಿ, ಚಂದ್ರ, ನಕ್ಷತ್ರ ಇವುಗಳಲ್ಲಿ ಈ ಆದಿತ್ಯನನ್ನೇ ಜ್ಞಾನಿಗಳು ಉಪಾಸನೆ ಮಾಡುತ್ತಾರೆಂದು ಹೇಳಿದೆ. ಹಾಗು ಎಲ್ಲಾ ಭೂತಗಳಲ್ಲೂ (ಜೀವರಲ್ಲೂ) ಇವನನ್ನೇ ಕಾಣುತ್ತಾರೆ ಎಂದು ಹೇಳಿ ಇವನನ್ನೇ 'ಬ್ರಹ್ಮ' ಎಂದು ಕರೆಯುತ್ತಾರೆ ಎಂದು ಹೇಳಲಾಗಿದೆ. ಹೀಗೆ ಸರ್ವಭೂತಗತನಾದ ವ್ಯಕ್ತಿಯು ಈ ಪ್ರಕರಣದಲ್ಲಿ ಉಕ್ತನಾಗಿದ್ದಾನೆ.

ಹೀಗೆ ಸರ್ವಭೂತಗತನಾದವನು ಆದಿತ್ಯನೋ, ಜೀವನೋ ವಿಷ್ಣುವೋ ಎಂಬುದೇ ಸಂದೇಹ.

ಈ ಸರ್ವಭೂತಗತನಾದವನು ಆದಿತ್ಯನೇ ಎಂದು ಪೂರ್ವಪಕ್ಷ. ಏಕೆಂದರೆ,

೧) ಈ ಪ್ರಕರಣದಲ್ಲೇ ಹಿಂದೆ ಅನೇಕ ಬಾರಿ ಆದಿತ್ಯ ಶಬ್ದ ಶ್ರುತವಾಗಿದೆ. ಅದನ್ನೇ 'ಏತಂ ಹ್ಯೇವ....' ಇತ್ಯಾದಿ ವಾಕ್ಯಗಳಲ್ಲಿರುವ 'ಏತಂ' ಎಂಬ ಶಬ್ದದಿಂದ ಪರಾಮರ್ಶೆ ಮಾಡಲಾಗಿದೆ. ಹಾಗಾಗಿ ಆದಿತ್ಯನೇ ಸರ್ವಭೂತಗತ.

೨) 'ತಸ್ಯೈತಸ್ಯ' ಎಂಬಲ್ಲಿ ಪಸ್ತುತವಾದ ಸಂವತ್ಸರವನ್ನು ಪರಾಮರ್ಶೆ ಮಾಡಿ 'ರಸ' ಎಂಬುದಾಗಿ ಸಂವತ್ಸರ ಸಾರ ಎಂದು ಹೇಳಿರುವುದರಿಂದ ಇಲ್ಲಿ

ಹೇಳಲ್ಪಟ್ಟವನು ಆದಿತ್ಯನೇ ಆಗಬೇಕು. ಸಂವತ್ಸರಸಾರತ್ವ ಎಂಬುದು ಆದಿತ್ಯನ ಲಿಂಗವಾದ್ದರಿಂದ. (ಸಂವತ್ಸರ ಸಾರ = ಸಂವತ್ಸರ ನಿಯಾಮಕ)

೩) 'ಚಿತ್ರಂ ದೇವಾನಾಂ . . . .' ಎಂಬುದಾಗಿ ಸೌರಮಂತ್ರವನ್ನು ಉಪನಿಷತ್ತಿನಲ್ಲಿ ಉದಾಹರಿಸಲಾಗಿದೆ. ಈ ಕಾರಣದಿಂದಲೂ ಇಲ್ಲಿ ಹೇಳಲ್ಪಟ್ಟವನು ಆದಿತ್ಯನೇ ಆಗಬೇಕು.

೪) ಈ ಆದಿತ್ಯನನ್ನು ಅನೇಕಕಡೆ (ಪೃಥಿವೀ ಇತ್ಯಾದಿ) ಉಪಾಸನೆ ಮಾಡುತ್ತಾರೆಂದು ಹೇಳಿ, 'ಏತಂ ಆದಿತ್ಯೇ' ಎಂದು ಆದಿತ್ಯನಲ್ಲಿ ಉಪಾಸನೆ ಮಾಡುತ್ತಾರೆಂದು ಹೇಳದೇ ಇರುವುದರಿಂದಲೂ ಇಲ್ಲಿ ಹೇಳಲ್ಪಟ್ಟವನು ಆದಿತ್ಯನೇ. ಆದಿತ್ಯನು ಅನ್ಯನಾಗಿದ್ದರೆ, ಅವನನ್ನು, ಆದಿತ್ಯ (ಸೂರ್ಯ)ನಲ್ಲಿ ಉಪಾಸನೆ ಮಾಡುತ್ತಾರೆ ಎಂದು ಹೇಳುತ್ತಿದ್ದರು.

ಅಥವಾ ಇಲ್ಲಿ ಹೇಳಲ್ಪಟ್ಟ ಸರ್ವಗತನಾದವನು ಜೀವನಾಗಬಹುದು.

೧) ಚಕ್ಷುರ್ಮಯ, ಶ್ರೋತ್ರಮಯ ಎಂಬುದಾಗಿ ಮುಂದೆ ಚಕ್ಷುರ್ಮಯತ್ವಾದಿಗಳನ್ನು ಹೇಳಿದ್ದಾರೆ. ಚಕ್ಷುರ್ಮಯ ಎಂದರೆ ಚಕ್ಷುಸ್ಸುಳ್ಳವನು ಎಂದರ್ಥ. ಚಕ್ಷುರಾದಿ ಶಬ್ದಗಳು ಜ್ಞಾನಕರಣಗಳೆಂದು ಪ್ರಸಿದ್ಧ. ಹೀಗೆ ಜ್ಞಾನಕರಣವಾದ ಚಕ್ಷುರಾದಿಗಳ ಸಂಬಂಧ ಎಂಬ ಜೀವಲಿಂಗವಿರುವುದರಿಂದ ಜೀವನಾಗಬಹುದು.

೨) 'ಏತಂ ಸರ್ವೇಷು ಭೂತೇಷು' ಎಂಬುದಾಗಿ ಶ್ರುತಿಯಲ್ಲ ಭೂತ ಪದ ಪ್ರಯುಕ್ತವಾಗಿದೆ. ಅದರಿಂದ ಇವನ ವ್ಯಾಪ್ತಿ ಕೇವಲ ಭೂತಗಳಲ್ಲಿ ಮಾತ್ರ. ಉಳಿದ ಕಡೆ ಇಲ್ಲ ಎಂದು ತಿಳಿಯುತ್ತದೆ. ಇದೇ 'ಅಲ್ಪೌಕಸ್ತ್ವ' (ಕಡಿಮೆ ಸ್ಥಳಗಳಲ್ಲಿ ಇರುವುದು). ಇದು ಜೀವನ ಲಿಂಗ.

**ಪ್ರಶ್ನೆ** :- 'ಏತಂ ಸರ್ವೇಷು ಭೂತೇಷು' ಎಂಬ ವಾಕ್ಯದ ನಂತರ ಶ್ರುತವಾಗಿರುವ ವಾಕ್ಯ 'ಚಕ್ಷುಮಯಃ ಶ್ರೋತ್ರಮಯಃ . . .' ಇತ್ಯಾದಿ. ಹೀಗಾಗಿ ಮುಂದೆ ಪ್ರಸ್ತುತನಾದ ಜೀವನನ್ನು ಹಿಂದೆ ಇರುವ 'ಏತಂ' ಎಂಬ ಶಬ್ದದಿಂದ ಹೇಗೆ ಪರಾಮರ್ಶೆ ಮಾಡಲು ಸಾಧ್ಯ ?

**ಪರಿಹಾರ :-** 'ಏತತ್' ಶಬ್ದಕ್ಕೆ ವಕ್ಷ್ಯಮಾಣಪರಾಮರ್ಶಿತ್ವ (ಮುಂದೆ ಪ್ರಸ್ತುತವಾದದ್ದನ್ನು ಪರಾಮರ್ಶೆ ಮಾಡುವುದು) ಎಂಬುದು ಅಲ್ಲಲ್ಲಿ ಕಂಡಿದೆ. ಹಾಗಾಗಿ ವಿರೋಧವಿಲ್ಲ.

ಹಿಂದೆ ಹೇಳಿದ ಯಾವ ಶ್ರುತಿಲಿಂಗಗಳನ್ನೂ ವಿಷ್ಣುವಿನಲ್ಲಿ ಕೂಡಿಸಲು ಸಾಧ್ಯವಿಲ್ಲ. ಜೊತೆಗೆ ವಿಷ್ಣುವಿಗೆ ಸರ್ವಗತತ್ವವನ್ನು ಒಪ್ಪಿದರೆ ಆಗ ಆ ಆ ಭೂತಗಳಿಗೆ ಸಂಬಂಧಪಟ್ಟ ಸುಖದುಃಖಭೋಗವನ್ನೂ ಒಪ್ಪಬೇಕಾಗುತ್ತದೆ. ಹೀಗಾಗಿ ಸರ್ವಗತನಾದವನು ವಿಷ್ಣುವಲ್ಲ.

**ಸಿದ್ಧಾಂತ :-** ಸರ್ವಗತನಾದವನು ವಿಷ್ಣುವೇ.

೧) 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂದು ಸರ್ವಗತನಾದವನು 'ಬ್ರಹ್ಮ' ಎಂದು ಶ್ರುತವಾಗಿದೆ. ಈ 'ಬ್ರಹ್ಮ' ಶಬ್ದವಾದರೋ 'ತದೇವ ಬ್ರಹ್ಮ ಪರಮಂ ಕವೀನಾಂ' ಎಂಬಿತ್ಯಾದಿ ಶ್ರುತಿಗಳಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ.

೨) ಬ್ರಹ್ಮ ಶಬ್ದಕ್ಕೆ ಬ್ರಾಹ್ಮಣಜಾತಿ, ಜೀವ, ಕಮಲಾಸನ, ವೇದ ಹೀಗೆ ಅನೇಕ ಅರ್ಥಗಳಿವೆ. ಜಾತ್ಯಾದಿಗಳು ಬ್ರಹ್ಮ ಶಬ್ದದ ಅಮುಖ್ಯಾರ್ಥ. ಮುಖ್ಯಾರ್ಥ ವಿಷ್ಣು. ಪ್ರಕೃತದಲ್ಲಿ ಬ್ರಹ್ಮ ಶಬ್ದಕ್ಕೆ ಜೀವ ಎಂಬ ಅರ್ಥ ಮಾಡಿದರೆ, ಪ್ರಧಾನಾಪ್ರಧಾನಗಳಾದ ಬೇರೆ ಅರ್ಥ ಇರುವಾಗ 'ಏತಮೇವ' ಎಂಬುದಾಗಿ 'ಏವ'ಕಾರದಿಂದ ಜೀವನೇ ಎಂದು ಹೇಳುವುದು ಕೂಡುವುದಿಲ್ಲ.

೩) 'ಏತಮೇವ' ಎಂಬ 'ಏವ'ಕಾರವಿರುವುದರಿಂದ ಇಲ್ಲಿರುವ ಬ್ರಹ್ಮಶಬ್ದಕ್ಕೆ ಮುಖ್ಯಾರ್ಥವನ್ನೇ ಮಾಡಬೇಕು. ಮುಖ್ಯಾರ್ಥ ಒಂದೇ (ವಿಷ್ಣು) ಆಗಿರುವುದರಿಂದ ಅವಧಾರಣ ಕೂಡುತ್ತದೆ.

೪) 'ಸ ಯೋಽತೋಽಶ್ರುತೋಽಗತೋಽಮತಃ' ಎಂಬುದಾಗಿ ಮುಂದಿನ ವಾಕ್ಯದಲ್ಲಿ ಸರ್ವಗತನಾದವನನ್ನು ಪೂರ್ತಿಯಾಗಿ ತಿಳಿಯಲು ಸಾಧ್ಯವಿಲ್ಲ ಇತ್ಯಾದಿ ಹೇಳಿದ್ದಾರೆ. ಈ 'ಸಾಕಲ್ಯೇನಾಶ್ರುತತ್ವ' ಎಂಬುದು ವಿಷ್ಣುವಿನ ಲಿಂಗ.

೫) 'ಸರ್ವಭೂತಗತ' ಎಂಬ ಇದೇ ವಿಷಯ 'ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ' ಎಂಬುದಾಗಿ ಗೀತೆಯಲ್ಲಿ ಬಂದಿದೆ. ಅಲ್ಲಿ ಕೃಷ್ಣನು

ತಾನೇ ಸರ್ವಭೂತಗತ ಎಂದು ಹೇಳಿಕೊಂಡಿರುವುದರಿಂದ ಇಲ್ಲಿರುವ ಸರ್ವಗತನೂ ವಿಷ್ಣುವೇ ಆಗಬೇಕು.

ಸರ್ವಗತನನ್ನು ವಿಷ್ಣು ಎಂದು ಹೇಳಿದರೆ ಯಾವ ಬಾಧಕವೂ ಇಲ್ಲ.

೧) 'ಸಂವತ್ಸರೋ ವೈ ಪ್ರಜಾಪತಿಃ' ಇತ್ಯಾದಿ ಪ್ರಮಾಣಗಳಿಂದ 'ಸಂವತ್ಸರ' ಶಬ್ದಕ್ಕೆ ಪ್ರಜಾಪತಿ (ಚತುರ್ಮುಖ) ಎಂದರ್ಥ. 'ಸಂವತ್ಸರ ಸಾರ' ಎಂದರೆ ಚತುರ್ಮುಖನಿಗೂ ನಿಯಾಮಕ ಎಂದರ್ಥ. ಅದು ವಿಷ್ಣುವೇ. ಹೀಗೆ ಸಂವತ್ಸರ ಸಾರತ್ವವು ಎಂಬುದು ವಿಷ್ಣು ಲಿಂಗವೇ ಆಗಿದೆ.

೨) ಆದಿತ್ಯ ಶಬ್ದವೂ ವಿಷ್ಣು ಪರವೇ ಆಗಿದೆ. 'ಅಂತಸ್ತದ್ಧರ್ಮೋಪದೇಶಾತ್' ಎಂಬ ಅಧಿಕರಣದಲ್ಲಿ ಎಲ್ಲಾ ದೇವತಾವಾಚಕ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಅದೇ ನ್ಯಾಯದಿಂದ ಆದಿತ್ಯಶಬ್ದವೂ ವಿಷ್ಣುಪರ ಆಗಬಹುದು.

೩) ವಿಷ್ಣುವು ಸರ್ವಗತನಾದ್ದರಿಂದ ಚಿಕ್ಕಸ್ಥಳದಲ್ಲೂ ಇದ್ದೇ ಇದ್ದಾನಾದ್ದರಿಂದ 'ಅಲ್ಪೌಕಸ್ತ್ವ' ಎಂಬುದೂ ವಿಷ್ಣು ಲಿಂಗವೇ ಆಯಿತು. ಆಕಾಶವು ಹೇಗೆ ಸರ್ವಗತವಾಗಿಯೂ ಅಲ್ಪಸ್ಥಾನಸ್ಥಿತವಾಗಿದೆಯೋ ಅದೇ ರೀತಿ ವಿಷ್ಣುವೂ ಕೂಡ ಸರ್ವಗತನಾದರೂ ಅಲ್ಪಸ್ಥಾನಸ್ಥಿತನಾಗಬಹುದು.

೪) 'ಏತಂ ಸರ್ವೇಷು ಭೂತೇಷು' ಎಂಬಲ್ಲಿ 'ಭೂತ' ಎಂಬ ಶಬ್ದವನ್ನು ವಿಶೇಷವಾಗಿ ಹೇಳಿರುವುದು ಭೂತಗಳಲ್ಲಿ ಅವನನ್ನು ಉಪಾಸನೆ ಮಾಡಬೇಕು ಎಂಬ ದೃಷ್ಟಿಯಿಂದ. ಹಾಗಾಗಿ ಕೇವಲ ಭೂತಗಳಲ್ಲಿ ಮಾತ್ರ ವ್ಯಾಪ್ತನಾಗಿದ್ದಾನೆ ಉಳಿದೆಡೆ ಇಲ್ಲ ಎಂಬ ಅಪಾರ್ಥಕ್ಕೆ ಅವಕಾಶವಿಲ್ಲ.

೫) ವಿಷ್ಣುವು ಸರ್ವಗತನಾದರೂ ಅಲ್ಲಲ್ಲಿರುವ ಸುಖದುಃಖ ಭೋಗ ಅವನಿಗಿಲ್ಲ. ವಿಶೇಷ ಸಾಮರ್ಥ್ಯವಿರುವುದರಿಂದ.

೬) ಆದಿತ್ಯ ಅನ್ಯನಾದರೆ 'ಏತಂ ಆದಿತ್ಯೇ' ಎಂದೂ ಹೇಳಬೇಕಾಗಿತ್ತು ಎಂಬ ಪ್ರಶ್ನೆಗೂ ಅವಕಾಶವಿಲ್ಲ ಏಕೆಂದರೆ 'ಭೂತೇಷು' ಎಂದು ಹೇಳಿದ್ದರಿಂದಲೇ ಭೂತಗಳಲ್ಲಿ ಒಂದಾದ ಆದಿತ್ಯನನ್ನೂ ಸಂಗ್ರಹಿಸಲಾಗಿದೆ.

೭) ವಿಷ್ಣುವು ಚಕ್ಷುರಾದಿಗಳಿಗೆ ಸ್ವಾಮಿ (ನಿಯಾಮಕ)ಯಾದ್ದರಿಂದ ಅವನು ಚಕ್ಷುರ್ಮಯ, ಶ್ರೋತ್ರಮಯ ಇತ್ಯಾದಿ ಆಗಿದ್ದಾನೆ.

ಇನ್ನು ಸರ್ವಗತನಾದವನು ಆದಿತ್ಯ, ಜೀವ ಎಂದು ಇಟ್ಟುಕೊಂಡರೆ ಬಾಧಕವೂ ಇದೆ. ಆದಿತ್ಯ, ಜೀವ ಇವರೆಲ್ಲಾ 'ಅಣು'. ಅವರಲ್ಲಿ ಸರ್ವ-ಗತತ್ವ ಕೂಡುವುದಿಲ್ಲ. ಹೀಗಾಗಿ ಪೃಥಿವ್ಯಾದಿ ಸರ್ವತ್ರ ಇದ್ದಾನೆ ಎಂದು ಹೇಳಲ್ಪಟ್ಟವನು ವಿಷ್ಣುವೇ.

ಸರ್ವಭೂತಗಳಲ್ಲಿ ವ್ಯಾಪ್ತನಾದವನು ಆದಿತ್ಯನೇ ಆದರೆ ಆಗ ವಿಷ್ಣುವು ಭೂತಗಳಲ್ಲಿ ವ್ಯಾಪ್ತನಲ್ಲ ಅನ್ಯತ್ರವ್ಯಾಪ್ತ ಎಂದು ಪ್ರಾಪ್ತವಾಗುತ್ತದೆ. ಹಾಗಾದರೆ 'ಬ್ರಹ್ಮ ತತಮಪಶ್ಯತ್' ಎಂದು ಹಿಂದಿನ ಅಧಿಕರಣದ ವಿಷಯವಾಕ್ಯದಲ್ಲಿ ಬಂದಿರುವ ಸರ್ವಗತತ್ವ ವಿಷ್ಣುವಿಗೆ ಸಲ್ಲುವುದಿಲ್ಲ. ಈ ಆಕ್ಷೇಪ ಮತ್ತು ಇದರ ಸಮಾಧಾನ ಇದೇ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನ.

## ॥ ಓಂ ಅತ್ತಾ ಚರಾಚರಗ್ರಹಣಾತ್ ಓಂ ॥ ೧-೨-೨

ಈ ಅಧಿಕರಣದಲ್ಲಿ, ಹಿಂದಿನ ನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ ಎಂದು ಪೂರ್ವಪಕ್ಷ ಹುಟ್ಟುವುದರಿಂದ, ಪ್ರತ್ಯುದಾಹರಣ ಎಂಬ ಸಂಗತಿಯಿದೆ.

ಬೃಹದಾರಣ್ಯಕೋಪನಿಷತ್ತಿನ ಮೂರನೇ ಅಧ್ಯಾಯದಲ್ಲಿ 'ಸ ಯದ್ಯದೇವ ಅಸೃಜತ ತತ್ರದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ' ಎಂಬ ವಾಕ್ಯವಿದೆ. ಇಲ್ಲಿ 'ಸರ್ವಂ ವಾ ಅತ್ತಿ' ಎಂಬುದಾಗಿ 'ಸರ್ವಾತ್ತೃತ್ವ' ಶ್ರುತವಾಗಿದೆ. ಈ ಅತ್ತಾ (ಸಂಹರ್ತಾ) ಯಾರು? ದೇವಮಾತೆಯಾದ ಅದಿತಿಯೋ ವಿಷ್ಣುವೋ ಎಂಬುದೇ ಸಂದೇಹ. ಇಲ್ಲಿ ಹೇಳಲ್ಪಟ್ಟಿರುವ 'ಅತ್ತಾ' ಅದಿತಿಯೇ ಎಂದು ಪೂರ್ವಪಕ್ಷ. 'ಅದಿತಿ' ಶಬ್ದವಿರುವುದರಿಂದ, ಹಾಗು 'ಅದಿತಿತ್ವ' ಎಂಬ ಲಿಂಗವಿರುವುದರಿಂದ.

ಪ್ರಶ್ನೆ :- ಹಿಂದಿನ ಅಧಿಕರಣದಲ್ಲಿ ಆದಿತ್ಯ ಶಬ್ದವನ್ನು ವಿಷ್ಣುಪರವಾಗಿ ಹೇಳಿದಂತೆ ಇಲ್ಲಿರುವ 'ಅದಿತಿ' ಶಬ್ದವನ್ನೂ ವಿಷ್ಣುಪರ ಎಂದು ಏಕೆ ಹೇಳಬಾರದು?

**ಪರಿಹಾರ :-** ಆದಿತ್ಯ ಶಬ್ದವನ್ನು ವಿಷ್ಣುಪರ ಎಂದು ಒಪ್ಪಬಹುದು. ಏಕೆಂದರೆ ಆದಿತ್ಯ 'ಸವಿತೃ' ಇವೆರಡು ಪರ್ಯಾಯ ಶಬ್ದಗಳು. ಅಂತರಧಿ-ಕರಣದ ವಿಷಯ ವಾಕ್ಯದಲ್ಲಿ ಸವಿತೃ ಶಬ್ದ ಬಂದಿದೆ. ಅದನ್ನು ವಿಷ್ಣುಪರ ಎಂದು ಸಾಧನೆ ಮಾಡಿರುವುದರಿಂದ ಅದರ ಪರ್ಯಾಯ ಶಬ್ದವಾದ ಆದಿತ್ಯ ಶಬ್ದವೂ ವಿಷ್ಣುಪರವಾಗಬಹುದು. ಆದರೆ ಅಂತರಧಿಕರಣದ ವಿಷಯ-ವಾಕ್ಯದಲ್ಲಿ 'ಅದಿತಿ' ಶಬ್ದ ಬಂದಿಲ್ಲ. ಹಾಗಾಗಿ ಅದಿತಿ ಶಬ್ದ ವಿಷ್ಣುಪರವಾಗಲು ಸಾಧ್ಯವಿಲ್ಲ. ಇಲ್ಲಿರುವ ಶ್ರುತಿ ನಿರವಕಾಶವಾಯಿತು.

ಇನ್ನು ಇಲ್ಲಿರುವ 'ಅದಿತಿತ್ವ' ಎಂಬ ಲಿಂಗವನ್ನೂ ವಿಷ್ಣುವಿನಲ್ಲಿ ಒಪ್ಪಲು ಸಾಧ್ಯವಿಲ್ಲ. ಅದಿತಿತ್ವ ಎಂದರೆ ಅತ್ತೃತ್ವ. ವಿಷ್ಣುವಾದರೋ 'ಅನಶ್ನನ್....' ಎಂಬ ಶ್ರುತಿಯಲ್ಲಿ 'ಅನತ್ತಾ' (ಏನನ್ನೂ ತಿನ್ನದವನು) ಎಂದು ಪ್ರಸಿದ್ಧ-ನಾಗಿದ್ದಾನೆ. ಹಾಗಾಗಿ ಅತ್ತೃತ್ವ ಅವನಲ್ಲಿ ಕೂಡುವುದಿಲ್ಲ.

ಹೀಗೆ ಶ್ರುತಿಲಿಂಗಗಳೆರಡೂ ನಿರವಕಾಶವಾದವು. ಅದಿತಿ ಶಬ್ದವನ್ನು ಅಂತರಧಿಕರಣ ನ್ಯಾಯದಿಂದ ವಿಷ್ಣುಪರ ಎಂದು ಹೇಳಿದರೂ, ನಿವರಕಾಶ-ವಾದ ಲಿಂಗದ ಅನುಗ್ರಹವಿರುವುದರಿಂದ ಶ್ರುತಿಯು ಪ್ರಬಲವೇ ಆಗುತ್ತದೆ.

**ಸಿದ್ಧಾಂತ :-** ಶ್ರುತ್ಯುಕ್ತನಾದ 'ಅತ್ತಾ' ವಿಷ್ಣುವೇ. ಏಕೆಂದರೆ,

೧) 'ಸರ್ವಂ ವಾ ಅತ್ತಿ' ಎಂಬ ಇಲ್ಲಿರುವ ವಾಕ್ಯದಲ್ಲಿ ಸರ್ವಾತ್ತೃತ್ವ ಉಕ್ತವಾಗಿದೆ. 'ಸಾರ್ವಾತ್ತೃತ್ವ' ಎಂದರೆ 'ಸರ್ವಸಂಹರ್ತೃತ್ವ'. ಈ ಸರ್ವ-ಸಂಹರ್ತೃತ್ವವು 'ಯಮಪ್ಯೇತಿ ಭುವನಂ ಸಾಂಪರಾಯೇ' 'ಸ್ರಷ್ಟಾ ಪಾತಾ ತಥೈವಾತ್ತಾ' ಇತ್ಯಾದಿ ಶ್ರುತಿ ಸ್ಮೃತಿಗಳಿಂದ ವಿಷ್ಣುವಿನಲ್ಲೇ ಪ್ರಸಿದ್ಧವಾಗಿದೆ.

೨) ಈ ಸರ್ವಾತ್ತೃತ್ವವೇ (ಸರ್ವಸಂಹರ್ತೃತ್ವವೇ) ಅದಿತಿ ಶಬ್ದದ ಪ್ರವೃತ್ತಿ ನಿಮಿತ್ತ, ಪ್ರವೃತ್ತಿನಿಮಿತ್ತ ವಿಷ್ಣುವಿನಲ್ಲಿ ಇದ್ದ ಮೇಲೆ ಅದಿತಿ ಶಬ್ದವೂ ವಿಷ್ಣುವಾಚಕವಾಯಿತು. ಹೀಗೆ ಅದಿತಿತ್ವ ಲಿಂಗ ಹಾಗು ಅದಿತಿ ಶಬ್ದ ಇವೆರಡೂ ವಿಷ್ಣುವಿನಲ್ಲಿ ಸಾವಕಾಶವಾಗಿದೆ.

೩) 'ನೈವೇಹ ಕಿಂಚನಾಗ್ರ ಆಸೀತ್ ಮೃತ್ಯುನೈವೇದಮಾವೃತಮಾಸೀತ್' ಎಂಬುದಾಗಿ ಇದು ಬ್ರಹ್ಮ ಪ್ರಕರಣವೆಂದು ತಿಳಿಯುತ್ತದೆ. ಬ್ರಹ್ಮ ವಿಷ್ಣುವೇ ಆಗಬೇಕು ಅದಿತಿಯಾಗಲು ಸಾಧ್ಯವಿಲ್ಲ.

'ಅನಶ್ನನ್....' ಎಂಬ ಶ್ರುತಿಯ ವಿರೋಧ ಬರುವುದಿಲ್ಲವೇ ಎಂದರೆ ಅದಕ್ಕೆ ಉತ್ತರ ಮುಂದೆ ಕೊಡಲಾಗಿದೆ.

**ಪೂ.ಪ. ಹಾಗೂ ಸಿದ್ಧಾಂತದ ಫಲ :-** ಅದಿತಿ ಶಬ್ದ ಹಾಗು ಅದಿತಿತ್ವ ಲಿಂಗದಿಂದ ಅದಿತಿಗೆ ಅತ್ತೃತ್ವ ಒಪ್ಪಬೇಕು. ಆದರೆ ಸರ್ವಾತ್ತೃತ್ವ ಬಾಧಿತವಾದ್ದರಿಂದ ಸಂಕುಚಿತ ಸರ್ವಾತ್ತೃತ್ವ ಬರುವುದು. ಆಗ ವಿಷ್ಣುವಿಗೂ ಕೂಡ ಕತಿಪಯ (ಅದಿತಿಯು ಸಂಹರಿಸದೇ ಇರುವುದರ) ಅತ್ತೃತ್ವವನ್ನೇ ಸಿದ್ಧಾಂತಿಯು ಒಪ್ಪಬೇಕು. ಆಗ ಹಿಂದೆ ಹೇಳಿದ 'ಸರ್ವಸಂಹರ್ತೃತ್ವ ' ಎಂಬ ಲಕ್ಷಣಕ್ಕೆ ಅತಿವ್ಯಾಪ್ತಿ.

ಅಥವಾ, ಇಲ್ಲಿರುವ ಶ್ರುತಿಲಿಂಗಗಳಿಂದ ಅದಿತಿಗೇ, 'ಅಸಂಕುಚಿತ ಸರ್ವಸಂಹರ್ತೃತ್ತ್ವ' ಸಿದ್ಧವಾಗಿ ಜನ್ಮಾಧಿಕರಣದಲ್ಲಿ ವಿಷ್ಣುವಿಗೆ ಹೇಳಿದ ಈ ಲಕ್ಷಣಕ್ಕೆ 'ಅಸಂಭವ' ಎಂದು ದೋಷ ಬರುತ್ತದೆ. ಈ ಆಕ್ಷೇಪ ಮತ್ತು ಅದಕ್ಕೆ ಸಮಾಧಾನ ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ ॥ ೧-೨-೩

ಈ ಅಧಿಕರಣದಲ್ಲಿ, ಹಿಂದೆ ಹೇಳಿದ ಅತ್ತೃತ್ವದ ಒಂದು ಪ್ರಭೇದವಾದ ಕರ್ಮಫಲಭೋಕ್ತೃತ್ವದ ವಿಚಾರವನ್ನು ಮಾಡುವುದರಿಂದ 'ಪ್ರಸಂಗ' ಎಂಬ ಸಂಗತಿಯಿದೆ.

ಅಥವಾ ಹಿಂದಿನ ಅಧಿಕರಣದ ಮೇಲಿನ ಆಕ್ಷೇಪದಿಂದ ಪೂರ್ವಪಕ್ಷ ಹುಟ್ಟುವುದರಿಂದ 'ಆಕ್ಷೇಪಿಕೀ' ಎಂಬ ಸಂಗತಿಯಿದೆ.

ಕಾಠಕೋಪನಿಷತ್ತಿನ ಮೂರನೇವಲ್ಲೀಯಲ್ಲಿ 'ಋತಂ ಪಿಬಂತೌ ಸುಕೃತಸ್ಯಲೋಕೇ ಗುಹಾಂ ಪ್ರವಿಷ್ಟೌ' ಎಂಬ ವಾಕ್ಯವಿದೆ. ಇಲ್ಲಿರಿವ 'ಋತಂ ಪಿಬಂತೌ'

ಎಂದರೆ ಕರ್ಮಫಲಭೋಕ್ತೃಗಳು ಎಂದರ್ಥ. ಈ ಕರ್ಮಫಲಭೋಕ್ತೃಗಳು ಜೀವೇಶ್ವರರೋ ಅಥವಾ ಈಶ್ವರನ ಎರಡು ರೂಪಗಳೋ ಎಂದು ಸಂದೇಹ.

ಕರ್ಮಫಲಭೋಕ್ತೃಗಳು ಜೀವೇಶ್ವರರೇ ಎಂದು ಪೂರ್ವಪಕ್ಷ. ಏಕೆಂದರೆ, 'ಪಿಬಂತೌ' ಎಂಬುದಾಗಿ ದ್ವಿವಚನವಿದೆ. ದ್ವಿವಚನವು ದ್ವಿತ್ವವಿಶಿಷ್ಟವಾಚಿಯಾಗಿದೆ. ದ್ವಿತ್ವವು ಅಭೇದವಿದ್ದಲ್ಲಿ ಕೂಡುವುದಿಲ್ಲ. ಈಶ್ವರನ ರೂಪಗಳಿಗಾದರೋ ಅಭೇದವಿದೆ. ಇನ್ನು ಈಶ್ವರನಿಗೆ ಕರ್ಮಬಂಧವಿಲ್ಲ ಹಾಗಾಗಿ ಕರ್ಮಫಲ-ಭೋಕ್ತೃತ್ವವೂ ಕೂಡುವುದಿಲ್ಲ.

**ಪ್ರಶ್ನೆ** :- ಜೀವೇಶ್ವರರು ಕರ್ಮಫಲಭೋಕ್ತೃಗಳು ಎಂದಿಟ್ಟುಕೊಂಡರೂ ಅವರಲ್ಲಿ ಒಬ್ಬನಾದ ಈಶ್ವರನಿಗೆ ಕರ್ಮಫಲಭೋಗ ಕೂಡುವುದಿಲ್ಲವಲ್ಲಾ?

**ಪರಿಹಾರ** :- ನಿಜ, ಆದರೂ ಛತ್ರಿನ್ಯಾಯದಿಂದ ಈಶ್ವರನೂ ಕರ್ಮ-ಫಲಭೋಕ್ತಾ ಆಗುತ್ತಾನೆ. (ಒಂದು ಗುಂಪಿನಲ್ಲಿ ಕೆಲವರು ಮಾತ್ರ ಛತ್ರಿ ಹಿಡಿದಿದ್ದರೂ ಎಲ್ಲರನ್ನೂ ಸಂಬೋಧಿಸಿ ಛತ್ರಿ ಹಿಡಿದವರು ಹೋಗುತ್ತಿದ್ದಾರೆ ಎನ್ನುವಂತೆ) ಜೀವನಿಗೇ ಕರ್ಮಫಲಭೋಕ್ತೃತ್ವ ಇದ್ದರೂ ಅವನ ಜೊತೆಗೇ ಇರುವ ಈಶ್ವರನಿಗೂ ಹೇಳಬಹುದು.

**ಸಿದ್ಧಾಂತ** :- ಕರ್ಮಫಲ ಭೋಕ್ತೃಗಳು ಈಶ್ವರನ ಎರಡು ರೂಪಗಳೇ.

೧) 'ಗುಹಾಂ ಪ್ರವಿಷ್ಟೌ' ಎಂಬುದಾಗಿ ಈ ವಾಕ್ಯದಲ್ಲಿ ಕರ್ಮಫಲ-ಭೋಕ್ತೃಗಳಿಗೆ 'ಗುಹಾನಿವಿಷ್ಟತ್ವ' ಶ್ರುತವಾಗಿದೆ. ಇದು ವಿಷ್ಣುಲಿಂಗ 'ಯೋ ವೇದ ನಿಹಿತಂ ಗುಹಾಯಾಂ' 'ಗುಹಾಹಿತಂ ಗಹ್ವರೇಷ್ಠಂ ಪುರಾಣಂ' ಮೊದಲಾದ ಪ್ರಮಾಣಗಳಿಂದ ಅದು ವಿಷ್ಣುವಿನಲ್ಲೇ ಪ್ರಸಿದ್ಧವಾಗಿದೆ. (ಗುಹಾನಿವಿಷ್ಟತ್ವ = ಹೃದಯಗುಹಾಸ್ಥತ್ವ)

೨) 'ಯಃ ಸೇತುರೀಜಾನಾನಾಂ ಅಕ್ಷರಂ ಬ್ರಹ್ಮ ತತ್ಪರಂ' ಎಂಬಲ್ಲಿ ಪರಬ್ರಹ್ಮ ಶಬ್ದ ಶ್ರುತವಾಗಿದೆ. ಪರಬ್ರಹ್ಮ ವಿಷ್ಣುವೇ.

೩) 'ಯಃ ಸೇತುರೀಜಾನಾನಾಂ' ಎಂಬುದಾಗಿ ಸೇತುತ್ವ (ಆಶ್ರಯ) ಎಂಬ ಲಿಂಗ, ಹಾಗು 'ಅಭಯಂ ತಿತೀರ್ಷತಾಂ ಪಾರಂ' ಎಂಬಲ್ಲಿ 'ಅಭಯತ್ವ'

ಎಂಬ ಲಿಂಗ ಶ್ರುತವಾಗಿದೆ. ಈ ಎರಡೂ ಲಿಂಗಗಳು ವಿಷ್ಣುವಿಗೆ ಸಂಬಂಧಪಟ್ಟದ್ದು ಎಂಬುದು 'ಏಷ ಸೇತುರ್ವಿಧೃತಿಃ' ಮೊದಲಾದ ವಾಕ್ಯ-ಗಳಿಂದ ಸಿದ್ಧವಾಗಿದೆ.

೪) 'ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾಸ್ಥಿತಃ' ಎಂಬ ಸ್ಮೃತಿಯ ಬಲದಿಂದ ವಿಷ್ಣುವು ಅಭಿನ್ನನಾದರೂ ಅವನ ಎರಡು ರೂಪವಿಶೇಷಗಳನ್ನು ಇಟ್ಟುಕೊಂಡು ದ್ವಿವಚನ ಪ್ರಯೋಗ ಮಾಡಬಹುದು.

೫) ಕರ್ಮಫಲಭೋಗವೂ ವಿಷ್ಣುವಿಗೆ ಕೂಡುತ್ತದೆ. 'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್' ಎಂಬ ಪ್ರಮಾಣದಿಂದ ವಿಷ್ಣುವು ಶುಭಫಲಭೋಕ್ತಾ ಎಂದು ಸಿದ್ಧವಾಗಿದೆ.

೬) 'ಅನಶ್ನನ್ . . . . ' ಎಂಬ ಶ್ರುತಿಯ ವಿರೋಧವೂ ಇಲ್ಲ. ವಿಷ್ಣುವು ಅಶುಭಫಲಭೋಕ್ತಾ ಅಲ್ಲವಾದ್ದರಿಂದ ಅವನನ್ನು 'ಅನಶ್ನನ್' ಎಂದು ಕರೆಯಲಾಗಿದೆ.

ಇಲ್ಲಿ ಪ್ರಸಕ್ತವಾದ ಕರ್ಮಫಲಭೋಕ್ತೃತ್ವವು ವಿಷ್ಣುವಿಗಿಂತ ಅನ್ಯನಿಗೆ ಎಂದಾದರೆ ಆಗ ಹಿಂದೆ ಹೇಳಿದ (ಜನ್ಮಾಧಿಕರಣದಲ್ಲಿ) ಸರ್ವಾತ್ತೃತ್ವವು ವಿಷ್ಣುವಿಗೆ ಕೂಡುವುದಿಲ್ಲ ಎಂಬ ಆಕ್ಷೇಪ ಹಾಗು ಸಮಾಧಾನ. ಇದೇ ಕ್ರಮ-ವಾಗಿ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಅಂತರ ಉಪಪತ್ತೇಃ ಓಂ ॥ ೧-೨-೪

ಈ ಅಧಿಕರಣದಲ್ಲಿ ಆಕ್ಷೇಪಿಕೀ ಎಂಬ ಸಂಗತಿಯಿದೆ. ಹೇಗೆಂದರೆ, ಇಲ್ಲಿ ಪ್ರಸ್ತುತನಾಗಿರುವ ಚಕ್ಷುರಂತಸ್ಥನನ್ನು 'ಅಭಯ' ಎಂದು ಕರೆದಿದ್ದಾರೆ. ಈ ಅಭಯ ಎನಿಸಿಕೊಂಡ ಚಕ್ಷುರಂತಸ್ಥನು ವಿಷ್ಣುವಿಗಿಂತ ಅನ್ಯನಾದರೆ ಆಗ ಹಿಂದಿನ ಅಧಿಕರಣದಲ್ಲಿ ಪ್ರಸ್ತುತನಾದ, ಅಭಯ ಎನಿಸಿಕೊಂಡ ಗುಹಾ-ಪ್ರವಿಷ್ಟನೂ ಅನ್ಯನಾಗಬೇಕು. ಎಂಬುದೇ ಆಕ್ಷೇಪ.

ಛಾಂದೋಗ್ಯೋಪನಿಷತ್ತಿನ ನಾಲ್ಕನೇ ಅಧ್ಯಾಯದಲ್ಲಿ 'ಯ ಏಷೋಽ-ತರಕ್ಷಣಿ ಪುರುಷೋ ದೃಶ್ಯತೆ ಏಷ ಆತ್ಮೇತಿ ಹೋವಾಚ ಏತದಮೃತಮಭಯ

ಮೇತದ್ಬ್ರಹ್ಮ' ಎಂಬ ವಾಕ್ಯವಿದೆ. ಇಲ್ಲಿ ಚಕ್ಷುರಂತಸ್ಥನಾದ ಆತ್ಮಾ ಶ್ರುತ-ನಾಗಿದ್ದಾನೆ. ಈ ಚಕ್ಷುರಂತಸ್ಥನು ಅಗ್ನಿಯೋ 'ವಿಷ್ಣುವೋ ಎಂಬುದೇ ಸಂದೇಹ.

ಚಕ್ಷುರಂತಸ್ಥನು ಅಗ್ನಿಯೇ ಎಂದು ಪೂರ್ವಪಕ್ಷ. ಏಕೆಂದರೆ,

೧) ''ಯ ಏಷ 'ಆದಿತ್ಯೇ ಪುರುಷಃ ಸೋಽಹಮಸ್ಮಿ ಸ ಏವಾಹಮಸ್ಮಿ'' ಎಂಬಲ್ಲಿ ಗಾರ್ಹಪತ್ಯ ಅಗ್ನಿಯು ತನ್ನನ್ನು ಆದಿತ್ಯನಲ್ಲಿರುವವನು ನಾನೇ ಎಂದು ಹೇಳಿಕೊಂಡಿದ್ದಾನೆ. 'ಆದಿತ್ಯಃ ಚಕ್ಷುರ್ಭೂತ್ವಾ'' ಎಂಬ ಶ್ರುತಿಯಿಂದ ಚಕ್ಷುರಿಂದ್ರಿಯಕ್ಕೂ ಸೂರ್ಯಮಂಡಲಕ್ಕೂ ಒಬ್ಬನೇ ದೇವತೆ ಎಂದು ತಿಳಿಯುತ್ತಿದೆ. ಅಗ್ನಿಯು ಆದಿತ್ಯನಲ್ಲಿ ಇದ್ದಮೇಲೆ ಅದೇ ಆದಿತ್ಯನು ಚಕ್ಷುಸ್ಸಿ-ನಲ್ಲೂ ಇರುವುದರಿಂದ ಅಗ್ನಿಯು ಚಕ್ಷುರಂತಸ್ಥನಾಗುತ್ತಾನೆ.

೨) ''ಅಥ ಹಾಗ್ನಯಃ ಸಮೂದಿರೇ' ಎಂಬುದಾಗಿ ಈ ಪ್ರಕರಣ-ದಲ್ಲಿ 'ಅಗ್ನಿ' ಶಬ್ದ ಅನೇಕಬಾರಿ ಶ್ರುತವಾಗಿದೆ. ಶ್ರುತಿಬಾಹುಲ್ಯದಿಂದಲೂ ಚಕ್ಷುರಂತಸ್ಥ ಅಗ್ನಿಯೇ.

**ಪ್ರಶ್ನೆ** :- ''ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ'' ಎಂಬ ಶ್ರುತಿಸಮಾಖ್ಯಾವಿರುವುದರಿಂದ ಇಲ್ಲಿ ಅಗ್ನಿ ಪ್ರಯುಕ್ತವಾದ 'ಅಹಂ' ಶಬ್ದವು ಅಂತರ್ಯಾಮಿಯಾದ ವಿಷ್ಣುಪರ ಎಂದೇಕೆ ಹೇಳಬಾರದು?

**ಪರಿಹಾರ** :- ''ಸೋಽಹಮಸ್ಮಿ' 'ಸ ಏವಾಹಮಸ್ಮಿ' ಎಂಬ ವಾಕ್ಯವು 'ಈ ಪ್ರಕರಣದಲ್ಲಿ ಅನೇಕ ಬಾರಿ ಬಂದಿದೆ. ಅಭ್ಯಾಸ ಎಂಬ ತಾತ್ಪರ್ಯ ಲಿಂಗವು ಸಮಾಖ್ಯಾಗಿಂತ ಪ್ರಬಲ. ಹಾಗಾಗಿ ಇಲ್ಲಿ ಅಹಂ ಶಬ್ದಕ್ಕ ಅಂತರ್ಯಾಮೀ ಎಂಬ ಅರ್ಥ ಮಾಡಬಾರದು.

**ಪ್ರಶ್ನೆ** :- 'ಅಹಂ' ಶಬ್ದಕ್ಕ ಲೋಕಪ್ರಸಿದ್ಧವಾದ 'ನಾನು' ಎಂಬ ಅರ್ಥ ಮಾಡುವುದಕ್ಕಿಂತಲೂ ಲೋಕದಲ್ಲಿ ಪ್ರಸಿದ್ಧವಲ್ಲದ 'ನನ್ನ ಅಂತರ್ಯಾಮೀ' ಎಂಬ ಅರ್ಥವನ್ನು ಮಾಡಿದರೆ ಆಗ 'ಅಪೂರ್ವತಾ' ಎಂಬ ಒಂದು ವಿಶೇಷ ಪ್ರಾಪ್ತವಾಗುತ್ತದೆ?

**ಪರಿಹಾರ :-** ಇಲ್ಲಿ 'ಅಪಹತೇ ಪಾಪಕೃತ್ಯಾಂ ಉಪವಯಂ ತಂ ಭುಂಜಾಮಃ' ಎಂಬ ಅರ್ಥವಾದವಿದೆ. (ನಾವು ಪಾಪಗಳನ್ನು ಕಳೆದುಕೊಂಡು ನಿನ್ನನ್ನೇ ಆಶ್ರಯಿಸುತ್ತೇವೆ ಎಂದರ್ಥ). 'ಅಪೂರ್ವತಾ' ಎಂಬ ತಾತ್ಪರ್ಯ-ಲಿಂಗಕ್ಕಿಂತಲೂ 'ಅರ್ಥವಾದ' ಎಂಬ ತಾತ್ಪರ್ಯಲಿಂಗ ಪ್ರಬಲ. ಹಾಗಾಗಿ ಅರ್ಥಾಂತರಕ್ಕೆ ಅವಕಾಶವಿಲ್ಲ.

**ಸಿದ್ಧಾಂತ :-** ಚಕ್ಷುರಂತಸ್ಥ ವಿಷ್ಣುವೇ. ಹೇಗೆಂದರೆ,

೧) 'ಏತದಮೃತಂ' ಎಂದು ಚಕ್ಷುರಂತಸ್ಥನಿಗೆ 'ಅಮೃತತ್ವವು' ಹೇಳಲ್ಪಟ್ಟಿದೆ. ಇದು ವಿಷ್ಣುವಿನ ಲಿಂಗ. ಅಗ್ನಿಯ ಲಿಂಗವಾಗಲು ಸಾಧ್ಯವಿಲ್ಲ.

''ಪರಿಮ್ರಿಯಂತೇ ವಿದ್ಯುದ್ವೃಷ್ಟಿಶ್ಚಂದ್ರಮಾ ಆದಿತ್ಯೋ ಅಗ್ನಿಃ'' ಎಂಬುದಾಗಿ ಅಗ್ನಿಗೆ ನಾಶವು ಶ್ರುತವಾಗಿದೆ. ಅದೇ ರೀತಿ ಅಭಯತ್ವವೂ ವಿಷ್ಣು ಲಿಂಗವೇ. 'ಭಯಾದಗ್ನಿ ಸ್ತಪತಿ' ಎಂದು ಅಗ್ನಿಗೆ ಭಯವಿದೆ ಎಂದು ಹೇಳಲಾಗಿದೆ.

೨) ಚಕ್ಷುರಂತಸ್ಥನಲ್ಲಿ 'ಬ್ರಹ್ಮ' 'ಆತ್ಮಾ' ಶಬ್ದಗಳು ಶ್ರುತವಾಗಿವೆ. ಈ ಶಬ್ದಗಳು ವಿಷ್ಣೇಕನಿಷ್ಠ.

೩) 'ತದ್ಯದಸ್ಮಿನ್ ಸರ್ಪಿರ್ವಾ ಉದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ'' ಎಂಬುದಾಗಿ 'ಅಸಂಗತ್ವಾಪಾದಕತ್ವ' (ಕಣ್ಣಿಗೆ ಅಸಂಗತ್ವವನ್ನು ತಂದುಕೊಡುವುದು) ಎಂಬ ಲಿಂಗ ಶ್ರುತವಾಗಿದೆ. ಅದೇ ರೀತಿ ಸಂಯದ್ವಾಮತ್ವ (ಎಲ್ಲ ಸೌಂದರ್ಯಗಳ ನೆಲೆ) ಎಂಬ ಲಿಂಗವೂ ಶ್ರುತವಾಗಿದೆ. ಇವೆರಡೂ ವಿಷ್ಣುವಿನ ಲಿಂಗಗಳೇ ಆಗಿವೆ.

೪) ''ಕಂ ಬ್ರಹ್ಮ ಖಂ ಬ್ರಹ್ಮ'' ಎಂದು ಆರಂಭವಾಗುವುದರಿಂದ ಇದು ಬ್ರಹ್ಮ ಪ್ರಕರಣ. ಈ ವಿದ್ಯೆಗಳನ್ನು ಉಪಾಸನೆ ಮಾಡಿದವರು ಬ್ರಹ್ಮನನ್ನು ಹೊಂದುತ್ತಾರೆ ಎಂದು ಉಪಸಂಹಾರದಲ್ಲಿದೆ. ಹಾಗಾಗಿ ಇದು ಸಂಪೂರ್ಣವಾಗಿ ಬ್ರಹ್ಮಪ್ರಕರಣ ಎಂದು ಒಪ್ಪಬೇಕು. ಮಧ್ಯದಲ್ಲಿ ಅಗ್ನಿಯ ವಿಚಾರ ಮಾಡ-ಲಾಗಿದೆ ಎಂದು ಒಪ್ಪಿದರೆ ಪ್ರಕರಣ ವಿಚ್ಛೇದವಾಗುತ್ತದೆ. ಅದು ಯುಕ್ತವಲ್ಲ.

**ಬಾಧಕ ಪರಿಹಾರ** :- 'ಅತ ಏವ ಪ್ರಾಣಃ' ಎಂಬಲ್ಲಿ ಹೇಳಲ್ಪಟ್ಟಂತೆ ಇಲ್ಲಿಯೂ ಕೂಡ ಅಗ್ನಿಯಿಂದ ಪ್ರಯುಕ್ತವಾದ 'ಅಹಂ' ಶಬ್ದಕ್ಕೆ 'ಅಂತ-ರ್ಯಾಮೀ' ಎಂದರ್ಥ. ಅಭ್ಯಾಸ ಅರ್ಥವಾದಗಳಿಗೂ ಅಂತರ್ಯಾಮೀ-ಪರವಾಗಿಯೇ ಅರ್ಥ ಹೇಳಬೇಕು.

**ಪರಪಕ್ಷೇ ಬಾಧಕೋಕ್ತಿ** :- ಇನ್ನು ಅಗ್ನಿಯನ್ನೇ ಚಕ್ಷುರಂತಸ್ಥ ಎಂದು ಒಪ್ಪಿದರೆ ಬಾಧಕವೂ ಇದೆ. ಅಗ್ನಿಯೂ ಒಬ್ಬ ಜೀವ. ಆದ್ದರಿಂದಲೇ ಅಸ್ವತಂತ್ರ , ಅವನಿಗಿನ್ನೊಬ್ಬ ಪ್ರೇರಕ ಬೇಕು. ಅವನೂ ಜೀವನಾದರೆ ಮತ್ತೆ ಅವನಿಗೊಬ್ಬ ಪ್ರೇರಕ ಹೀಗೆ 'ಅನವಸ್ಥಾ' ಎಂಬ ದೋಷ ಬರುತ್ತದೆ.

ಹಾಗಾಗಿ ಸ್ವತಂತ್ರನಾದ ವಿಷ್ಣುವೇ ಚಕ್ಷುರಂತಸ್ಥ ಎಂದು ಒಪ್ಪಬೇಕು.

**ಪೂರ್ವಪಕ್ಷ ಸಿದ್ಧಾಂತ ಫಲ** :- ಚಕ್ಷುರಂತಸ್ಥನು ವಿಷ್ಣುವಿಗಿಂತ ಅನ್ಯನಾದರೆ, ಕಣ್ಣಿನಲ್ಲಿರುವವನೇ ಆದಿತ್ಯನಲ್ಲೂ ಇರುವುದರಿಂದ, ಆದಿತ್ಯನಲ್ಲಿರುವವನೂ ವಿಷ್ಣುವಲ್ಲ ಎಂದಾಗಿ, 'ಯಶ್ಚಾಸಾವಾದಿತ್ಯೇ' ಎಂದು ಆನಂದಮಯ-ಪ್ರಕರಣದಲ್ಲಿ ಬಂದಿರುವ ಆದಿತ್ಯಸ್ಥನೂ ವಿಷ್ಣುವಿಗಿಂತ ಅನ್ಯನೇ ಎಂದು ಸಿದ್ಧವಾಗಿ ಆನಂದಮಯನೂ ವಿಷ್ಣುವಲ್ಲ ಎಂದಾಗುವುದು. ಈ ಆಕ್ಷೇಪ ಹಾಗು ಅದರ ಸಮಾಧಾನ ಇದೇ ಪೂರ್ವಪಕ್ಷ ಸಿದ್ಧಾಂತ ಫಲ.

## ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮ-ವ್ಯಪದೇಶಾತ್ ಓಂ ॥ ೧-೨-೫

ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ವಿಷ್ಣುತ್ವಸಾಧಕವಾದ 'ಅಮೃತತ್ವ' ಎಂಬ ಹೇತುವನ್ನು ಆಕ್ಷೇಪಮಾಡಿ ಪೂರ್ವಪಕ್ಷ ಹುಟ್ಟುವುದರಿಂದ ಈ ಅಧಿಕರಣದಲ್ಲಿ 'ಆಕ್ಷೇಪಿಕೀ' ಎಂಬ ಸಂಗತಿಯಿದೆ.

ಬೃಹದಾರಣ್ಯಕೋಪನಿಷತ್ತಿನ ಐದನೇ ಅಧ್ಯಾಯದಲ್ಲಿ 'ಏಷ ತ ಆತ್ಮಾ ಅಂತರ್ಯಾಮ್ಯಮೃತಃ' ಎಂಬ ವಾಕ್ಯವಿದೆ. ಇದರಲ್ಲಿ ಶ್ರುತವಾದ ಅಂತರ್ಯಾಮಿಯು ಪ್ರಕೃತಿಯೋ ಜೀವನೋ ಅಥವಾ ವಿಷ್ಣುವೋ ಎಂಬುದೇ ಸಂದೇಹ.

ಇಲ್ಲಿ ಶ್ರುತವಾದ ಅಂತರ್ಯಾಮಿಯು ಪ್ರಕೃತಿಯೇ ಎಂಬುದು ಒಂದು ಪೂರ್ವಪಕ್ಷ. ಕಾರಣವೇನೆಂದರೆ,

'ಯಸ್ಯ ಪೃಥಿವೀ ಶರೀರಂ' ಎಂಬಲ್ಲಿ ಅಂತರ್ಯಾಮಿಗೆ ಪೃಥಿವ್ಯಾದಿ-ಶರೀರಕತ್ವವನ್ನು ಹೇಳಲಾಗಿದೆ. ಪೃಥಿವ್ಯಾದಿಶರೀರಕತ್ವ ಎಂದರೆ ಪೃಥಿವ್ಯಾದಿ-ಸ್ವರೂಪತ್ವ ಎಂದರ್ಥ. ಪ್ರಕೃತಿಯು ಸರ್ವಕ್ಕೂ ಉಪಾದಾನ ಕಾರಣವಾದ್ದರಿಂದ ಪೃಥಿವ್ಯಾದಿ ಸ್ವರೂಪವಾಗಿದೆ. (ಉಪಾದಾನ ಉಪಾದೇಯಗಳಿಗೆ ಐಕ್ಯ-ವಿರುವುದರಿಂದ) ಹೀಗಾಗಿ ಪೃಥಿವ್ಯಾದಿ ಸ್ವರೂಪವಾದ ಅಂತರ್ಯಾಮೀ ಪ್ರಕೃತಿಯೇ ಆಗಬೇಕು.

**ಪ್ರಶ್ನೆ** :- 'ಶರೀರ' ಪದಕ್ಕೆ ಸ್ವರೂಪ ಎಂಬ ಅರ್ಥ ಹೇಗೆ?

**ಪರಿಹಾರ** :- 'ಪೂರ್ವ ಪಕ್ಷದ ಶರೀರ', 'ಅಧಿಕರಣ ಶರೀರ' ಇತ್ಯಾದಿ ಕಡೆಗಳಲ್ಲಿ ಶರೀರ ಶಬ್ದಕ್ಕ ಸ್ವರೂಪ ಎಂಬರ್ಥದಲ್ಲಿ ಪ್ರಯೋಗ ಕಂಡಿದೆ. ಅದರಂತೆ ಇಲ್ಲಿಯೂ ಸ್ವರೂಪ ಎಂಬ ಅರ್ಥ ಇಟ್ಟುಕೊಳ್ಳಬೇಕು.

**ಪ್ರಶ್ನೆ** :- ''ಯಃ ಪೃಥಿವ್ಯಾಂ ತಿಷ್ಠನ್'' ಎಂಬುದಾಗಿ ಅಂತರ್ಯಾಮಿಯು ಪೃಥಿವೀಯಲ್ಲಿದೆ ಎಂದು ಹೇಳಲಾಗಿದೆ. ಪೃಥಿವೀಸ್ವರೂಪವಾದ ಪ್ರಕೃತಿಯು (ಅಂತರ್ಯಾಮಿಯು) ಪೃಥಿವೀಯಲ್ಲಿರುವುದು ಹೇಗೆ ಸಾಧ್ಯ ?

**ಪರಿಹಾರ** :- 'ಕಾರಣವು ಕಾರ್ಯದಲ್ಲಿ ವ್ಯಾಪ್ತವಾಗಿದೆ' ಎಂಬ ನಿಯಮಾನು-ಸಾರ ಕಾರಣವಾದ ಪ್ರಕೃತಿಯು (ಅಂತರ್ಯಾಮೀ) ಕಾರ್ಯವಾದ ಪೃಥಿ-ವ್ಯಾದಿಗಳಲ್ಲಿ ಇದೆ ಎಂಬ ವ್ಯವಹಾರ ಕೂಡುತ್ತದೆ.

**ಪ್ರಶ್ನೆ** :- 'ಯಸ್ಯ ಪೃಥಿವೀ ಶರೀರಂ' ಎಂಬಲ್ಲಿ ಅಂತುರ್ಯಾಗೆ ಪೃಥಿವೀ ಸ್ವರೂಪತ್ವ ಅಂದರೆ 'ತಾದಾತ್ಮ್ಯ'ವನ್ನು ಹೇಳಲಾಗಿದೆ. ಅದೇ ಅಂತರ್ಯಾಮಿಗೆ 'ಯಃ ಪೃಥಿವ್ಯಾಂ ತಿಷ್ಠನ್' ಎಂಬುದಾಗಿ ತತ್‌ಸ್ಥತ್ವವನ್ನು (ಪೃಥಿವೀಯಲ್ಲಿದೆ) ಹೇಳಲಾಗಿದೆ. ಒಂದೇ ವಸ್ತುವಿಗೆ 'ತಾದಾತ್ಮ್ಯ' 'ತತ್‌ಸ್ಥತ್ವ'ಗಳನ್ನು ಹೇಳಿದರೆ ವಿರೋಧ ಬರುವುದಿಲ್ಲವೇ?

**ಪರಿಹಾರ** :- ಕಾರ್ಯಕಾರಣಗಳಿಗೆ ಭೇದಾಭೇದವಿದೆ ಎಂದು ಒಪ್ಪಲಾಗಿದೆ. ಹಾಗಾಗಿ ಅಭೇದವಿರುವುದರಿಂದ ತಾದಾತ್ಮ್ಯವನ್ನೂ ಭೇದವಿರುವುದರಿಂದ ತತ್ಸ್ಥತ್ವವನ್ನೂ ಹೇಳಬಹುದು.

**ಪ್ರಶ್ನೆ** :- ''ಯಃ ಪೃಥಿವೀಂ ಅಂತರೋ ಯಮಯತಿ'' ಎಂಬುದಾಗಿ ಅಂತರ್ಯಾಮಿಯು ಪೃಥಿವೀಯನ್ನು ನಿಯಮಿಸುತ್ತದೆ ಎಂದು ಹೇಳಲಾಗಿದೆ. ಅಂತರ್ಯಾಮಿಯು ಪ್ರಕೃತಿಯಾದರೆ, ಜಡವಾದ ಪ್ರಕೃತಿಯು ತನ್ನ ಕಾರ್ಯ-ವಾದ ಪೃಥಿವೀಯನ್ನುನಿಯಮಿಸುತ್ತದೆ ಎಂಬುದು ಹೇಗೆ ಕೂಡುತ್ತದೆ?

**ಪರಿಹಾರ** :- ಕಾರ್ಯವು ಕಾರಣದ ಅಧೀನವಾದ್ದರಿಂದ ಪ್ರಕೃತಿಯು ಪೃಥಿವೀಯನ್ನು ನಿಯಮಿಸುತ್ತದೆ ಎಂದು ಹೇಳಬಹುದು. (ಪೃಥಿವಿಯು ಪ್ರಕೃತಿಯ ಅಧೀನ ಎಂದಷ್ಟೇ ಅರ್ಥ) ಇದೊಂದು ಗೌಣಪ್ರಯೋಗ.

ಪೃಥಿವ್ಯಾದಿಗಳ ಅಭಿಮಾನಿಗಳಾದ ಜೀವರೇ ಅಂತರ್ಯಾಮೀ ಶಬ್ದ-ವಾಚ್ಯರು ಎಂಬುದು ಇನ್ನೊಂದು ಪೂರ್ವಪಕ್ಷ. ಆ ಅಭಿಮಾನಿಗಳಾದ ಜೀವರಿಗೆ ಪೃಥಿವ್ಯಾದಿಗಳು ಸ್ಥೂಲಶರೀರಗಳಾಗಿವೆ.

ಹೀಗೆ ಪ್ರಕೃತ್ಯಾದಿಗಳೇ ಅಂತರ್ಯಾಮೀ ಶಬ್ದವಾಚ್ಯರು. ಅಂತರ್ಯಾಮಿಗೆ ಹೇಳಲ್ಪಟ್ಟ ಅಮೃತತ್ವವೂ ಪ್ರಕೃತ್ಯಾದಿಗಳಿಗೇ ಸಲ್ಲುವುದು. ಹೀಗಾಗಿ ಅಮೃತತ್ವವು ವಿಷ್ಣುವಿಗಿಂತ ಅನ್ಯರಲ್ಲೂ ಇರುವುದರಿಂದ ಆ ಅಮೃತತ್ವ-ವನ್ನು ಇಟ್ಟುಕೊಂಡು ಚಕ್ಷುರಂತಸ್ಥನನ್ನು ವಿಷ್ಣು ಎಂದು ಸಾಧನೆ ಮಾಡಲು ಬರುವುದಿಲ್ಲ.

**ಸಿದ್ಧಾಂತ** :- ಅಂತರ್ಯಾಮೀ ಶಬ್ದವಾಚ್ಯನಾದನು ವಿಷ್ಣುವೇ. ಹಾಗಾಗಿ ಅಮೃತತ್ವವೂ ಕೂಡ ವಿಷ್ಣುವಿನದೇ ಧರ್ಮ. ಏಕೆಂದರೆ,

೧) ಇದೇ ಪ್ರಕರಣದಲ್ಲಿ ''ಯಂ ಪೃಥಿವೀ ನ ವೇದ ಯಃ ಪೃಥಿವೀಂ ಅಂತರೋ ಯಮಯತಿ'' ಎಂದಿದೆ. ಇಲ್ಲಿ, ಅಂತರ್ಯಾಮೀಯನ್ನು ಪೃಥಿವ್ಯಾದಿ-ದೇವತೆಗಳೂ ಪೂರ್ಣವಾಗಿ ತಿಳಿದಿಲ್ಲ ಎಂದು ಹೇಳಿದೆ. ಹಾಗೆಯೇ 'ಅಂತರತ್ವ' ಅಂದರೆ ಬಾಹ್ಯಾಪೇಕ್ಷೆ ಇಲ್ಲದೇ ರಮಮಾಣತ್ವ ಎಂದೂ ಹೇಳಿದೆ. ಈ ಎರಡೂ ವಿಷ್ಣುವಿನದೇ ಲಿಂಗಗಳು. ಹಾಗಾಗಿ ಅಂತರ್ಯಾಮೀ ವಿಷ್ಣುವೇ ಆಗಬೇಕು.

''ನ ತೇ ವಿಷ್ಣೋ ಜಾಯಮಾನೋ ನ ಜಾತಃ ದೇವ ಮಹಿಮ್ನಃ ಪರಮಂತಮಾಪ'' ''ಸಯೋಽತೋಶ್ರುತೋಽತೋಽಮತೋಽ ಅದೃಷ್ಟಃ.. .'' ಇತ್ಯಾದಿ ಶ್ರುತಿಗಳಿಂದ ಹಿಂದೆ ಹೇಳಿದ 'ಸಾಕಲ್ಯೇನ ದೇವಾವಿದಿತತ್ವ' ಎಂಬುದು ಕೇವಲ ವಿಷ್ಣುವಿನಲ್ಲಿರುವ ಧರ್ಮ ಎಂದು ತಿಳಿಯುತ್ತದೆ.

**ಪ್ರಶ್ನೆ** :- ''ಯಂ ಪೃಥಿವೀ ನವೇದ'' ಎಂಬಲ್ಲಿ ಪೃಥಿವೀ ಶಬ್ದಕ್ಕೆ ದೇವತಾ-ಪರವಾದ ಅರ್ಥ ಹೇಳುವುದರ ಬದಲು ಜಡಪೃಥಿವೀ ಎಂದೇ ಅರ್ಥ ಹೇಳ-ಬಹುದಲ್ಲಾ? ಆಗ ಜಡಪೃಥಿವೀ ಅವಿದಿತತ್ವ ಎಲ್ಲಾ ಕಡೆ ಬರುವುದರಿಂದ ಅದು ವಿಷ್ಣುತ್ವ ಸಾಧಕ ಹೇಗಾಗುವುದು?

**ಉತ್ತರ** :- ಇಲ್ಲಿರುವ ಪೃಥಿವೀ ಶಬ್ದಕ್ಕೆ ಜಡಪೃಥಿವೀ ಎಂದು ಅರ್ಥ ಹೇಳಬಾರದು. ಏಕೆಂದರೆ ಈ ವಾಕ್ಯದಲ್ಲಿ 'ನ ವೇದ' ಎಂದು ನಿಷೇಧ ಮಾಡಲಾಗಿದೆ. ನಿಷೇಧ ಮಾಡಬೇಕಾದರೆ ಅದು ಎಲ್ಲಾದರೂ ಪ್ರಸಕ್ತವಾಗಿರ-ಬೇಕು. ಅಪ್ರಸ್ತಕವಾದದ್ದರ ನಿಷೇಧ ಕೂಡುವುದಿಲ್ಲ. ಜಡ ಪೃಥಿವೀ ಅಂತರ್ಯಾಮಿಯನ್ನು ತಿಳಿಯುವುದು ಅಸಂಭಾವಿತವಾದ್ದರಿಂದ ಅದು ಅಪ್ರಸಕ್ತವಾಯಿತು. ಹೀಗಾಗಿ 'ಯಂ ಪೃಥಿವೀನ ವೇದ' ಎಂಬ ವಾಕ್ಯವೇ ವ್ಯರ್ಥವಾಗಬೇಕಾಗುತ್ತದೆ.

**ಪ್ರಶ್ನೆ** :- ''ಯಸ್ಯ ಪೃಥಿವೀ ಶರೀರಂ'' ಎಂದು ಅಂತರ್ಯಾಮಿಗೆ ಪೃಥಿವೀಯು ಶರೀರ ಎಂದು ಹೇಳಲಾಗಿದೆ. ಅಂತರ್ಯಾಮೀ ವಿಷ್ಣುವಾದರೆ, ಪೃಥಿವೀಯು ವಿಷ್ಣುವಿನ ಶರೀರವಲ್ಲವಾದ್ದರಿಂದ ಪೃಥಿವೀ ಶರೀರತ್ವವನ್ನು ಹೇಗೆ ಹೇಳುವುದು?

**ಉತ್ತರ** :- ಇಲ್ಲಿರುವ ಶರೀರ ಶಬ್ದಕ್ಕೆ 'ಶೀರ್ಯತೇ' ಎಂಬ ವ್ಯುತ್ಪತ್ತಿಯಿಂದ ನಾಶಹೊಂದುವುದು ಎಂದರ್ಥ. ಪೃಥಿವೀಯು ವಿಷ್ಣುವಿನ ಶರೀರ ಎಂದರೆ ಪೃಥಿವೀಯು ವಿಷ್ಣುವಿನಿಂದ ನಾಶಹೊಂದಲ್ಪಡುವುದು ಎಂದರ್ಥ. ಅಥವಾ ಇದೊಂದು ಗೌಣ ಪ್ರಯೋಗ. ಪ್ರಸಿದ್ಧ ಶರೀರವು ಹೇಗೆ ನಿಯಮ್ಯವಾಗಿದೆಯೋ ಅದೇ ರೀತಿ ಪೃಥಿವೀಯೂ ಈಶನಿಯಮ್ಯವಾದ್ದರಿಂದ ಅದನ್ನು ಶರೀರ ಎಂದು ಕರೆಯಲಾಗಿದೆ.

ಪ್ರಕೃತ್ಯಾದಿಗಳನ್ನು ಅಂತರ್ಯಾಮೀ ಎಂದು ಹೇಳಿದಾಗ 'ಯಃ ಪೃಥಿವ್ಯಾಂ ತಿಷ್ಠನ್' 'ಯಃ ಪೃಥಿವೀಂ ಅಂತರೋ ಯ ಮಯತಿ' ಎಂಬ ವಾಕ್ಯಗಳನ್ನು ಬಹಳ ಕ್ಲೇಶದಿಂದ ಕೂಡಿಸಲಾಗಿದೆ. ವಿಷ್ಣುಪರವಾದ ಅರ್ಥ ಮಾಡಿದಾಗ ಈ ಕ್ಲೇಶದ ಪ್ರಸಕ್ತಿಯಿಲ್ಲ.

**ಪರಪಕ್ಷೇ ಬಾಧಕೋಕ್ತಿ** :- ೧) ಇನ್ನು 'ಪ್ರಕೃತಿ' 'ಜೀವ' ಇವರ ಅಸಾಧಾರಣ ಧರ್ಮವಾದ ತ್ರಿಗುಣತ್ವ, ಸಂಸಾರಿತ್ವ ಮೊದಲಾದವು ಯಾವುದೂ ಇಲ್ಲಿ ಹೇಳಲ್ಪಟ್ಟಿಲ್ಲ.

೨) 'ಯ ಆತ್ಮನೋಽಂತರಃ' ಎಂಬುದಾಗಿ ಅಂತರ್ಯಾಮೀಯು ಜೀವ-ನಿಗಿಂತ ಭಿನ್ನ ಎಂದು ಹೇಳಲಾಗಿದೆ.

ಹೀಗಾಗಿ ವಿಷ್ಣುವೇ ಅಂತರ್ಯಾಮೀ

**ಪೂರ್ವಪಕ್ಷ ಸಿದ್ಧಾಂತ ಫಲ** :- ಹಿಂದಿನ ಅಧಿಕರಣದ ಮೇಲಿನ ಆಕ್ಷೇಪ ಹಾಗು ಅದರ ಸಮಾಧಾನ, ಇದೇ ಕ್ರಮವಾಗಿ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನ.

## ॥ ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ ॥
## ೧-೨-೬

ಹಿಂದಿನ ಅಧಿಕರಣದಲ್ಲಿ ''ಯಂ ಪೃಥಿವೀ ನ ವೇದ'' ಎಂಬುದಾಗಿ ಅದೃಶ್ಯತ್ವ ಎಂಬ ಹೇತುವು ಹೇಳಲ್ಪಟ್ಟಿತ್ತು. ಅದನ್ನು ಆಕ್ಷೇಪಿಸಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಈ ಅಧಿಕರಣದಲ್ಲಿ 'ಆಕ್ಷೇಪಿಕೀ' ಎಂಬ ಸಂಗತಿಯಿದೆ.

ಆಥರ್ವಣೋಪನಿಷತ್ತಿನಲ್ಲಿ ''ದ್ವೇ ವಿದ್ಯೇ ವೇದಿತವ್ಯೇ'' ಎಂದು ಪ್ರಾರಂಭವಾಗಿ ''ಅಥ ಪರಾ ಯಯಾ ತದಕ್ಷರಮಧಿಗಮ್ಯತೇ'' ''ಯತ್ತದ-ದ್ರೇಶ್ಯಮ ಗ್ರಾಹ್ಯಮಗೋತ್ರಮವರ್ಣಂ'' ಇತ್ಯಾದಿ ವಾಕ್ಯಗಳಿಂದ ಅದೃಶ್ಯ-ತ್ವಾದಿ ಗುಣಗಳುಳ್ಳ 'ಅಕ್ಷರವು' ಉಕ್ತವಾಗಿದೆ. ಆದೇ ರೀತಿ ''ಅಕ್ಷ ರಾತ್ ಸಂಭವತೀಹ ವಿಶ್ವಂ'' ಎಂಬಲ್ಲಿ ಆ ಅಕ್ಷರವು ವಿಶ್ವಕಾರಣ ಎಂಬುದಾಗಿಯೂ ಹೇಳಲ್ಪಟ್ಟಿದೆ. ಹೀಗೆ ಅದೃಶ್ಯತ್ವಾದಿ ಗುಣಗಳದ್ದೂ, ವಿಶ್ವಕಾರಣವೂ ಆದ

ಅಕ್ಷರವು ಚಿತ್‌ಪ್ರಕೃತಿಯೋ, ಅಚಿತ್‌ಪ್ರಕೃತಿಯೋ, ವಿರಿಂಚನೋ, ರುದ್ರನೋ ಅಥವಾ ವಿಷ್ಣುವೋ ಎಂಬುದೇ ಸಂದೇಹ.

ಅಕ್ಷರ ಶಬ್ದವಾಚ್ಯವಾದದ್ದು ಜಡಪ್ರಕೃತಿಯೇ ಎಂದು ಒಂದು ಪೂರ್ವಪಕ್ಷ ಏಕೆಂದರೆ, ''ಯಥಾ ಪೃಥಿವ್ಯಾಂ ಔಷಧಯಃ'' ಎಂಬುದಾಗಿ ದೃಷ್ಟಾಂತವನ್ನು ಕೊಡಲಾಗಿದೆ. ಇದು ಉಪಾದಾನದೃಷ್ಟಾಂತ. ಅಂದರೆ ಹೇಗೆ ಔಷಧಿಗಳು ಪೃಥಿವೀಯಲ್ಲಿ ಬೀಜಗಳಿಂದ ಹುಟ್ಟುತ್ತದೋ ಹಾಗೇ ಅಕ್ಷರದಿಂದ ವಿಶ್ವ ಹುಟ್ಟಿದೆ ಎಂದು. ಔಷಧಿಗಳಿಗೆ ಬೀಜ ಉಪಾದಾನಕಾರಣ, ಹಾಗೇ ಜಗತ್ತಿಗೆ ಅಕ್ಷರ ಉಪಾದಾನಕಾರಣ. ಜಗತ್ತಿಗೆ ಉಪಾದಾನ ಕಾರಣ ಜಡಪ್ರಕೃತಿ. ಅದೇ ಅಕ್ಷರಶಬ್ದವಾಚ್ಯವಾಗಬೇಕು.

**ಪ್ರಶ್ನೆ**:- ಕಾರಣತ್ವಮಾತ್ರವನ್ನು ತಿಳಿಸುವುದಕ್ಕಷ್ಟೇ ದೃಷ್ಟಾಂತ ಕೊಡಲಾಗಿದೆ. ಉಪಾದಾನತ್ವವು ಅಭಿಪ್ರೇತವಲ್ಲ ಎಂದೇಕೆ ಹೇಳಬಾರದು?

**ಪರಿಹಾರ** :- ಉಪಾದಾನ ಕಾರಣ ಎಂದಿಟ್ಟುಕೊಂಡರೆ ಯಾವ ವಿರೋಧವೂ ಇಲ್ಲ. ಜೊತೆಗೆ ಉಪಾದಾನತ್ವ ಅಂತರಂಗ (ಕಾರ್ಯಾನುಸ್ಯೂತ-ನಾದ್ದರಿಂದ). ಅದನ್ನು ಕೈಬಿಡುವುದು ಉಚಿತವಲ್ಲ.

'ಅಕ್ಷರಾತ್' ಎಂದು ಪಂಚಮೀ ವಿಭಕ್ತಿಯಿರುವುದರಿಂದಲೂ ಇಲ್ಲಿ ಹೇಳಲ್ಪಟ್ಟ ಅಕ್ಷರವು ಉಪಾದಾನಕಾರಣವಾದ ಜಡಪ್ರಕೃತಿಯೇ ಆಗಬೇಕು.

ಅಥವಾ ಅಕ್ಷರಶಬ್ದವಾಚ್ಯವಾದದ್ದು ಚಿತ್ ಪ್ರಕೃತಿ ಅಂದರೆ ಲಕ್ಷ್ಮೀದೇವಿ. 'ಕೂಟಸ್ಥೋಽಕ್ಷರ ಉಚ್ಯತೇ' ಎಂಬಲ್ಲಿ ಅಕ್ಷರಶಬ್ದವು ಶ್ರೀತತ್ವ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

ಲಕ್ಷ್ಮೀದೇವಿಯು ಉಪಾದಾನಕಾರಣವಾಗದಿದ್ದರೂ ಉಪಾದಾನಕಾರಣ-ವಾದ ಜಡಪ್ರಕೃತಿಗೆ ಅಭಿಮಾನಿಯಾದ್ದರಿಂದ ಉಪಾದಾನತ್ವವನ್ನು ಚಿತ್ ಪ್ರಕೃತಿಗೆ ಹೇಳಬಹುದು.

ಅಥವಾ ''ಸ ಬ್ರಹ್ಮವಿದ್ಯಾಮ್'' ಎಂದಿರುವುದರಿಂದ ಇಲ್ಲಿರುವ ಅಕ್ಷರ ಚತುರ್ಮುಖಬ್ರಹ್ಮನಾಗಬಹುದು.

ಅಥವಾ ''ಕರ್ತಾರಂ ಈಶಂ'' ಎಂದಿರುವುದರಿಂದ ಈಶಪದವಾಚ್ಯನಾದ ರುದ್ರನೂ ಅಕ್ಷರನಾಗಬಹುದು.

**ಪ್ರಶ್ನೆ :-** ಅಕ್ಷರ ಶಬ್ದಕ್ಕೆ ವಿಷ್ಣು ಎಂಬ ಅರ್ಥವೂ ಇರುವುದರಿಂದ ಇಲ್ಲಿರುವ ಅಕ್ಷರ ವಿಷ್ಣು ಎಂದೇಕೆ ಹೇಳಬಾರದು?

**ಪರಿಹಾರ :-** ಇಲ್ಲಿ ಹೇಳಲ್ಪಟ್ಟ ಅಕ್ಷರ ವಿಷ್ಣುವಾಗಲು ಸಾಧ್ಯವಿಲ್ಲ. ಏಕೆಂದರೆ 'ಅಕ್ಷರಾತ್ ಪರತಃ ಪರಃ' ಎಂಬುದಾಗಿ ಅಕ್ಷರವು ಉತ್ಕರ್ಷಕ್ಕೆ ಅವಧಿ ಯಾಗಿ ಹೇಳಲ್ಪಟ್ಟಿದೆ. ಹಾಗಾಗಿ ಅದು ನಿಕೃಷ್ಟವಾಯಿತು. ವಿಷ್ಣುವಾದರೋ ಉತ್ಕೃಷ್ಟನಾಗಿದ್ದಾನೆ. ಹಾಗಾಗಿ ಅಕ್ಷರ ವಿಷ್ಣುವಲ್ಲ.

ವಿಷ್ಣುವು ಅಕ್ಷರಶಬ್ದ ವಾಚ್ಯನಾಗಲು ಸಾಧ್ಯವಿಲ್ಲವಾದ್ದರಿಂದಲೇ ''ಅಕ್ಷರಾತ್ ಸಂಭವತಿ ಎಂಬಲ್ಲಿರುವ ಪಂಚಮೀ ವಿಭಕ್ತಿಗೆ ಕಾರಣ ಎಂದಷ್ಟೇ ಅರ್ಥ ಹೊರತು ಉಪಾದಾನಕಾರಣ ಎಂದಲ್ಲ ಎಂಬ ವ್ಯಾಖ್ಯಾನವೂ ಪರಾಸ್ತವಾಯಿತು.

**ಪ್ರಶ್ನೆ :-** ಅಕ್ಷರ ಶಬ್ದಕ್ಕೆ ಚಿತ್‌ಪ್ರಕೃತಿ ಎಂಬ ಅರ್ಥ ಇಟ್ಟುಕೊಂಡರೂ 'ಅಕ್ಷರಾತ್ ಪರತಃ ಪರಃ' ಎಂಬಲ್ಲಿ ಆ ಅರ್ಥ ಕೂಡುವುದಿಲ್ಲ. ಅಕ್ಷರ ಶಬ್ದವಾಚ್ಯವಾದ ಚಿತ್‌ಪ್ರಕೃತಿಗೂ 'ಪರ' ಎನಿಸಿಕೊಂಡ ವಿಷ್ಣುವಿಗೂ ಮಧ್ಯದಲ್ಲಿ 'ಪರತಃ' ಎಂದು ಹೇಳಲ್ಪಟ್ಟಿದ್ದು ಯಾವುದೂ ಇಲ್ಲ.

**ಪರಿಹಾರ :-** ಅಕ್ಷರ ಶಬ್ದಕ್ಕೆ ಚಿತ್‌ಪ್ರಕೃತಿ ಎಂಬ ಅರ್ಥ ಇಟ್ಟುಕೊಂಡಾಗ 'ಅಕ್ಷರಾತ್ ಪರತಃ' ಎಂಬಲ್ಲಿ ಸಾಮಾನಾಧಿಕರಣ್ಯವನ್ನು ಹೇಳಬೇಕು. ಅಂದರೆ ವಿಶೇಷ್ಯ ವಿಶೇಷಣ ಭಾವ ಎಂದರ್ಥ. ಆಗ ಪರತಃ ಅಕ್ಷರಾತ್ ಪರಃ ಎಂದು ಅನ್ವಯಸಿದ್ಧವಾಗುವುದು. ಹೀಗೆ ಹೇಳಿದಾಗ ಯಾವ ಅನುಪಪತ್ತಿಯೂ ಇಲ್ಲ.

ಇನ್ನು ಅಕ್ಷರ ಶಬ್ದಕ್ಕೆ ಜಡಪ್ರಕೃತಿ, ಚತುರ್ಮುಖ, ರುದ್ರ ಎಂಬ ಅರ್ಥ ಇಟ್ಟುಕೊಂಡಾಗ 'ಅಕ್ಷರಾತ್ ಪರತಃ' ಎಂಬಲ್ಲಿ ವೈಯಧಿಕರಣ್ಯದಿಂದ ಅನ್ವಯ. ಅಂದರೆ ಅಕ್ಷರ ಶಬ್ದವಾಚ್ಯವಾದ ಚತುರ್ಮುಖಾದಿಗಳಿಗಿಂತ ಪರವಾದ ಲಕ್ಷ್ಮೀದೇವಿಗಿಂತ ಪರನಾದವನು ವಿಷ್ಣು ಎಂದರ್ಥವಾಗುವುದು.

**ಸಿದ್ಧಾಂತ** :- ಅಕ್ಷರ ಶಬ್ದವಾಚನೂ ಅದೃಶ್ಯತ್ವಾದಿಗುಣಗಳುಳ್ಳವನೂ ವಿಷ್ಣುವೇ. ಏಕೆಂದರೆ,

೧) ಇಲ್ಲಿರುವ ಅಕ್ಷರಕ್ಕೆ ಪರವಿದ್ಯಾವಿಷಯತ್ವವು ಹೇಳಲ್ಪಟ್ಟಿದೆ. ಅದೇ ಪರವಿದ್ಯಾ ವಿಷಯತ್ವವು ''ಅಥ ಪರಾ ಯಯಾ ಸ ಹರಿರ್ವೇದಿತವ್ಯಃ'' ''ಸಾ ವಿದ್ಯಾ ತನ್ಮತಿರ್ಯಯಾ'' ಮೊದಲಾದ ಶ್ರುತಿ ಸ್ಮೃತಿಗಳಿಂದ ವಿಷ್ಣ್ವೇಕನಿಷ್ಠ ಎಂದು ತಿಳಿಯುತ್ತಿದೆ. ಹಾಗಾಗಿ ಇಲ್ಲಿ ಹೇಳಿರುವ ಪರವಿದ್ಯಾ ವಿಷಯವಾದ ಅಕ್ಷರ ವಿಷ್ಣುವೇ ಆಗಬೇಕು.

೨) 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ' ಎಂಬುದಾಗಿ ಶುದ್ಧರೂಪತ್ವವು ಹೇಳಲ್ಪಟ್ಟಿದೆ. ಇದೂ ವಿಷ್ಣುವಿನದೇ ಧರ್ಮ. ಇತರರೆಲ್ಲರೂ ಮಿಶ್ರರೂಪವುಳ್ಳ-ವರು ಎಂಬುದಾಗಿ ''ವಿಮಿಶ್ರಾಣಿ ವ್ಯಮಿಶ್ರಯತ್'' ಎಂಬ ಶ್ರುತಿಯು ಹೇಳುತ್ತಿದೆ.

**ಬಾಧಕ ಪರಿಹಾರ** :- 'ಅಕ್ಷರತ್ರಯ ಮೀರಿತಮ್' ಎಂಬ ಸ್ಮೃತಿಯಿಂದ ಅಕ್ಷರ ವ್ಯಕ್ತಿಗಳು ಮೂರು ಇವೆ ಎಂದು ತಿಳಿಯುತ್ತಿದೆ. ''ಅಕ್ಷರಾತ್ ಪರತಃ ಪರಃ'' ಎಂಬಲ್ಲಿ ಪರಾವಧಿತ್ವೇನ ಶ್ರುತವಾದ ಅಕ್ಷರ ವಿಷ್ಣುವಲ್ಲ. ಹಾಗಾಗಿ ತತ್ಪ್ರಯುಕ್ತನಾದ ನಿಕೃಷ್ಟತ್ವ ಎಂಬ ದೋಷದ ಪ್ರಸಕ್ತಿಯೂ ಇಲ್ಲ.

ಪೃಥಿವೀ ದೃಷ್ಟಾಂತವೂ ಕೂಡ ಕಾರಣತ್ವವನ್ನು ಮಾತ್ರ ಪ್ರತಿಪಾದಿಸುತ್ತಿದೆ ಉಪಾದಾನತ್ವದಲ್ಲಿ ತಾತ್ಪರ್ಯವಿಲ್ಲ.

'ಬ್ರಹ್ಮಾ' 'ಈಶ' ಶಬ್ದಗಳೆಲ್ಲವೂ ವಿಷ್ಣುವಿನಲ್ಲೇ ಮುಖ್ಯವಾದ್ದರಿಂದ, ಈ ಶಬ್ದಗಳಿರುವುದರಿಂದ ಅಕ್ಷರಶಬ್ದವಾಚ್ಯನಾದವನು ಚತುರ್ಮುಖ, ರುದ್ರ ಇವರಾಗಬೇಕು ಎಂದು ಹೇಳಲು ಸಾಧ್ಯವಿಲ್ಲ.

ಅಕ್ಷರ ಶಬ್ದವಾಚ್ಯವಾದದ್ದು ಜಡಪ್ರಕೃತಿ ಎಂಬ ಪಕ್ಷದಲ್ಲಿ ಇನ್ನೊಂದು ಬಾಧಕವಿದೆ. ''ಯಃ ಸರ್ವಜ್ಞ'' ಎಂಬುದಾಗಿ ಅಕ್ಷರವು ಸರ್ವಜ್ಞ ಎಂದು ಶ್ರುತವಾಗಿದೆ. ಈ ಸರ್ವಜ್ಞತ್ವವು ಜಡಪ್ರಕೃತಿಯಲ್ಲಿ ಬಾಧಿತವಾಗಿದೆ.

ಅಕ್ಷರ ಶಬ್ದವಾಚ್ಯ ಬ್ರಹ್ಮ, ರುದ್ರ ಎಂಬ ಪಕ್ಷದಲ್ಲಿಯೂ ಬಾಧಕವಿದೆ.

''ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತೇ'' ಎಂದು ಬ್ರಹ್ಮನು ಅಕ್ಷರಕ್ಕಿಂತ ಭಿನ್ನ ಎಂದು ಹೇಳಲಾಗಿದೆ. ಹಾಗೇ ''ಜುಷ್ಟಂ ಯದಾ ಪಶ್ಯತ್ಯನ್ಯ-ಮೀಶಂ'' ಎಂಬಲ್ಲಿ ರುದ್ರ ಹಾಗು ಅಕ್ಷರಗಳಿಗೆ ಭೇದವು ಹೇಳಲ್ಪಟ್ಟಿದೆ.

ಆದ್ದರಿಂದ ಅದೃಶ್ಯತ್ವಾದಿ ಗುಣಗಳುಳ್ಳದ್ದೂ ಪರತಃ ಪರತ್ವೇನ ಶ್ರುತ-ವಾದದ್ದೂ ಆದ ಅಕ್ಷರ ಶಬ್ದವಾಚ್ಯನು ವಿಷ್ಣುವೇ.

**ಪೂ.ಪ. ಸಿದ್ಧಾಂತ ಪ್ರಯೋಜನ :-** ಇಲ್ಲಿ ಹೇಳಲ್ಪಟ್ಟ ಅದೃಶ್ಯತ್ವಾದಿಗುಣಗಳುಳ್ಳವನು ವಿಷ್ಣು ಆಗದೇ ಹೋದರೇ ಅದೇ ಅದೃಶ್ಯತ್ವಾದಿಗುಣಗಳುಳ್ಳ ಆನಂದಮಯನೂ ವಿಷ್ಣುವಾಗಬಾರದು ಎಂಬ ಆಕ್ಷೇಪ ಹಾಗು ಅದರ ಸಮಾಧಾನ ಇದೇ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನ.

## ।। ಓಂ ವೈಶ್ವಾನರ ಸಾಧಾರಣ ಶಬ್ದವಿಶೇಷಾತ್ ಓಂ ।।
## ೧-೨-೭

ಹಿಂದೆ ಪ್ರಸ್ತುತವಾದ ಅದೃಶ್ಯತ್ವಾದಿಗುಣಗಳಲ್ಲಿ ಒಂದಾದ 'ಸರ್ವಗತತ್ವ' ಎಂಬ ಹೇತುವಿನ ಮೇಲಿನ ಆಕ್ಷೇಪದಿಂದ ಈ ಅಧಿಕರಣ ಪ್ರವೃತ್ತವಾಗಿದೆ. ಹಾಗಾಗಿ ಇಲ್ಲಿ 'ಆಕ್ಷೇಪಿಕೀ' ಎಂಬ ಸಂಗತಿಯಿದೆ.

ಛಾಂದೋಗ್ಯೋಪನಿಷತ್ತಿನ ಐದನೇ ಅಧ್ಯಾಯದಲ್ಲಿ ''ಅಭಿವಿಮಾನಂ ಆತ್ಮಾನಂ ವೈಶ್ವಾನರಮುಪಾಸ್ತೇ'' ಎಂಬ ವಾಕ್ಯವಿದೆ. ಅದೇ ರೀತಿ ಬೃಹ-ದಾರಣ್ಯಕದ ಏಳನೇ ಅಧ್ಯಾಯದಲ್ಲಿ ''ಅಯಮಗ್ನಿರ್ವೈಶ್ವಾನರೋ ಯೋऽ-ಯಮಂತಃ ಪುರುಷೇ ಯೇನೇದಮನ್ನಂ ಪಚ್ಯತೇ'' ಎಂಬ ವಾಕ್ಯ ಶ್ರುತ-ವಾಗಿದೆ. ಹಾಗೆಯೇ ಋಗ್ವೇದದಲ್ಲಿ ''ವೈಶ್ವಾನರಮೃತ ಆಜಾತಮಗ್ನಿಂ'' ಎಂಬ ವಾಕ್ಯವಿದೆ. ಇಲ್ಲೆಲ್ಲಾ ಶ್ರುತನಾದ ವೈಶ್ವಾನರನು ಅಗ್ನಿ (ಪಂಚಭೂತ-ಗಳ್ಲೊಂದು) ಮತ್ತು ಅದಕ್ಕೆ ಅಭಿಮಾನಿಯಾದ ದೇವತೆಯೋ? ಅಥವಾ ವಿಷ್ಣುವೋ? ಎಂಬುದೇ ಸಂದೇಹ.

ವೈಶ್ವಾನರ ಶಬ್ದವಾಚ್ಯವಾದದ್ದು ಅಗ್ನಿ ಮತ್ತು ಅದರ ಅಭಿಮಾನಿ ದೇವತೆಯೇ ಎಂಬುದು ಪೂರ್ವಪಕ್ಷ. ಏಕೆಂದರೆ,

೧) 'ಅಗ್ನಿ' 'ವೈಶ್ವಾನರ' ಮೊದಲಾದ ಶಬ್ದಗಳು ಭೌತಿಕಾಗ್ನಿ ಅಥವಾ ಅಗ್ನಿದೇವತೆ ಎಂಬ ಅರ್ಥದಲ್ಲೇ ಪ್ರಸಿದ್ಧವಾಗಿದೆ.

೨) ಛಾಂದೋಗ್ಯದಲ್ಲಿ ''ವೈಶ್ವಾನರೇ ತದ್ಧುತಂ ಭವತಿ'' ಎಂಬುದಾಗಿ ಹೋಮಾಧಾರತ್ವ ಶ್ರುತವಾಗಿದೆ. ಹಾಗೆಯೇ ''ಹೃದಯಂ ಗಾರ್ಹಪತ್ಯ'' ಎಂಬುದಾಗಿ ಗಾರ್ಹಪತ್ಯಾದ್ಯಂಗಕತ್ವ (ವೈಶ್ವಾನರನ ಹೃದಯ ಗಾರ್ಹಪತ್ಯ ಎಂದರ್ಥ) ಶ್ರುತವಾಗಿದೆ. ಇವೆರಡೂ ಪ್ರಸಿದ್ಧಾಗ್ನಿಯ ಲಿಂಗಗಳೇ ಆಗಿವೆ.

೩) ಬೃಹದಾರಣ್ಯಕದಲ್ಲಿ 'ಯೇನೇದಮನ್ನಂ ಪಚ್ಯತೇ' ಎಂಬುದಾಗಿ ಪಾಚಕತ್ವ ಎಂಬ ಲಿಂಗ ಶ್ರುತವಾಗಿದೆ. ಇದೂ ಅಗ್ನಿಯ ಲಿಂಗವೇ.

ಮೇಲೆ ಹೇಳಲ್ಪಟ್ಟ ವೈಶ್ವಾನರಾದಿ ಶಬ್ದಗಳು ಹಾಗು ಪಾಚಕತ್ವಾದಿ ಲಿಂಗ-ಗಳೂ ಮುಖ್ಯವಾಗಿ ವಿಷ್ಣುಪರವೇ ಎಂದರೆ ಆಗ ಲೋಕವ್ಯವಹಾರ ಕೂಡುವುದಿಲ್ಲ.

ಎಲ್ಲಾ ವಿದ್ಯೆಗಳು ವಿಷ್ಣುವಿಷಯವೇ ಆದರೆ ಆಗ 'ಇದು ಅಗ್ನಿವಿದ್ಯೆ' 'ಇದು ಅನ್ಯವಿದ್ಯೆ' ಎಂಬ ವ್ಯವಸ್ಥೆಯೇ ಕೂಡುವುದಿಲ್ಲ.

ಹಾಗಾಗಿ ವೈಶ್ವಾನರ, ಅಗ್ನಿಭೂತ ಅಥವಾ ಅಗ್ನಿದೇವತೆಯೇ ಆಗಬೇಕು.

**ಪ್ರಶ್ನೆ :-** ವಿಷ್ಣುಪರವಾದ ಲಿಂಗಗಳು, ಸಮಾಖ್ಯಾ, ಪ್ರಕರಣ ಎಂಬ ತಾತ್ಪರ್ಯ ಲಿಂಗಗಳು ಅನೇಕ ಇರುವಾಗ ಮತ್ತು ಅವೆಲ್ಲವೂ ನಿರವಕಾಶವೂ ಆಗಿರುವಾಗ ಇಲ್ಲಿ ಶ್ರುತನಾದ ವೈಶ್ವಾನರ ಅಗ್ನಿಯೇ ಎಂದು ಹೇಗೆ ನಿರ್ಧರಿಸುತ್ತೀರಿ?

**ಪರಿಹಾರ :-** 'ಅಗ್ನಿ' 'ವೈಶ್ವಾನರ' ಎಂಬ ಶಬ್ದ ಇಲ್ಲಿ ಶ್ರುತವಾಗಿದೆ. ಲಿಂಗ ಸಮಾಖ್ಯಾ ಪ್ರಕರಣಗಳಿಗಿಂತ ಶ್ರುತಿಯು ಸ್ವಭಾವತಃ ಪ್ರಬಲ. (ಬಹುತ್ವ ಪ್ರಯುಕ್ತ ಪ್ರಾಬಲ್ಯಕ್ಕಿಂತ ಸ್ವಭಾವ ಪ್ರಯುಕ್ತ ಪ್ರಾಬಲ್ಯ ದೊಡ್ಡದು).

ಏನೇ ಆದರೂ (ಎರಡೂ ಪಕ್ಷಗಳಲ್ಲಿ ಪ್ರಬಲವಾದ ತಾತ್ಪರ್ಯ ಲಿಂಗಗಳಿರುವುದರಿಂದ) 'ಅಭಿವಿಮಾನ' (ಸರ್ವಗತ) ಎನಿಸಿಕೊಂಡ ವೈಶ್ವಾನರ ಇವನೇ ಎಂದು ನಿರ್ಣಯವಾಗುವುದಿಲ್ಲ. ಆದ್ದರಿಂದಲೇ ಹಿಂದೆ 'ಸರ್ವಗತ'

ಎಂದು ಕರೆಸಿಕೊಂಡ ಅಕ್ಷರನೂ ವಿಷ್ಣುವೇ ಎಂದು ಹೇಳಲು ಸಾಧ್ಯವಿಲ್ಲ. ಇದೇ ಪೂರ್ವಪಕ್ಷ.

**ಸಿದ್ಧಾಂತ** :- ಇಲ್ಲಿ ಶ್ರುತನಾದ ವೈಶ್ವಾನರ ವಿಷ್ಣುವೇ. ಏಕೆಂದರೆ

೧) ''ಅಭಿವಿಮಾನಂ ಆತ್ಮಾನಂ'' ಎಂಬುದಾಗಿ 'ಆತ್ಮ' ಶಬ್ದ ಶ್ರುತನಾಗಿದೆ. ಅದು ವಿಷ್ಣುವಿನಲ್ಲೇ ಪ್ರಸಿದ್ಧ.

೨) 'ಅಭಿವಿಮಾನ' ಎಂಬುದಾಗಿ ಸರ್ವಗತತ್ವವು ಹೇಳಲ್ಪಟ್ಟಿದೆ. ಇದೂ ವಿಷ್ಣುವಿನ ಲಿಂಗವೇ.

೩) 'ಅಹಂ ವೈಶ್ವಾನರೋ ಭೂತ್ವಾ' ಎಂದು ಗೀತೆಯಲ್ಲಿ ಕೃಷ್ಣ ತನ್ನನ್ನು ವಿಶ್ವಾನರ ಎಂದು ಕರೆದುಕೊಂಡಿದ್ದಾನೆ. ಹೀಗೆ ಸ್ಮೃತಿ ಸಮಾಖ್ಯಾನವಿರುವುದ-ರಿಂದ ಇಲ್ಲಿರುವ ವೈಶ್ವಾನರ ವಿಷ್ಣುವೇ.

೪) ಈ ವೈಶ್ವಾನರ ವಿದ್ಯೆಯ ಆರಂಭದಲ್ಲಿ ''ಕೋ ನ ಆತ್ಮಾ ಕಿಂ ಬ್ರಹ್ಮ'' ಎಂದು ಬ್ರಹ್ಮನ ವಿಚಾರ ಮಾಡಲಾಗಿದೆ. ಹಾಗಾಗಿ ಇದು ಬ್ರಹ್ಮಪ್ರಕರಣ ಎಂದು ಸಿದ್ಧವಾಯಿತು. ಅದರಲ್ಲಿ ಶ್ರುತನಾದ ವೈಶ್ವಾನರನೂ ಬ್ರಹ್ಮನೇ (ವಿಷ್ಣುವೇ) ಆಗಬೇಕು.

೫) ''ಶೀರ್ಷ್ಣೋ ದ್ಯೌಃ ಸಮವರ್ತತ'' ಎಂದು ಪುರುಷಸೂಕ್ತದಲ್ಲಿದೆ. ಅದರರ್ಥ ದ್ಯುಲೋಕಜನಕವಾದ ಶಿರಸ್ಸುಳ್ಳವನು ಎಂದು. ಅದೇ ಅರ್ಥ ಬರುವ ''ಮೂರ್ಧೈವ ಸುತೇಜಾಃ'' ಎಂಬ ವಾಕ್ಯ ಇಲ್ಲಿ ಶ್ರುತವಾಗಿದೆ. ಹಾಗಾಗಿ ಪುರುಷಸೂಕ್ತ ಸಮಾಖ್ಯಾ ಸಿದ್ಧವಾಯಿತು. ಪುರುಷಸೂಕ್ತ ವಿಷ್ಣುಪರ ಎಂಬುದು ನಿರ್ವಿವಾದ.

**ಬಾಧಕಪರಿಹಾರ** :- 'ಅಗ್ನಿ' 'ವೈಶ್ವಾನರ' ಮೊದಲಾದ ಶಬ್ದಗಳು, ಪಾಚಕತ್ವಾದಿ ಲಿಂಗಗಳೂ ವಿಷ್ಣುಪರವೇ ಆಗಿವೆ. ವಿಷ್ಣುವಿನಲ್ಲೇ ಪ್ರಸಿದ್ಧವಾದ ಶಬ್ದಗಳನ್ನು ಹಾಗು ಲಿಂಗಗಳನ್ನು ಹೇಳದೆ ಅಪ್ರಸಿದ್ಧವಾದ ಶಬ್ದ, ಲಿಂಗಗಳನ್ನು ಹೇಳಿರುವುದು ಉಪಾಸನೆಗೋಸ್ಕರ ಎಂದು ತಿಳಿಯಬೇಕು. ಹೀಗೆ, ಶಬ್ದ ಹಾಗು ಲಿಂಗ ಈ ಎರಡೂ ವಿಷ್ಣುವಿನಲ್ಲಿ ಸಾವಕಾಶವಾಯಿತು.

**ಪ್ರಶ್ನೆ** :- ಎಲ್ಲಾ ಶಬ್ದಗಳೂ ವಿಷ್ಣುಪರ ಎಂದರೆ ಲೋಕ ವ್ಯವಹಾರ ಹೇಗೆ?

**ಉತ್ತರ** :- ಎಲ್ಲಾ ಶಬ್ದಗಳ ಮುಖ್ಯಾರ್ಥ ವಿಷ್ಣುವೇ. ಆದರೆ ಹಾನೋಪಾದಾನಾದಿ ವ್ಯವಹಾರ ನಡೆಯಬೇಕಾದರೆ ಶಬ್ದ ಬೇಕೇ ಬೇಕು. ಹಾಗಾಗಿ ಬೇರೆ ಉಪಾಯವಿಲ್ಲದೇ ವಿಷ್ಣುವಿನಲ್ಲೇ ಪ್ರಸಿದ್ಧವಾದ ಶಬ್ದಗಳನ್ನು ಅಮುಖ್ಯವೃತ್ತಿಯಿಂದ ಉಳಿದ ವಸ್ತುಗಳಲ್ಲಿ ಪ್ರಯೋಗಿಸಲಾಗುತ್ತದೆ. ಹೀಗೆ ಲೋಕವ್ಯವಹಾರಕ್ಕೆ ಯಾವುದೇ ವಿರೋಧ ಬರುವುದಿಲ್ಲ.

**ಪ್ರಶ್ನೆ** :- 'ಇದು ಅಗ್ನಿ ವಿದ್ಯೆ' ಮೊದಲಾದ ವ್ಯವಸ್ಥೆ ಹೇಗೆ?

**ಉತ್ತರ** :- ಅಗ್ನಿ ವಿದ್ಯೆ ಎಂದರೆ ಅಗ್ನಿಯಲ್ಲಿ ಬ್ರಹ್ಮನ ಉಪಾಸನೆ. ಅಗ್ನಿಯಲ್ಲೇ ಭಗವಂತನ ಸಾಕ್ಷಾತ್ಕಾರ ಕೊನೆಗೆ ಅಗ್ನ್ಯಂತರ್ಗತನಾದ ಭಗವಂತನ ಪ್ರಾಪ್ತಿ. ಹೀಗೆ ಉಳಿದ ವಿದ್ಯೆಗಳಲ್ಲೂ ವ್ಯವಸ್ಥೆ. ಹಾಗಾಗಿ ಯಾವುದೇ ವಿರೋಧವಿಲ್ಲ.

ಹೀಗೆ ನಿರವಕಾಶವಾದ ಸಾಧಕಗಳಿರುವುದರಿಂದ ಬಾಧಕಗಳಿಲ್ಲದಿರುವುದರಿಂದ ವೈಶ್ವಾನರ ವಿಷ್ಣುವೇ. ಹಿಂದೆ ಹೇಳಲ್ಪಟ್ಟ ಸರ್ವಗತನಾದ ಅಕ್ಷರನೂ ವಿಷ್ಣುವೇ ಎಂದು ಸಿದ್ಧವಾಯಿತು.

ಹಿಂದಿನ ಅಧಿಕರಣದ ಮೇಲಿನ ಆಕ್ಷೇಪ ಹಾಗು ಸಮಾಧಾನ, ಇದೇ ಪೂರ್ವಪಕ್ಷ ಸಿದ್ಧಾಂತ ಫಲ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಮೊದಲನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು.**

# ಮೊದಲನೆಯ ಅಧ್ಯಾಯದ ಮೂರನೆಯ ಪಾದ

## ॥ ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ ॥ ೧-೩-೧

ಇಲ್ಲಿಯವರೆಗೆ ಅನ್ಯತ್ರ ಪ್ರಸಿದ್ಧವಾದ ಎಲ್ಲಾ ನಾಮ ಮತ್ತು ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ಮಹಾಮಲ್ಲಭಂಗ ನ್ಯಾಯದಿಂದ ಮೊದಲನೇ ಮತ್ತು ಎರಡನೇ ಪಾದಗಳಲ್ಲಿ ಮಾಡಲಾಯಿತು. ಈ ಮೂರನೇ ಪಾದದಲ್ಲಿ ಉಭಯತ್ರ ಪ್ರಸಿದ್ಧವಾದ ನಾಮಲಿಂಗಗಳ ಸಮನ್ವಯವನ್ನು ಮಾಡಲಾಗುವುದು.

**ಪೂರ್ವಪಕ್ಷಃ :-** ಪೂರ್ವಪಾದದ ಅಂತಿಮಾಧಿಕರಣದಿಂದ ಉತ್ತರಪಾದದ ಆದಿ ಅಧಿಕರಣಕ್ಕೆ ಸಂಗತಿಯ ಅಪೇಕ್ಷೆ ಇಲ್ಲ ಎಂದು ಹಿಂದೆಯೇ ಹೇಳಲಾಗಿದೆ. ಆಥರ್ವಣದಲ್ಲಿ ''ಯಸ್ಮಿನ್ ದ್ಯೌಃ'' ಇತ್ಯಾದಿ ವಾಕ್ಯದಲ್ಲಿ ಶ್ರುತನಾದ ದ್ಯುಭ್ವಾದ್ಯಾಯತನನು (ದ್ಯುಲೋಕ ಭೂಲೋಕಾದಿ ಆಶ್ರಯನು) ವಿಷ್ಣುವೋ ರುದ್ರಾದಿಗಳೋ ಎಂದು ಸಂದೇಹ. ರುದ್ರ, ಪ್ರಕೃತಿ, ವಾಯು ಅಥವಾ ಜೀವನು ಎಂದು ಪೂರ್ವಪಕ್ಷ. ''ರುದ್ರೋ ವಾವ ಲೋಕಾಧಾರಃ'' ಇತ್ಯಾದಿ. ವಾಕ್ಯದಲ್ಲಿ ರುದ್ರನಿಗೆ ಲೋಕಾಧಾರತ್ವ ಹೇಳಲಾಗಿದೆ. ''ಪ್ರಾಣಾನಾಂ ಗ್ರಂಥಿರಸಿ'' ''ಪ್ರಾಣೇಶ್ವರಃ ಕೃತ್ತಿವಾಸಾಃ'' ಎಂಬ ವಾಕ್ಯಗಳಲ್ಲಿ ರುದ್ರನಿಗೆ ಇಂದ್ರಿಯಾಧಾರತ್ವವನ್ನು ಹೇಳಿದ್ದಾರೆ. ಈ ಸಮಾಖ್ಯಾ ಇರುವುದರಿಂದ ರುದ್ರನು ದ್ಯುಭ್ವಾದ್ಯಾಯತನ ಎಂದು ಪೂ.ಪ.

ಅಥವಾ ''ಯದೂರ್ಧ್ವಂ ಗಾರ್ಗಿ . . . . ಆಕಾಶ ಏವ ತದೋತಂ ಚ ಪ್ರೋತಂ ಚ'' ಎಂಬುದಾಗಿ ಆಕಾಶ ಶಬ್ದ ವಾಚ್ಯ ಪ್ರಕೃತಿಗೆ ಲೋಕಾಧಾರತ್ವ ಹೇಳಿದ್ದಾರೆ. ಈ ಸಮಾಖ್ಯಾದಿಂದ ಪ್ರಕೃತಿಯು ದ್ಯುಭ್ವಾದ್ಯಾಯತನ ಆಗಬಹುದು.

''ವಾಯುನಾ ವೈ ಗೌತಮ ಸೂತ್ರೇಣ ಅಯಂ ಲೋಕಃ ಪರಶ್ಚ ಲೋಕಃ'' ಎಂಬಲ್ಲಿ ವಾಯುವಿಗೆ ಲೋಕಾಧಾರತ್ವ ಶ್ರುತವಾಗಿದೆ. ಈ ಸಮಾಖ್ಯಾದಿಂದ ವಾಯು ಎಂದು ಪೂರ್ವಪಕ್ಷ.

''ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ'' ಎಂದು ಜಾಯಮಾನತ್ವ ಲಿಂಗ ಇರುವುದರಿಂದ ಜೀವ ಎಂದು ಪೂರ್ವಪಕ್ಷ.

**ಪ್ರಶ್ನೆ:-** ''ಲೋಕಾಶ್ಚ ಲೋಕಿನಶ್ಚ ವಿಷ್ಣೌ ಓತಾಃ'' ಎಂಬುದಾಗಿ ವಿಷ್ಣು ಸಮಾಖ್ಯಾ ಇರುವುದರಿಂದ ವಿಷ್ಣುವು ದ್ಯುಭ್ವಾದ್ಯಾಯತನ ಆಗಲಿ?

**ಪರಿಹಾರ:-** ವಿಷ್ಣು ಸಮಾಖ್ಯಾ ಇದ್ದರೂ. ಬಹುಲವಾದ ರುದ್ರಶಬ್ದ ಮತ್ತು ರುದ್ರಲಿಂಗದಿಂದ ಕೂಡಿದ ರುದ್ರಸಮಾಖ್ಯೆಯೇಪ್ರಬಲ. ಮತ್ತು ಜಾಯಮಾನತ್ವ ಲಿಂಗ ಇದೆ. ಅದು ನಿರವಕಾಶವಾದ್ದರಿಂದ ಈ ಜಾಯಮಾನತ್ವ ಲಿಂಗದಿಂದ ವಿಷ್ಣು ಸಮಾಖ್ಯಾಗೆ ಬಾಧ ಬರುತ್ತದೆ.

**ಪ್ರಶ್ನೆ:-** ''ಅಥ ಪರಾ ಯಯಾ'' ಎಂಬ ವಾಕ್ಯದಲ್ಲಿ ದ್ಯುಭ್ವಾದ್ಯಾಯತನನಿಗೆ ಪರವಿದ್ಯಾವಿಷಯತ್ವವು ಹೇಳಲಾಗಿದೆ. ಅದು ನಿರವಕಾಶವಾದ ವಿಷ್ಣುಲಿಂಗವಷ್ಟೇ ?

**ಪರಿಹಾರ :-** ಹಾಗಾದರೆ ಜೀವಪ್ರಾಪಕವಾದ ಜಾಯಮಾನತ್ವ - ಲಿಂಗ ಮತ್ತು ವಿಷ್ಣುಪ್ರಾಪಕವಾದ ಪರವಿದ್ಯಾ ವಿಷಯತ್ವ. ಇವೆರೆಡರ ವಿರೋಧ ಪರಿಹಾರಕ್ಕಾಗಿ ಜೀವೇಶರಿಗೆ ಅಭೇದವಿರಲಿ. ಹಾಗಾಗಿ ವಿಷ್ಣುಲಿಂಗವನ್ನು ಜೀವನಿಗೆ ಹೇಳಬಹುದು. ಆದರೆ ಜೀವ ಲಿಂಗವನ್ನು ವಿಷ್ಣುವಿಗೆ ಹೇಳಲು ಬರುವುದಿಲ್ಲ (ಉಪಾದಾನ ಕಾರಣ ಹಾಗೂ ಕಾರ್ಯಗಳಿಗೆ ಅಭೇದವಿದ್ದರೂ ಕಾರಣ ಧರ್ಮವನ್ನು ಕಾರ್ಯದಲ್ಲಿ ಹೇಳಬಹುದು ಹೊರತು ಕಾರ್ಯ-ಧರ್ಮವನ್ನು ಕಾರಣದಲ್ಲಿ ಹೇಳುವಂತಿಲ್ಲ). ಆದ್ದರಿಂದ ದ್ಯುಭ್ವಾದ್ಯಾ-ಯತನನು ಜೀವನೇ ಹೊರತು ವಿಷ್ಣುವಲ್ಲ ಎಂದು ಪೂರ್ವಪಕ್ಷ.

**ಸಿದ್ಧಾಂತ :-** ''ತಮೇವೈಕಂ ಜಾನಥ ಆತ್ಮಾನಂ'' ಎಂಬುದಾಗಿ ಆತ್ಮ-ಶಬ್ದವಿರುವುದರಿಂದ, ''ಅಮೃತಸ್ಯೈಷ ಸೇತುಃ'' ಎಂಬುದಾಗಿ ಮುಕ್ತ-ಪ್ರಾಪ್ಯತ್ವರೂಪ ನಿರವಕಾಶಲಿಂಗ ಇರುವುದರಿಂದ, ರುದ್ರಾದಿಗಳಲ್ಲಿ ಅಸಾಧಾರಣವಾದ ಭಸ್ಮಧರತ್ವಾದಿ ಲಿಂಗಗಳಾಗಲಿ ಉಗ್ರಾದಿ ಶಬ್ದಗಳಾಗಲಿ ಇಲ್ಲದಿರುವುದರಿಂದ, ಸಮಾಖ್ಯಾದಲ್ಲಿರುವ ರುದ್ರಾದಿ ಶಬ್ದಗಳು ''ರುಜಂ ದ್ರಾವಯತೇ'' ಇತ್ಯಾದಿ ಸ್ಮೃತಿಗಳಿಂದ ವೈಷ್ಣವವಾದದ್ದರಿಂದ, ಜಾಯಮಾನತ್ವ - ಲಿಂಗವು ''ಅಜಾಯಮಾನೋ ಬಹುಧಾ ವಿಜಾಯತೇ'' ಎಂಬ ಶ್ರುತ್ಯಂ-ತರಬಲದಿಂದ ವಿಷ್ಣುವಿನಲ್ಲಿ ಪ್ರಾದುರ್ಭಾವರೂಪ ಜನನವು ಸಂಭಾವಿತ-

ವಾದ್ದರಿಂದ ವಿಷ್ಣುಪರವೇ ಆಗಿವೆ. ಆದ್ದರಿಂದ ದ್ಯುಭ್ವಾದ್ಯಾಯತನನು ವಿಷ್ಣುವೇ ಆಗಿದ್ದಾನೆ.

**ಪ್ರಶ್ನೆ**:- ''ದ್ವೇ ವಿದ್ಯೇ ವೇದಿತವ್ಯೇ'' ಎಂಬುದಾಗಿ ಹೇಳಲ್ಪಟ್ಟ ಪರ-ವಿದ್ಯಾವಿಷಯತ್ವವನ್ನು ಜೀವೇಶರ ಐಕ್ಯ ಪ್ರಯುಕ್ತವಾಗಿ ಜೀವನಿಗೆ ಹೇಳ-ಬಹುದು ಎಂದರೆ ಸರಿಯಲ್ಲ.

**ಪರಿಹಾರ** :- ''ಜುಷ್ಟಂ ಯದಾ ಪಶ್ಯತ್ಯನ್ಯ ಮೀಶಂ'' ಎಂಬುದಾಗಿ ಈಶನಿಗೆ ಜೀವನಿಂದ ಭೇದ ಹೇಳಿದ್ದರಿಂದ ಮತ್ತು ''ತಯೋರನ್ಯಃ'' ಎಂಬಲ್ಲಿ ಕರ್ಮಫಲ ಭೋಗ ಮತ್ತು ಭೋಗವಿಲ್ಲದ ಅವಸ್ಥೆಯನ್ನು ಜೀವೇಶರಿಗೆ ಹೇಳಿದ್ದರಿಂದ ಅವರಿಬ್ಬರಿಗೆ ಐಕ್ಯವು ಅಯುಕ್ತವಾದುದರಿಂದ ವಿಷ್ಣುವೇ ದ್ಯುಭ್ವಾದ್ಯಾಯತನನು.

**ಫಲ** :- ದ್ಯುಭ್ವಾದ್ಯಾಯತನನು ಬ್ರಹ್ಮನಿಗಿಂತ ಭಿನ್ನನಾದರೆ ಆವಾಗ ಅದೃಶ್ಯತ್ವಾದಿಗುಣವುಳ್ಳ ಅಕ್ಷರನು ಬೇರೆಯಾಗಬೇಕಾಗುತ್ತದೆ ಎಂಬ ಆಕ್ಷೇಪ ಮತ್ತು ಸಮಾಧಾನವೇ ಫಲ.

## ॥ ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ ॥
## ೧-೩-೨

''ಸ ಏವಾಧಸ್ತಾತ್'' ಇತ್ಯಾದಿ ವಾಕ್ಯದಲ್ಲಿ ಸರ್ವಗತತ್ವವು ಹೇಳಲ್ಪಟ್ಟಿದೆ. ಅದು ''ಯತ್ರ ನಾನ್ಯತ್ಪಶ್ಯತಿ..... ಸ ಭೂಮಾ'' ಎಂಬ ಪೂರ್ವವಾಕ್ಯೋಕ್ತ ಭೂಮನ ಧರ್ಮವಾಗಿದೆ. ಇದು ''ಬ್ರಹ್ಮೈವೇದಮಮೃತಂ'' ಎಂಬ ಆಥರ್ವಣ ವಾಕ್ಯದಲ್ಲಿ ಕಂಡುಬಂದಿದೆ. ಅದನ್ನು ಆಕ್ಷೇಪ ಮಾಡಿ ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡಿದ್ದರಿಂದ ಪೂರ್ವಾಧಿಕರಣದಿಂದ ಸಂಗತಿ ಇದೆ. ''ಯೋ ವೈ ಭೂಮಾ ತತ್ಸುಖಂ'' ಎಂದು ಛಾಂದೋಗ್ಯದ ಏಳನೆಯ ಅಧ್ಯಾಯದಲ್ಲಿ ಶ್ರುತನಾದ ಭೂಮನು ಮುಖ್ಯಪ್ರಾಣನೋ ವಿಷ್ಣುವೋ ಎಂದು ಸಂದೇಹ ಪ್ರಾಣ ಎಂದು ಪೂರ್ವಪಕ್ಷ. ಏಕೆಂದರೆ ನಾಮ - ವಾಕ್ - ಮನಸ್ಸು - ಸಂಕಲ್ಪ - ಚಿತ್ತ - ಧ್ಯಾನ - ವಿಜ್ಞಾನ - ಬಲ - ಅನ್ನ - ಅಪ್ - ತೇಜಸ್ಸು - ಆಕಾಶ - ಸ್ಮರ - ಆಶಾ - ಪ್ರಾಣ ಇಷ್ಟು ವಿಷಯಗಳಲ್ಲಿ

ಪ್ರತ್ಯೇಕವಾಗಿ ಪ್ರಶ್ನೆ ಮತ್ತು ಉತ್ತರಪೂರ್ವಕವಾಗಿ (ನಾಮಾಭಿಮಾನಿಗಿಂತ ಯಾರು ದೊಡ್ಡವರು ಎಂದು ಪ್ರಶ್ನೆ. ವಾಗಭಿಮಾನಿ ದೊಡ್ಡವರು ಎಂದು ಉತ್ತರ. ಇದೇ ಕ್ರಮದಿಂದ). ಉತ್ತರೋತ್ತರ ಆಧಿಕ್ಯವನ್ನು ಹೇಳಿ ಕೊನೆಗೆ ಪ್ರಾಣನ ವಿಷಯದಲ್ಲಿ ಮಾತ್ರ ಪ್ರಾಣನಿಗಿಂತ ಯಾರಧಿಕ ಎಂಬ ಪ್ರಶ್ನೆಯಾಗಲಿ ಪ್ರಾಣನಿಗಿಂತ ಭೂಮಾ ಅಧಿಕ ಎಂಬ ಉತ್ತರವಾಗಲಿ ಇಲ್ಲದೆ ಕೇವಲ ''ಯೋ ವೈ ಭೂಮಾ ತತ್ಸುಖಂ'' ಎಂಬ ವಾಕ್ಯ ಮಾತ್ರ ಇರುವುದರಿಂದ ಪ್ರಾಣನೇ ಭೂಮಾ ಎಂದಾಗುತ್ತದೆ.

**ಪ್ರಶ್ನೆ** :- ''ವಿಷ್ಣುರ್ವಾವ ದೇವೇಭ್ಯೋ ಭೂಯಾನ್'' ಎಂಬ ಸಮಾಖ್ಯೆಯು ವಿಷ್ಣುವೇ ಭೂಮಾ ಎಂಬುದಕ್ಕೆ ಆಧಾರವಾಗಿದೆಯೆಲ್ಲಾ ಎಂದರೆ

**ಪರಿಹಾರ** :- ಪ್ರಾಣೋ ವಾ ಆಶಾಯಾ ಭೂಯಾನ್'' ಎಂದು ಉಪಕ್ರಮದಲ್ಲಿರುವುದರಿಂದ ಉಪಕ್ರಮಕ್ಕಿಂತ ಸಮಾಖ್ಯೆಯು ದುರ್ಬಲ-ವಾದ್ದರಿಂದ ಸಮಾಖ್ಯೆಗೆ ಉಪಕ್ರಮದಿಂದ ಬಾಧ ಬರುತ್ತದೆ. ಮತ್ತು ''ಉತ್ಕ್ರಾಂತಪ್ರಾಣಾನ್'' ಎಂದು ಉತ್ಕ್ರಮಣ ಲಿಂಗವು ಶ್ರುತವಾಗಿದೆ. ಇದು ಸರ್ವಗತನಾದ ವಿಷ್ಣುವಿನಲ್ಲಿ ಅಯುಕ್ತವಾಗುತ್ತದೆ. ಆದ್ದರಿಂದಲೇ ''ಅತ ಏವ ಪ್ರಾಣಃ'' ಎಂಬ ನ್ಯಾಯದಿಂದ ಪ್ರಾಣಶಬ್ದವನ್ನು ವಿಷ್ಣುವಿನಲ್ಲಿ ಸಾವಕಾಶ-ಗೊಳಿಸಲು ಬರುವುದಿಲ್ಲ.

**ಸಿದ್ಧಾಂತ** :- ''ಯೋ ವೈ ಭೂಮಾ ತತ್ಸುಖಂ'' ಎಂಬಲ್ಲಿ ಸುಖಶಬ್ದಕ್ಕೆ ಯಾವ ವಿಶೇಷಣವನ್ನೂ ಕೊಟ್ಟಿಲ್ಲವಾದ್ದರಿಂದ ಅದು ಪೂರ್ಣಸುಖರೂಪತ್ವವನ್ನೇ ತಿಳಿಸುತ್ತದೆ. ಆ ಸುಖರೂಪತ್ವವು, ನಾಮಾದಿ ಸರ್ವಾಧಿಕತ್ವವು, ''ಸ ಏವಾಧಸ್ತಾತ್'' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಸರ್ವಗತತ್ವಾದಿ ಧರ್ಮಗಳು ''ವಿಶ್ವಶಂಭುವಂ'', ವಿಶ್ವತಃ ಪರಮಾಂ'' ಇತ್ಯಾದಿ ಶ್ರುತಿಗಳಿಂದ ಕೇವಲ ಬ್ರಹ್ಮನಿಷ್ಠವಾದುದರಿಂದ ಮತ್ತು ವಿಷ್ಣುವಿಗೆ ಅಣುತ್ವವನ್ನು ಮುಂದೆ ಹೇಳುವುದರಿಂದ ಉತ್ಕ್ರಮಣಲಿಂಗವೂ ಕೂಡ ವಿಷ್ಣುವಿನಲ್ಲಿ ಯುಕ್ತವಾಗುವು-ದರಿಂದ ವಿಷ್ಣುವೇ ಭೂಮನು. ಪ್ರಾಣಶಬ್ದವಾಚ್ಯನು ವಿಷ್ಣುವೇ. ಆದ್ದರಿಂದ ಪ್ರಶ್ನೋತ್ತರಗಳು ಆ ಪ್ರಾಣನ ವಿಷಯದಲ್ಲಿ ಇಲ್ಲದಿದ್ದರೂ ಅದು

ಬಾಧಕವಾಗುವುದಿಲ್ಲ. ಅಥವಾ ಪ್ರಾಣಶಬ್ದಕ್ಕೆ ವಾಯು ಎಂದು ಅರ್ಥ-ಮಾಡಿದರೂ ಅವನಿಗಿಂತ ಅಧಿಕ ಯಾರು ಎಂಬ ಪ್ರಶ್ನೆಯನ್ನು ವಿಷ್ಣುವೇ ಅಧಿಕ ಎಂಬ ಉತ್ತರವನ್ನು ಅಧ್ಯಾಹಾರ ಮಾಡಿಕೊಂಡು ಅದರ ನಂತರದಲ್ಲಿ ಬಂದಿರುವ ''ಯೋ ವೈ ಭೂಮಾ'' ಎಂಬ ವಾಕ್ಯವನ್ನು ವಿಷ್ಣು ಪರವನ್ನಾಗಿ ಮಾಡಬಹುದು.

ಇಲ್ಲಿರುವ ಪೂರ್ಣಸುಖತ್ವವು ಬೇರೆಯವರಿಗೆ ಎಂದಾದರೆ ಆನಂದ-ಮಯತ್ವವನ್ನು ಬೇರೆಯವರಿಗೆ ಹೇಳಬೇಕಾಗಬಹುದು ಎಂಬ ಆಕ್ಷೇಪ ಅದರ ಸಮಾಧಾನವೇ ಫಲ.

## ॥ ಓಂ ಅಕ್ಷರಮಂಬರಾಂತಧೃತೇಃ ಓಂ ॥ ೧ - ೩ - ೩

ಹಿಂದಿನ ಅಧಿಕರಣದಲ್ಲಿ ಒಂದೇ ಪ್ರಕರಣದಲ್ಲಿ ಬಂದಿರುವ ಸರ್ವಗತತ್ವ ಹಾಗೂ ಉತ್ಕ್ರಮಣಲಿಂಗಗಳಿಗೆ ವಿರೋಧವನ್ನು ಪರಿಹರಿಸಲಾಯಿತು. ಇಲ್ಲಿಯಾದರೋ ಒಂದೇ ವಾಕ್ಯದಲ್ಲಿ ಕಂಡುಬರುವ ಅಣುತ್ವ ಮಹತ್ವಗಳ ವಿರೋಧವನ್ನು ಪರಿಹರಿಸಲಾಗುವುದು. ಕಾಣ್ವ ಶಾಖೆಯಲ್ಲಿ ಐದನೇ ಅಧ್ಯಾಯ ಎಂಟನೆಯ ಬ್ರಾಹ್ಮಣದಲ್ಲಿ ''ಏತದ್ವೈತದಕ್ಷರಂ'' ಎಂಬ ವಾಕ್ಯದಲ್ಲಿ ಶ್ರುತವಾದ ಅಕ್ಷರವು ಚೇತನಪ್ರಕೃತಿಯೋ, ವಿಷ್ಣುವೋ ಎಂದು ಸಂದೇಹ. ಇಲ್ಲಿ ಅಕ್ಷರ ಎಂದರೆ ಚೇತನಪ್ರಕೃತಿ (ಲಕ್ಷ್ಮೀದೇವಿಯೇ) ಎಂದು ಪೂರ್ವಪಕ್ಷ. ಏಕೆಂದರೆ

(೧) ''ಯೇ ತ್ವಕ್ಷರಮನಿರ್ದೇಶ್ಯಂ'' ಎಂಬ ಗೀತಾವಾಕ್ಯದಲ್ಲಿ ಅಕ್ಷರ ಶಬ್ದವನ್ನು ಲಕ್ಷ್ಮೀದೇವಿಯಲ್ಲಿ ಪ್ರಯೋಗಿಸಲಾಗಿದೆ.

(೨) ಅಕ್ಷರ ಶಬ್ದದ ಪ್ರವೃತ್ತಿ ನಿಮಿತ್ತವಾದ ಅವಿನಾಶಿತ್ವವು ಲಕ್ಷ್ಮೀಯಲ್ಲಿದೆ.

(೩) ''ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ'' ಎಂದು ''ಅಕ್ಷರನಲ್ಲಿ ಚಂದ್ರಾದಿ ಆಧಾರತ್ವವು ಹೇಳಲ್ಪಟ್ಟಿದೆ. ಅದು ''ಸೋಮಮಾಹಸನಂ'' ಎಂಬ ಶ್ರುತ್ಯಂತರದಲ್ಲಿ ಲಕ್ಷ್ಮೀಯಲ್ಲೇ ಪ್ರಸಿದ್ಧವಾದದ್ದು.

(೪) ''ಅದೃಷ್ಟಂ ದ್ರಷ್ಟೃ'' ಇತ್ಯಾದಿಯಾಗಿ ಹೇಳಲ್ಪಟ್ಟ ಅದೃಶ್ಯತ್ವಾದಿಗಳೂ ಕೂಡ ''ಯೇ ತ್ವಕ್ಷರಂ'' ಇತ್ಯಾದಿ ಶ್ರುತಿಯ ಪ್ರಕಾರ ಲಕ್ಷ್ಮೀಯಲ್ಲೂ ಸಂಭಾವಿತ.

(೫) ''ನ ತದಶ್ನಾತಿ ಕಿಂಚನ'' ಎಂಬಲ್ಲಿ ಹೇಳಲ್ಪಟ್ಟ ಅನಶನವು ವಿಷ್ಣುವಿನಲ್ಲಿ ಸರಿಯಾಗುವುದಿಲ್ಲ. ಏಕೆಂದರೆ ಅವನು ''ಅತ್ತಾ ಚರಾಚರಗ್ರಹಣಾತ್'' ಎಂಬ ಸೂತ್ರದಲ್ಲಿ ಅಶನವುಳ್ಳವನು ಎಂದು ಹೇಳಲ್ಪಟ್ಟಿದ್ದಾನೆ. ಯದ್ಯಪಿ ವಿಷ್ಣುವಿನಲ್ಲಿ ಗುಹಾಧಿಕರಣದಲ್ಲಿ ಹೇಳಿದಂತೆ ಅಶುಭ ಅನಶನವನ್ನಿಟ್ಟುಕೊಂಡು ''ನ ತದಶ್ನಾತಿ'' ಎಂಬುದನ್ನು ಕೂಡಿಸಬಹುದು. ಆದರೆ ''ಕಿಂಚನ'' (ಯಾವುದನ್ನೂ ಭೋಗಿಸುವುದಿಲ್ಲ) ಎಂಬುದರ ವಿರೋಧ ಬರುತ್ತದೆ.

ಲಕ್ಷ್ಮೀದೇವಿಯಲ್ಲಾದರೆ ಭೋಗವಿದ್ದರೂ ಸ್ವತಂತ್ರ ಭೋಗವಿಲ್ಲದ ಪ್ರಯುಕ್ತ ''ನ ತದಶ್ನಾತಿ'' ಎಂಬುದನ್ನು ಸಮನ್ವಯ ಮಾಡಬಹುದು.

**ಸಿದ್ಧಾಂತ :-** ವಿಷ್ಣುವೇ ಅಕ್ಷರ ಶಬ್ದವಾಚ್ಯನಾಗಿದ್ದಾನೆ.

(೧) ಏಕೆಂದರೆ ''ಯದ್ಭೂತಂ ಚ ಭವಚ್ಚ ........ಆಕಾಶೇ ಏವ ತದೋತಂ'' ಎಂಬುದಾಗಿ ಆಕಾಶ ಶಬ್ದವಾಚ್ಯ ಲಕ್ಷ್ಮೀಗೆ ಸರ್ವಾಧಾರತ್ವವನ್ನು ಹೇಳಿ ಅನಂತರ ''ಏತಸ್ಮಿನ್ ಖಲು ಅಕ್ಷರೇ ಗಾರ್ಗಿ ಆಕಾಶಃ ಓತಶ್ಚ ಪ್ರೋತಶ್ಚ'' ಎಂಬುದಾಗಿ ಲಕ್ಷ್ಮ್ಯಾಧಾರತ್ವವನ್ನು ಹೇಳಿದ್ದಾರೆ. ಇದು ಕೇವಲ ವಿಷ್ಣುನಿಷ್ಠವಾಗಿದೆ.

(೨) ''ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ'' ಇತ್ಯಾದಿ ವಾಕ್ಯದಲ್ಲಿ ಅಕ್ಷರನು ಸ್ವತಂತ್ರವಾಗಿ ಅಸಂಕುಚಿತ ಸರ್ವಶಾಸಕ ಎಂದು ಹೇಳಿದ್ದಾರೆ. ಇದು ''ಏಕೋ ದಾಧಾರ ಭುವನಾನಿ'' ಇತ್ಯಾದಿ ಶ್ರುತಿಯಿಂದ ಕೇವಲ – ವಿಷ್ಣುನಿಷ್ಠ ಎಂದು ಸಿದ್ಧವಾಗಿದೆ.

(೩) ''ಅಸ್ಥೂಲಮನಣು'' ಇತ್ಯಾದಿ ವಾಕ್ಯದಲ್ಲಿ ಅನ್ಯಾನಾಪೇಕ್ಷವಾಗಿ ಪ್ರಾಕೃತ ಸ್ಥೌಲ್ಯಾದ್ಯ ಭಾವವು ಅಕ್ಷರನಿಗಿದೆ ಎಂದು ಹೇಳಿದ್ದಾರೆ. ಹಾಗೆಯೇ ವಿರುದ್ಧವಾದ ಅಣುತ್ವ ಮಹತ್ವಗಳನ್ನು ಹೇಳಿದ್ದಾರೆ. ಈ ಲಿಂಗಗಳೂ ಕೂಡ ''ಅಸ್ಥೂಲೋ ಅನಣುಃ'' ಎಂಬ ಶ್ರುತಿಯಿಂದ ಕೇವಲ ವಿಷ್ಣುನಿಷ್ಠವಾಗಿವೆ.

(೪) ಅಕ್ಷರ ಶಬ್ದ ಪ್ರವೃತ್ತಿ ನಿಮಿತ್ತವಾದ ಅವಿನಾಶಿತ್ವವೂ ಕೂಡ ಅನಿತ್ಯತ್ವ, ದೇಹಹಾನಿ, ಅಸ್ವಾತಂತ್ರ್ಯ, ಅಪೂರ್ಣತಾ ಎಂಬ ಚತುರ್ವಿಧನಾಶರಹಿತನಾದ ವಿಷ್ಣುವಿನಲ್ಲಿಯೇ ಪುಷ್ಕಳವಾಗಿದೆ. ಮತ್ತು ''ಅಥ ಪರಾ ಯಯಾ ತದಕ್ಷರಂ'' ಎಂದು ಪ್ರಯೋಗ ಇರುವುದರಿಂದಲೂ ಅಕ್ಷರ ಶಬ್ದ ವಾಚ್ಯ ವಿಷ್ಣುವೇ.

''ನ ತದಶ್ನಾತಿ'' ಎಂದು ಅಶನನಿಷೇಧ ಮಾಡಿದ್ದರೂ ಜೀವರಲ್ಲಿ ಇರುವಂತಹ ಉಪಜೀವನಾರ್ಥವಾದ ಅಶನವನ್ನು ನಿಷೇಧ ಮಾಡಿದ್ದಾರೆ ಎಂದು ಇಟ್ಟುಕೊಳ್ಳಬೇಕು. ಅಣುತ್ವ-ಮಹತ್ವಾದಿಗಳನ್ನು ಅಚಿಂತ್ಯಶಕ್ತಿಯಿಂದ ಕೂಡಿಸಬೇಕು. ''ಆಕಾಶೇ ಏವ ತದೋತಂ'' ಎಂಬಲ್ಲಿ ಹೇಳಲ್ಪಟ್ಟಿರುವ ಆಕಾಶವು ಸರ್ವಾಧಾರವಾಗಿದೆ ಮತ್ತು ಬೇರೊಂದನ್ನು ಮಾತ್ರ ಆಶ್ರಯಿಸಿದೆ ಎಂದು ಹೇಳಿದ್ದರಿಂದ ಶ್ರೀ ತತ್ವವೆಂದೇ ಭಾವಿಸಬೇಕು.

**ಫಲ :-** ಅದೃಶ್ಯತ್ವಾದಿ ಗುಣವುಳ್ಳ ಅಕ್ಷರನು ವಿಷ್ಣುವಿಗಿಂತ ಭಿನ್ನನಾದರೆ ಅದೃಶ್ಯತ್ವಾಧಿಕರಣದಲ್ಲಿ ಹೇಳಲ್ಪಟ್ಟವನು ಬೇರೆಯಾಗಬೇಕಾಗುತ್ತದೆ. ಅದರ ಆಕ್ಷೇಪ ಮತ್ತು ಸಮಾಧಾನವೇ ಫಲ.

## ।। ಓಂ ಈಕ್ಷತಿಕರ್ಮ ವ್ಯಪದೇಶಾತ್ಸಃ ಓಂ ।। ೧ - ೩ - ೪

ಇಲ್ಲಿ ''ಸದೇವ ಸೋಮ್ಯ'' ಎಂಬಲ್ಲಿ ಉಕ್ತವಾದ ಸತ್ ಶಬ್ದವಾಚ್ಯನು ವಿಷ್ಣುವಿಗಿಂತ ಭಿನ್ನನಾದರೆ ''ಸದಾಯತನಾಃ'' ಎಂಬಲ್ಲಿ ಶ್ರುತವಾದ ಸರ್ವಾಧಾರತ್ವವು ಅನ್ಯನಿಷ್ಠವಾಗುವುದರಿಂದ ಪೂರ್ವಾಧಿಕರಣದಲ್ಲಿ ಹೇಳಲ್ಪಟ್ಟ ಅಂಬರಾಂತಸರ್ವಾಧಾರತ್ವವು ಅಕ್ಷರ ಶಬ್ದವಾಚ್ಯನಾದ ವಿಷ್ಣುವಿಗಲ್ಲ ಬೇರೆಯವರಿಗೆ ಸೇರಬೇಕು ಎಂದು ಆಕ್ಷೇಪ ಮಾಡುವುದರಿಂದ ಸಂಗತಿ. ಛಾಂದೋಗ್ಯದ ಷಷ್ಠಾಧ್ಯಾಯದಲ್ಲಿ ''ಸದೇವ ಸೋಮ್ಯ'' ಎಂದು ಉಪ-ಕ್ರಮಿಸಿ ''ತದೈಕ್ಷತ ಬಹುಸ್ಯಾಂ ಪ್ರಜಾಯೇಯ'' ಎಂಬಲ್ಲಿ ಕಾರಣತ್ವೇನ ಉಕ್ತವಾದ ಸಚ್ಛಬ್ದವಾಚ್ಯವು ಬ್ರಹ್ಮನೋ ಜಡಪ್ರಕೃತಿಯೋ ಎಂದು ಸಂದೇಹ. ಜಡಪ್ರಕೃತಿ ಎಂದು ಪೂರ್ವಪಕ್ಷ ಏಕೆಂದರೆ ''ಬಹುಸ್ಯಾಂ'' ಎಂಬಲ್ಲಿ ತೇಜಸ್ಸೇ ಮೊದಲಾದ ಅನೇಕ ರೂಪವನ್ನು ತಾಳಿದ್ದು ಕಂಡುಬರುತ್ತದೆ. ಅದು ಪರಿಣಾಮಗೊಳ್ಳುವ ಜಡಪ್ರಕೃತಿಗೆ ಸರಿಹೊಂದುತ್ತದೆ ಹೊರತು ''ನಿರ್ವಿ-

ಕಾರೋऽಕ್ಷರಃ'' ಎಂಬ ಶ್ರುತಿಯ ಪ್ರಕಾರ ನಿರ್ವಿಕಾರನಾದ ವಿಷ್ಣುವಿನಲ್ಲಿ ಸರಿಗೂಡುವುದಿಲ್ಲ. ಯದ್ಯಪಿ ''ಬಹುಸ್ಯಾಂ'' ಎಂಬಲ್ಲಿ ಬಹುರೂಪ ತಾಳಿದ್ದು ಮಾತ್ರ ಕಂಡಿದೆ ಹೊರತು ತೇಜಸ್ಸು ಮೊದಲಾದ ರೂಪವನ್ನು ತಾಳಿದ್ದು ಕಂಡಿಲ್ಲ. ಆದರೂ ''ತತ್ತೇಜೋऽಸೃಜತ'' ಎಂಬ ವಾಕ್ಯಶೇಷದಿಂದಾಗಿ ತೇಜ ಆದಿ ರೂಪದಿಂದ ಪರಿಣಾಮಗೊಂಡ ಎಂದೇ ಹೇಳಬೇಕು ಹೊರತು ಕೇವಲ ತನ್ನ ಸ್ವರೂಪ ಬಾಹುಲ್ಯ ಪಡೆದನೆಂದು ಅರ್ಥೈಸಬಾರದು. ಸ್ವರೂಪಬಾಹುಲ್ಯದ ಸಂಕಲ್ಪ ಮಾಡಿ ತೇಜ ಆದಿಗಳನ್ನು ಸೃಷ್ಟಿಸಿದನು ಎಂಬುದು ಸರಿ ಹೊಂದುವುದಿಲ್ಲ ವಷ್ಟೇ. ''ತದೈಕ್ಷತ'' ಎಂಬಲ್ಲಿ ಉಕ್ತವಾದ ಈಕ್ಷಣವನ್ನು ಜ್ಞಾನ ನಿಮಿತ್ತವಾದ ಸತ್ವಗುಣಸಂಬಂಧದಿಂದ ಕೂಡಿಸಬಹುದು. ಅಥವಾ ಜಡಪ್ರಕೃತಿಯು ಕಾರ್ಯೋನ್ಮುಖವಾಯಿತು ಎಂದು ಅರ್ಥೈಸಬಹುದು. ಅಥವಾ ಅಭಿಮಾನಿ-ದೇವತೆಗೆ ಈಕ್ಷಿತೃತ್ವವನ್ನು ಹೇಳಬಹುದು.

**ಸಿದ್ಧಾಂತ** :- ೧) ಸಚ್ಛಬ್ದವಾಚ್ಯನಾದವನು ವಿಷ್ಣುವೇ ಏಕೆಂದರೆ ''ತದೈಕ್ಷತ'' ಎಂಬಲ್ಲಿ ಉಕ್ತವಾದ ಮುಖ್ಯವಾದ ಈಕ್ಷಿತೃತ್ವವನ್ನೇ ಅವನಲ್ಲಿ ಹೇಳಲು ಬರುವಾಗ ಜಡದಲ್ಲಿ ಅಮುಖ್ಯ ಈಕ್ಷಿತೃತ್ವವನ್ನು ಹೇಳುವುದು ಸರಿಯಲ್ಲ.

೨) ಅಭಿಮಾನ್ಯಧಿಕರಣದಂತೆ ''ತೇಜಃ'' ಇತ್ಯಾದಿ ಶಬ್ದಗಳು ದೇವತಾ-ವಾಚಕವಾದುದರಿಂದ ಜಡಪ್ರಕೃತಿಯು ಅನೇಕ ದೇವತಾರೂಪದಿಂದ ಪರಿಣಾಮಗೊಂಡಿತು ಎಂದು ಹೇಳುವುದು ಸರಿಯಲ್ಲ. ವಿಷ್ಣುವು ಸಚ್ಛಶಬ್ದ ವಾಚ್ಯನಾದರೆ ಅವನು ನಿಯಾಮಕರೂಪಬಾಹುಲ್ಯವನ್ನು ಅಪೇಕ್ಷಿಸಿ ಅದಕ್ಕಾಗಿ ನಿಯಮ್ಯಗಳು ಬೇಕಾದುದರಿಂದ ನಿಯಮ್ಯವಾದ ತೇಜಸ್ಸೇ ಮೊದಲಾದ ತತ್ವಗಳನ್ನು ಸೃಷ್ಟಿಮಾಡಿದನೆಂದು ಹೇಳುವುದು ಸಂಗತವಾಗುತ್ತದೆ. ವಿಷ್ಣುವು ಒಬ್ಬನೇ ಆದರೂ ಗುಹಾಧಿಕರಣ ನ್ಯಾಯದಿಂದ ಬಹುತ್ವವನ್ನು ಹೇಳಬಹುದು. ದ್ಯುಭ್ವಾದ್ಯಧಿಕರಣ ನ್ಯಾಯದಂತೆ ಜನನವನ್ನೂ ಹೇಳಬಹುದು.

''ಸದೇವ'' ಎಂದು ಅವಧಾರಣಾರ್ಥಕ ಏವಕಾರದಿಂದ ಪ್ರಧಾನಕ್ಕೆ ಮಾತ್ರ ಜಗತ್ಕಾರಣತ್ವ ಪ್ರತೀತವಾಗುವುದರಿಂದ ಈಶನಲ್ಲಿ ಇಲ್ಲದಂತಾಗುತ್ತದೆ. ಎಂದು ಜನ್ಮಾದಿಸೂತ್ರಗಳ ಆಕ್ಷೇಪ ಮತ್ತು ಸಮಾಧಾನವೇ ಫಲ.

## ॥ ಓಂ ದಹರ ಉತ್ತರೇಭ್ಯಃ ಓಂ ॥ ೧-೩-೫

ಈ ಅಧಿಕರಣದಲ್ಲಿ - ''ಉಭೇ ಅಸ್ಮಿನ್ ದ್ಯಾವಾ ಪೃಥಿವೀ'' ಎಂಬಲ್ಲಿ ಹೃತ್ಪದ್ಮಸ್ಥನಿಗೆ ಸರ್ವಾಧಾರತ್ವವು ಶ್ರುತವಾಗಿದೆ. ಆ ಹೃತ್ಪದ್ಮಸ್ಥನು ವಿಷ್ಣುವಿಗಿಂತ ಭಿನ್ನನಾದರೆ ''ಇಮಾಃ ಪ್ರಜಾಃ ಸದಾಯತನಾಃ'' ಎಂಬಲ್ಲಿ ಸರ್ವಾಧಾರತ್ವೇನ ಹೇಳಲ್ಪಟ್ಟ ಸಚ್ಛಬ್ದವಾಚ್ಯನೂ ಕೂಡ ಭಿನ್ನನಾಗಬೇಕಾಗುತ್ತದೆ ಎಂದು ಅಪೂರ್ವಾಕ್ಷೇಪ ಮಾಡುವುದರಿಂದ ಆಕ್ಷೇಪಿಕೀ ಸಂಗತಿ. ಛಾಂದೋಗ್ಯದ ಅಷ್ಟಮಾಧ್ಯಾಯ ಮೊದಲನೆಯ ಖಂಡದಲ್ಲಿ 'ಯದಿದಮಸ್ಮಿನ್ ಬ್ರಹ್ಮಪುರೇ' ದಹರಂ ಪುಂಡರೀಕಂ ದಹರೋಽಸ್ಮಿನ್ನಂತರ ಆಕಾಶಃ..... ತಾವಾನೇಷೋ.... ಆಕಾಶಃ ಉಭೇ ಅಸ್ಮಿನ್ ದ್ಯಾವಾಪೃಥಿವೀ'' ಇತ್ಯಾದಿ ವಾಕ್ಯದಲ್ಲಿ ಸರ್ವಾ-ಧಾರತ್ವೇನ ಶ್ರುತವಾದ ಹೃತ್ಪದ್ಮಸ್ಥವು ಆಕಾಶವೋ, ಜೀವನೋ ವಿಷ್ಣುವೋ ಎಂದು ಸಂದೇಹ. ಆಕಾಶವೇ ಹೊರತು ವಿಷ್ಣುವಲ್ಲ ಎಂದು ಪೂರ್ವಪಕ್ಷ. ಗಗನದಲ್ಲಿ ಪ್ರಸಿದ್ಧವಾದ ಆಕಾಶ ಶಬ್ದವನ್ನು ಹೃತ್ಪದ್ಮಸ್ಥನಲ್ಲಿ ಪ್ರಯೋಗಿಸಿದ್ದರಿಂದ

**ಪ್ರಶ್ನೆ** :- ಆಕಾಶಶಬ್ದ ವಾಚ್ಯನಲ್ಲಿ ಸರ್ವಾಧಾರತ್ವ ವೆಂಬ ವಿಷ್ಣುಲಿಂಗ ಶ್ರುತವಾದ್ದರಿಂದ ಆಕಾಶಾಧಿಕರಣ - ನ್ಯಾಯದಿಂದ ಅದು ವಿಷ್ಣುವಾಚಕವೇ ಆಗಬಹುದಲ್ಲಾ ?

**ಪರಿಹಾರ** :- ಶ್ರುತ್ಯಂತರದಲ್ಲಿ ''ಪದ್ಮಕೋಶಪ್ರತೀಕಾಶಂ ಎಂದು ಪ್ರಾರಂಭಿಸಿ ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಂ'' ಎಂದು ಸುಷಿರಶಬ್ದವಾಚ್ಯವಾದ ಛಿದ್ರಾತ್ಮಕವಾದ ಅಥವಾ ಅವಕಾಶಾತ್ಮಕವಾದ ಆಕಾಶಕ್ಕನೇ ಹೃತ್ಪದ್ಮಸ್ಥತ್ವವನ್ನು ಸರ್ವಾಧಾರತ್ವವನ್ನು ಹೇಳಿದ್ದರಿಂದ ಇಲ್ಲಿ ವಿಷ್ಣುವೆಂದಿಟ್ಟುಕೊಂಡರೆ ಶ್ರುತ್ಯಂತರ ಸಮಾಖ್ಯಾ ವಿರೋಧ ಬರುತ್ತದೆ.

ಆಕಾಶಶಬ್ದವಾಚ್ಯ ವಿಷ್ಣುವೆಂದು ಭಾವಿಸಿದರೆ ಆ ಆಕಾಶಕ್ಕೇ ಜಿಜ್ಞಾಸ್ಯತ್ವ ಹೇಳಬೇಕೇ ಹೊರತು ಆಕಾಶದಲ್ಲಿರುವ ವಸ್ತುವಿಗೆ ಜಿಜ್ಞಾಸ್ಯತ್ವ ಹೇಳಿದ್ದು ವಿರುದ್ಧವಾಗುತ್ತದೆ.

**ಪ್ರಶ್ನೆ** :- ಹೃತ್ಪದ್ಮಸ್ಥ ಆಕಾಶ ಶಬ್ದವು ಪ್ರಸಿದ್ಧವಾದ ಸುಷಿರಾಕಾಶವೇ ಆಗಲಿ. ಆದರೆ ಸರ್ವಾಧಾರತ್ವೇನ ಶ್ರುತನಾದವ ವಿಷ್ಣುವೇ ಆಗಲಿ. ಅವನೇ ''ತಸ್ಮಿನ್

ಯದಂತಃ'' ಎಂಬುದಾಗಿ ಹೃತ್ಪದ್ಮಸ್ಥ ಆಕಾಶದಲ್ಲಿ ಇರುವವನು. ಅವನಿಗೂ ಪರಂಪರೆಯಾ ಹೃತ್ಪದ್ಮಸ್ಥತ್ವವನ್ನು ಹೇಳಬಹುದು?

**ಪರಿಹಾರ** :- ಹೀಗೆ ಹೇಳಿದರೆ ವಾಕ್ಯಾನ್ವಯವು ಸರಿಗೂಡುವುದಿಲ್ಲ. ಏಕೆಂದರೆ ''ಕಿಂ ತದತ್ರ ವಿದ್ಯತೇ'' (ಹೃತ್ಪದ್ಮಸ್ಥ ಸುಷಿರಾಕಾಶದಲ್ಲಿ ಏನಿದೆ) ಎಂದು ಪ್ರಶ್ನಿಸಿದಾಗ ''ಬ್ರಹ್ಮ ವಿದ್ಯತೇ'' ಎಂದು ಹೇಳುವುದೇ ಯುಕ್ತವಾಗುತ್ತದೇ ಹೊರತು ''ಯಾವಾನ್ ವಾ'' ಇತ್ಯಾದಿ ವಾಕ್ಯದಿಂದ ಹೃದಯಾಕಾಶಕ್ಕೆ ಬಾಹ್ಯಾಕಾಶತುಲ್ಯತ್ವ ಹೇಳುವುದು ಅಸಂಗತವಾಗುತ್ತದೆ.

**ಪ್ರಶ್ನೆ**:- ''ಯಾವಾನ್‌ವಾ'' ಎಂಬ ವಾಕ್ಯದಲ್ಲಿಯೂ ಸರ್ವಾಧಾರತಯಾ ಉಕ್ತವಾದ ಆಕಾಶಶಬ್ದವಾಚ್ಯನು ಬ್ರಹ್ಮನೇ ಎಂದು ಒಪ್ಪುತ್ತೇವೆ. ಆದ್ದರಿಂದ ಅಸಂಗತಿ ಇಲ್ಲ ಎಂದರೆ,

**ಪರಿಹಾರ** :- ಇದೂ ಸರಿಯಲ್ಲ. ಏಕೆಂದರೆ ಸುಷಿರಶ್ರುತಿಯಲ್ಲಿ ಸುಷಿರಾಕಾಶಕ್ಕೆ ಸರ್ವಾಧಾರತ್ವ ಹೇಳಿದ್ದರಿಂದ ಅದರ ವಿರೋಧ ಬರುತ್ತದೆ. ಮತ್ತು ಹೃತ್ಪದ್ಮವಾಕ್ಯದಲ್ಲಿ ಪ್ರಸ್ತುತವಾದ ದಹರಾಕಾಶವನ್ನೇ ಬಾಹ್ಯಾಕಾಶತುಲ್ಯ ಎಂಬುದಾಗಿ ಅನುವಾದ ಮಾಡಿ ಅಲ್ಲಿ ದ್ಯುಲೋಕಾದಿಗಳು ಇದ್ದಾವೆ ಎಂಬುದನ್ನೇ ''ಉಭೇ ಅಸ್ಮಿನ್ ದ್ಯಾವಾಪೃಥಿವೀ'' ಎಂಬ ವಾಕ್ಯವು ಹೇಳುತ್ತದೆ ಎಂಬುದೇ ಸಂಗತವಾಗುವುದರಿಂದ ದ್ಯಾವಾಪೃಥಿವ್ಯಾದಿಗಳಿಗೆ ಆಕಾಶಾಂತಸ್ಥತ್ವವನ್ನು ಹೇಳುವುದೇ ಉಚಿತ. ಆದ್ದರಿಂದ ಸಾಕ್ಷಾತ್ ಹೃತ್ಪದ್ಮಸ್ಥವು ಸುಷಿರಾಕಾಶ. ಪರಂಪರಯಾ ದ್ಯಾವಾ ಪೃಥಿವ್ಯಾದಿಗಳು ಎಂಬುದಾಗಿ ಎಂದು ಮೊದಲನೆಯ ಪೂರ್ವಪಕ್ಷ.

ದಹರಾಕಾಶದಲ್ಲಿರುವವನು ಜೀವ ಎಂದು ಇನ್ನೊಂದು ಪೂರ್ವಪಕ್ಷ. ಏಕೆಂದರೆ ''ಯ ಆತ್ಮಾ ಅಪಹತಪಾಪ್ಮಾ'' ಎಂಬ ವಾಕ್ಯಶೇಷದಲ್ಲಿ ದಹರಾ-ಕಾಶಸ್ಥನಲ್ಲಿ ಆತ್ಮಶಬ್ದ ಪ್ರಯೋಗವಿದೆ. ಆ ಆತ್ಮಶಬ್ದವಾದರೋ ಜೀವವಾಚಕವೇ ಆಗಿದೆ. ಏಕೆಂದರೆ ಏಷ ಆತ್ಮಾ ಎಂಬ ಉತ್ತರ ವಾಕ್ಯದಲ್ಲಿ ಹಿಂದೆ ಸಂಪ್ರಸಾದ ಪದದಿಂದ ಪ್ರಸ್ತುತನಾದ ಜೀವನನ್ನೇ ''ಏಷಃ'' ಎಂದು ಪರಾಮರ್ಷ ಮಾಡಿ ಆತ್ಮತ್ವವನ್ನು ವಿಧಾನ ಮಾಡಿದ್ದಾರೆ. ಮತ್ತು ದಹರಸ್ಥತ್ವ (ಅಲ್ಪ ಸ್ಥಳಸ್ಥಿತತ್ವ) ಎಂಬ ಲಿಂಗದಿಂದಲೂ ಆತ್ಮ ಮತ್ತು ಆಕಾಶ ಶಬ್ದವು ಜೀವ-ವಾಚಕವೇ ಆಗಬೇಕು.

ಸರ್ವಗತನಾದ ವಿಷ್ಣುವಿನಲ್ಲಿ ದಹರಸ್ಥತ್ವ ಕೂಡುವುದಿಲ್ಲ. ಯದ್ಯಪಿ ಸರ್ವಗತವಾದ ಆಕಾಶಕ್ಕೆ ಅಲ್ಪಸ್ಥಾನಸ್ಥಿತತ್ವ ಇದೆ. ಅದು ಅಪೂರ್ಣವಾದ ಅಂಶತಃ ಎಂದು ಸರಿಗೂಡಿಸಬಹುದು. ಆದರೆ ಬ್ರಹ್ಮ ಅಂಶವೂ ಪೂರ್ಣವೇ ಆದ್ದರಿಂದ ಅಂಶತೋಽಪಿ ಅಲ್ಪಸ್ಥಾನಸ್ಥಿತತ್ವವನ್ನು ಹೇಳಲು ಬರುವುದಿಲ್ಲ.

ದಹರಾಕಾಶಾಂತಸ್ಥನು ಜೀವನೇ ಆದರೆ ''ಕಿಂ ತದತ್ರ ವಿದ್ಯತೇ'' ಎಂಬ ಪ್ರಶ್ನೆಗೆ ''ಯಾವಾನ್ ವಾ ಅಯಮಾಕಾಶಃ'' ಎಂಬ ಉತ್ತರವು ಅನನ್ವಿತವಾಗುತ್ತದೆ ಎಂದರೆ ಈ ಆಪತ್ತಿಯು ಬ್ರಹ್ಮಪಕ್ಷದಲ್ಲಿಯೂ ಸಮಾನವೇ ಆಗುತ್ತದೆ.

**ಸಿದ್ಧಾಂತ** :- ಹೃದಯಸ್ಥವಾದ ದಹರಾಕಾಶದ ಒಳಗಿದ್ದು ಹೃತ್ಪದ್ಮಸ್ಥ ಎನಿಸಿದವನು ಬ್ರಹ್ಮನೇ. (೧) ''ಯ ಆತ್ಮಾ ಅಪಹತ ಪಾಪ್ಮಾ'' ಎಂಬ ಉತ್ತರ ವಾಕ್ಯದಲ್ಲಿ ಅಪಹತಪಾಪ್ಮತ್ವ, ವಿಜರತ್ವ, ವಿಮೃತ್ಯುತ್ವ, ವಿಶೋಕತ್ವ ಮೊದಲಾದ ಲಿಂಗಗಳು ಶ್ರುತವಾಗಿವೆ. ಆ ಲಿಂಗಗಳಾದರೋ ''ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ ಯೋಽಶನಾಯಾ ಪಿಪಾಸೇ'' ಎಂಬ ಇತ್ಯಾದಿ ಶ್ರುತ್ಯಂತರ-ದಿಂದ ಕೇವಲ ವಿಷ್ಣುನಿಷ್ಠವೆಂದು ನಿರ್ಣೀತವಾಗಿವೆ. ಅವುಗಳಿಂದಾಗಿ ಹೃತ್ಪದ್ಮಸ್ಥನು ವಿಷ್ಣುವೇ ಎಂದು ತಿಳಿಯಬೇಕು.

(೨) ಅದೇ ರೀತಿ ಇಲ್ಲಿ ''ಅಹರಹರ್ಗಚ್ಛಂತ್ಯಃ'' ಎಂಬ ವಾಕ್ಯದಲ್ಲಿ ಸುಪ್ತಪ್ರಾಪ್ಯತ್ವ ಲಿಂಗವು ಶ್ರುತವಾಗಿದೆ. ಅದು ''ಸತಾಸೋಮ್ಯ'' ಎಂಬ ಶ್ರುತ್ಯಂತರದಲ್ಲಿಯೂ ಇದೆ. ಈಕ್ಷತಿ ಕರ್ಮಾಧಿಕರಣ ನ್ಯಾಯದಿಂದ ಅಲ್ಲಿ ಬ್ರಹ್ಮಧರ್ಮ ಎಂದು ನಿರ್ಣೀತವಾಗಿದೆ.

(೩) 'ಅಹರಹರ್ಗಚ್ಛಂತ್ಯಃ' ಎಂಬ ಶ್ರುತಿಯಲ್ಲಿಯೇ 'ಬ್ರಹ್ಮಲೋಕಂ' ಎಂಬುದಾಗಿ ಹೃತ್ಪದ್ಮಲ್ಲಿ ಪ್ರಯೋಗಿಸಲಾಗಿದೆ. 'ಬ್ರಹ್ಮಣೋ ಲೋಕಂ' ಎಂಬುದಾಗಿ ಷಷ್ಠೀ ತತ್ಪುರುಷದಿಂದ ಹೃತ್‌ಪದ್ಮವು ಬ್ರಹ್ಮನ ಲೋಕ ಅಂದರೆ ಆಧಾರ ಎಂದು ಅರ್ಥವಾಗುತ್ತದೆ.

ಆಗ ಹೃತ್‌ಪದ್ಮಸ್ಥನು ಬ್ರಹ್ಮ ಎಂದೇ ನಿರ್ಧಾರವಾಗುತ್ತದೆ.

ಅಥವಾ ಬ್ರಹ್ಮನೇ ಲೋಕ ಅಂದರೆ ಸರ್ವಾಧಾರ ಎಂದಿಟ್ಟುಕೊಂಡಾಗ ಹೃತ್ಪದ್ಮಸ್ಥನಲ್ಲಿ ಪ್ರಯುಕ್ತವಾದಂತಾಗುತ್ತದೆ. ಆಗ ಹೃತ್ಪದ್ಮಸ್ಥನು ಬ್ರಹ್ಮನಾಗಿದ್ದಾನೆ

ಮತ್ತು ಸರ್ವಾಧಾರನಾಗಿದ್ದಾನೆ ಎಂದರ್ಥವಾಗಿ ಈ ಪಕ್ಷದಲ್ಲೂ ಬ್ರಹ್ಮನೇ ಹೃತ್ಪದ್ಮಸ್ಥ ಎಂದು ನಿರ್ಧಾರವಾಗುತ್ತದೆ.

(೪) ಹಾಗೆಯೇ 'ಅರಶ್ಚ ಹ ವೈ ಣ್ಯಶ್ಚ ಅರ್ಣವೌ ಬ್ರಹ್ಮಲೋಕೇ' ಎಂಬ ವಾಕ್ಯದಲ್ಲಿ ಅರ ಮತ್ತು ಣ್ಯ ಎಂಬ ಅಮೃತ ಸಮುದ್ರಕ್ಕೆ ಆಶ್ರಯವಾದ ಲೋಕದಲ್ಲಿ ಬ್ರಹ್ಮಲೋಕ ಎಂಬ ಪದ ಪ್ರಯೋಗವಿದೆ. ಆ ಪದವನ್ನೇ ಹೃತ್ಪದ್ಮದಲ್ಲೂ ಪ್ರಯೋಗಿಸಿದ್ದಾರೆ. ಆದ್ದರಿಂದ ಹೃತ್ಪದ್ಮಸ್ಥನು ಅರಣ್ಯಾಶ್ರಯ ಲೋಕಉಳ್ಳವನು (ಲೋಕವಾಸಿ) ಎಂದು ಸಿದ್ಧವಾಯಿತು. ಅರಣ್ಯಾಶ್ರಯ ಲೋಕಉಳ್ಳವನು ವಿಷ್ಣುವೇ ಎಂಬುದು 'ಅರಶ್ಚ ಹ ವೈ ಣ್ಯಶ್ಚ ಸುಧಾ ಸಮುದ್ರೌ' ಎಂಬ ಭಾಷ್ಯೋಕ್ತ ಶ್ರುತಿಯಿಂದ ಸಿದ್ಧವಾಗಿದೆ. ಆದ್ದರಿಂದಲೂ ಹೃತ್ಪದ್ಮಸ್ಥನು ವಿಷ್ಣುವೇ ಆಗಿದ್ದಾನೆ.

(೫) ಮತ್ತು ಅಕ್ಷರಾದಿ ಅಧಿಕರಣದಲ್ಲಿ ವಿಷ್ಣು ಧರ್ಮ ಎಂದು ನಿರ್ಣೀತ-ವಾದ ಸರ್ವಾಧಾರತ್ವವು 'ಅಯಮಾತ್ಮಾ ಸಸೇತುಃ' ಎಂಬ ವಾಕ್ಯದಲ್ಲಿ ಹೃತ್ಪದ್ಮಸ್ಥನಲ್ಲಿ ಶ್ರುತವಾಗಿದೆ. ಆದ್ದರಿಂದಲೂ ಹೃತ್ಪದ್ಮಸ್ಥನು ವಿಷ್ಣುವೇ ಆಗಬೇಕು.

(೬) ಹಾಗೆಯೇ ಯ ಏಷಃ ಅಂತರ್ಹೃದಯ ಆಕಾಶಃ ತಸ್ಮಿನ್ ಶೇತೇ ಸರ್ವಸ್ಯ ವಶೀ' ಎಂಬ ಕಾಣ್ವಶ್ರುತಿಯು ಛಾಂದೋಗ್ಯದ ವಿಷಯವನ್ನೇ (ಅಂದರೆ ಹೃತ್ಪದ್ಮಸ್ಥನನ್ನೇ) ಪ್ರಸ್ತಾಪಿಸಿದೆ. ಆ ಶ್ರುತಿಯಾದರೂ 'ಸರ್ವಸ್ಯ ವಶೀ' ಎಂದು ವಿಷ್ಣು ಮಹಿಮೆಯನ್ನು ಹೇಳಿದ್ದರಿಂದ ವಿಷ್ಣುಪರವಾಗಿದೆ. ಅದರ ಸಮಾಖ್ಯಾದಿಂದಾಗಿ ಈ ಶ್ರುತಿಯಲ್ಲಿ (ಛಾಂದೋಗ್ಯದಲ್ಲಿ) ಶ್ರುತನಾದ ಹೃತ್ಪದ್ಮಸ್ಥನು ವಿಷ್ಣುವೇ.

(೭) ಹಾಗೆಯೇ 'ದಹ್ರಂ ವಿಪಾಪಂ ಪರವೇಶ್ಮ ಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ, ತತ್ರಾಪಿ ದಹ್ರಂ ಗಗನಂ ವಿಶೋಕಃ ತಸ್ಮಿನ್ ಯದಂತಃ ತದುಪಾಸಿತವ್ಯಂ' ಎಂಬ ತೈತ್ತಿರೀಯ ಶ್ರುತಿಯೂ ಕೂಡ 'ಹೃತ್ಪದ್ಮಸ್ಥನನ್ನೇ ಪ್ರಸ್ತಾಪಿಸಿದೆ. ಅದು ವಿಷ್ಣು ಪರವೆಂಬುದು ಪ್ರಸಿದ್ಧವೇ ಆಗಿದೆ. ಅದರ ಸಮಾಖ್ಯಾದಿಂದಲೂ ಹೃತ್ಪದ್ಮಸ್ಥನು ವಿಷ್ಣುವೇ.

'ಏಷ ಆತ್ಮಾ ಎಂದು ಜೀವನನ್ನು ಪರಾಮರ್ಶ ಮಾಡಿದ್ದರಿಂದ ಹೃತ್ಪದ್ಮಸ್ಥನು ಜೀವನು' ಎಂಬ ಪರಪಕ್ಷದಲ್ಲಿ ಬಾಧಕವಿದೆ - 'ಅಶನಾಯಾದಿಕಾನನ್ಯೇ ತತ್ಪ್ರಸಾದಾತ್ ತರಂತಿ ಹಿ' ಎಂಬ ಪ್ರಮಾಣನುಸಾರವಾಗಿ ಜೀವರಲ್ಲಿ ಹರಿ-ಪ್ರಸಾದದಿಂದ ಅಪಹತ ಪಾಪ್ಮತ್ವಾದಿಗಳು ಬರಬಹುದೇ ಹೊರತು ಸ್ವತಂತ್ರವಾಗಿ ಆ ಧರ್ಮಗಳಿಲ್ಲ.

'ಸತತ್ರ ಪರ್ಯೇತಿ' ಎಂಬ ಶ್ರುತಿಯು ಜೀವನಿಗೆ ಸತ್ಯಕಾಮತ್ವವನ್ನು ಹೇಳಿದೆ. ಇದರಿಂದ ಅರ್ಥಾತ್ ಅಪಹತ ಪಾಪ್ಮತ್ವಾದಿಗಳು ಸಿದ್ಧವಾಗುತ್ತವೆ ಎಂಬ ಶಂಕೆಯೂ ಸರಿಯಲ್ಲ. ಏಕೆಂದರೆ ಸತ್ಯಕಾಮತ್ವವನ್ನು ಹೇಳಿದ್ದು ಮುಕ್ತನಿಗೆ. ಅವನಿಗೆ ಮುಕ್ತಿದಶಾದಲ್ಲಿ ಹೃತ್ಪದ್ಮಸ್ಥತ್ವವಿರುವುದಿಲ್ಲ. ಸಂಸಾರ ದಶಾದಲ್ಲಿ ಸತ್ಯಕಾಮತ್ವವಿರುವುದಿಲ್ಲ. ಮತ್ತು 'ಏಷ ಆತ್ಮಾ' ಎಂಬಲ್ಲಿ 'ಏಷಃ' ಎಂದು ಪರಾಮರ್ಶ ಮಾಡಿದ್ದು ಜೀವ ನನ್ನಲ್ಲ ಪೂರ್ವದಲ್ಲಿ 'ಪರಂಜ್ಯೋತಿಃ' ಎಂದು ಪ್ರಸ್ತುತನಾದ ಬ್ರಹ್ಮನನ್ನೇ ಪರಾಮರ್ಶಿಸಲಾಗಿದೆ. ಪರಂಜ್ಯೋತಿಯು ಬ್ರಹ್ಮನೆಂಬುದು 'ಆತ್ಮಾ ಪ್ರಕರಣಾತ್' ಎಂಬಲ್ಲಿ ನಿರ್ಣಯಿಸಲಾಗುವುದು. ಪರಂಜ್ಯೋತಿಃ ಎಂಬ ಶಬ್ದವು ನಪುಂಸಕಲಿಂಗದ್ದಾದರೂ ಏಷಃ ಎಂದು ಪುಲ್ಲಿಂಗ ಶಬ್ದದಿಂದ ಪರಾಮರ್ಶ ಮಾಡಿರುವುದು ಆತ್ಮಾ ಎಂಬ ವಿಧೇಯ ವಾಚಕ ಪುಲ್ಲಿಂಗ ಶಬ್ದಕ್ಕನುಗುಣವಾಗಿ ಎಂದು ಭಾವಿಸಬೇಕು. ವ್ಯಾಪ್ತನಾದ ವಿಷ್ಣುವಿಗೆ ಅಲ್ಪಾಕಾಶಸ್ಥತ್ವ (ಹೃತ್ಪದ್ಮಗತಾಲ್ಪಾಕಾಶಸ್ಥತ್ವ) ಹೇಗೆ ಎಂಬ ಶಂಕೆಯನ್ನು 'ಅಚಿಂತ್ಯ ಶಕ್ತಿಯಿಂದ ಅಲ್ಪಸ್ಥಾನಸ್ಥಿತನಾಗಿದ್ದಾನೆ ಎಂದು ಸರ್ವತ್ರ ಎಂಬ ಅಧಿ ಕರಣದಲ್ಲಿ ಪರಿಹರಿಸಲಾಗಿದೆ.

ಶರೀರವನ್ನು ಬ್ರಹ್ಮಪುರ ಎಂದು ಹೃತ್ಕಮಲವನ್ನು ಬ್ರಹ್ಮ ವೇಶ್ಮ (ಮನೆ) ಎಂದು ಹೇಳಿದ್ದರಿಂದಲೇ ಹೃತ್ಕಮಲದಲ್ಲಿ ಆಕಾಶದಲ್ಲಿರುವವನು (ಪರಂ-ಪರಯಾ ಹೃತ್ಪದ್ಮಸ್ಥನಾದವನು) ಬ್ರಹ್ಮ ಎಂದು ಸಿದ್ಧವಾಗುವುದರಿಂದ 'ಅಲ್ಲಿ ಏನಿದೆ' ಎಂಬ ಪ್ರಶ್ನೆ ಯದ್ಯಪಿ ಅಸಂಗತ. ಆದರೂ ಆ ಪ್ರಶ್ನೆಗೆ 'ಅಲ್ಲಿರುವವನು ಎಂಥವನು' ಎಂದು ಅಭಿಪ್ರಾಯ. ಅದಕ್ಕೆ ಉತ್ತರ-ಹೃತ್ಪದ್ಮಸ್ಥ ದಹರಾಕಾಶ-ದಲ್ಲಿರುವ ಬ್ರಹ್ಮನು ವ್ಯಾಪ್ತನಾಗೇ ಇದ್ದಾನೆ. ಅವನಲ್ಲಿ ದ್ಯಾವಾಪೃಥಿವ್ಯಾದಿ-ಗಳೆಲ್ಲವೂ ಇದ್ದಾವೆ. ಅವನು ಸರ್ವಾಶ್ರಯ ಎಂದು ಯಾವಾನ್ ಇತ್ಯಾದಿ ವಾಕ್ಯಾನ್ವಯವನ್ನು ಕೂಡಿಸಬಹುದು. ಪರಪಕ್ಷದಲ್ಲಿಯೇ ಅನುಪಪತ್ತಿ ಇದೆ.

ಏಕೆಂದರೆ ಆಕಾಶದಲ್ಲಿ ಏನಿದೆ ಎಂದು ಅರ್ಥೈಸಿದಾಗ ಆ ಪ್ರಶ್ನೆಗೆ ಈ ಆಕಾಶವು ಬಾಹ್ಯಾಕಾಶತುಲ್ಯವಾಗಿದೆ ಎಂಬ ಉತ್ತರ ಅಸಂಗತವಾಗುತ್ತದೆ.

ಸಿದ್ಧಾಂತಿಗಳ ಪಕ್ಷಕ್ಕೆ ಸುಷಿರಾಕಾಶದಲ್ಲಿ ಸರ್ವಾಧಾರತ್ವ ಹೇಳಿದ್ದು ಬಾಧಕವಾಗುತ್ತದೆ ಎಂಬ ಪ್ರಶ್ನೆಗೆ ಉತ್ತರ ಹೀಗಿದೆ - ಮಂದಿರದಲ್ಲಿ ಪೆಟ್ಟಿಗೆಯಲ್ಲಿ ಮಣಿಮಾಲೆಯಿದ್ದರೂ ಮಂದಿರೇ ಮಣಿಮಾಲಾ ಎಂದು ವ್ಯವಹಾರವಿದೆ ಅವರಂತೆ ಸುಷಿರಾಕಾಶದಲ್ಲಿರುವ ಬ್ರಹ್ಮನಲ್ಲಿ ಸರ್ವವೂ ಇರುವುದರಿಂದ ಸುಷಿರಾಕಾಶಕ್ಕೆ ಸರ್ವಾಧಾರತ್ವ ಹೇಳಿದ್ದು ಬಾಧಕ-ವಾಗುವುದಿಲ್ಲ.

ಚಂದ್ರಾದ್ಯಾಧಾರದ್ವಾರಾ ಅಕ್ಷರಾಧಿಕರಣದ ಆಕ್ಷೇಪ ಹಾಗೂ ಸಮಾಧಾನಗಳು ಫಲ. (ಚಂದ್ರಾದ್ಯಾಧಾರತ್ವ ಇಲ್ಲಿ ಆಕಾಶಕ್ಕೆ ಎಂದಾದರೆ ಚಂದ್ರಾದ್ಯಾಧಾರ ಎಂದು ಹೇಳಲ್ಪಟ್ಟ ಅಕ್ಷರನೂ ಈಶನಿಗಿಂತ ಭಿನ್ನ ಎಂದು ಆಕ್ಷೇಪ. ಅದರ ಸಮಾಧಾನವೇ ಫಲ).

## ॥ ಓಂ ಅನುಕೃತೇಸ್ತಸ್ಯ ಚ ಓಂ ॥ ೧-೩-೬

ಹಿಂದಿನ ಅಧಿಕರಣದಲ್ಲಿ, ''ಏಷ ಆತ್ಮಾ . . . .' ಎಂಬ ವಾಕ್ಯದಲ್ಲಿರುವ ಏತದ್ ಶಬ್ದವು ಜ್ಯೋತಿಃಶಬ್ದವಾಚ್ಯನಾದ ಬ್ರಹ್ಮನನ್ನು ಪರಾಮರ್ಶಿಸುತ್ತಿದೆ ಎಂದು ಹೇಳಲಾಗಿದೆ. ಶ್ರುತಿಯಲ್ಲಿ 'ಏಷಃ' ಎಂದು ಪುಲ್ಲಿಂಗವಿದೆ. 'ಜ್ಯೋತಿಃ' ಶಬ್ದವು ನಪುಂಸಕಲಿಂಗ. ಹಾಗಾಗಿ ಪರಾಮರ್ಶ ಹೇಗೆ ಕೂಡುತ್ತದೆ ಎಂದರೆ, ಈ ವಾಕ್ಯದಲ್ಲಿ ವಿಧೇಯವಾದದ್ದು 'ಆತ್ಮಾ'. ಆತ್ಮ ಶಬ್ದವು ಪುಲ್ಲಿಂಗವಾದ್ದರಿಂದ ವಿಧೇಯಾನುಸಾರವಾಗಿ 'ಏಷಃ' ಎಂದು ಪುಲ್ಲಿಂಗ ಬಂದಿದೆ ಎಂದು ಉತ್ತರ ಕೊಡಲಾಗಿದೆ. ಈ ಉತ್ತರ ಸರಿಯಾಗಬಹುದು ಆದರೆ ಈ ಅಧಿಕರಣದ ವಿಷಯವಾಕ್ಯದಲ್ಲಿರುವ 'ತದೇತತ್' ಎಂಬ ಎರಡು ಶಬ್ದಗಳು ಹಿಂದೆ ಹೇಳಿದ ಈಶ್ವರನನ್ನು ಪರಾಮರ್ಶಿಸುತ್ತಿವೆ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಇಲ್ಲಿ 'ತತ್' 'ಏತತ್' ಎಂದು ಎರಡೂ ಶಬ್ದಗಳು ನಪುಂಸಕಲಿಂಗದಲ್ಲಿವೆ. ಇವುಗಳಲ್ಲಿ ಒಂದನ್ನು ವಿಧೇಯಾಪೇಕ್ಷೆಯಿಂದ ನಪುಂಸಕಲಿಂಗ ಎಂದು ಹೇಳಿದರೂ (ವಿಧೇಯ-ಸುಖ) ಉದ್ದೇಶ್ಯಸಮರ್ಪಕವಾದ ಇನ್ನೊಂದು

'ಏಷ ಆತ್ಮಾ ಎಂದು ಜೀವನನ್ನು ಪರಾಮರ್ಶ ಮಾಡಿದ್ದರಿಂದ ಹೃತ್ಪದ್ಮಸ್ಥನು ಜೀವನು' ಎಂಬ ಪರಪಕ್ಷದಲ್ಲಿ ಬಾಧಕವಿದೆ - 'ಅಶನಾಯಾದಿಕಾನನ್ಯೇ ತತ್ಪ್ರಸಾದಾತ್ ತರಂತಿ ಹಿ' ಎಂಬ ಪ್ರಮಾಣನುಸಾರವಾಗಿ ಜೀವರಲ್ಲಿ ಹರಿ-ಪ್ರಸಾದದಿಂದ ಅಪಹತ ಪಾಪ್ಮತ್ವಾದಿಗಳು ಬರಬಹುದೇ ಹೊರತು ಸ್ವತಂತ್ರವಾಗಿ ಆ ಧರ್ಮಗಳಿಲ್ಲ.

'ಸತತ್ರ ಪರ್ಯೇತಿ' ಎಂಬ ಶ್ರುತಿಯು ಜೀವನಿಗೆ ಸತ್ಯಕಾಮತ್ವವನ್ನು ಹೇಳಿದೆ. ಇದರಿಂದ ಅರ್ಥಾತ್ ಅಪಹತ ಪಾಪ್ಮತ್ವಾದಿಗಳು ಸಿದ್ಧವಾಗುತ್ತವೆ ಎಂಬ ಶಂಕೆಯೂ ಸರಿಯಲ್ಲ. ಏಕೆಂದರೆ ಸತ್ಯಕಾಮತ್ವವನ್ನು ಹೇಳಿದ್ದು ಮುಕ್ತನಿಗೆ. ಅವನಿಗೆ ಮುಕ್ತಿದಶಾದಲ್ಲಿ ಹೃತ್ಪದ್ಮಸ್ಥತ್ವವಿರುವುದಿಲ್ಲ. ಸಂಸಾರ ದಶಾದಲ್ಲಿ ಸತ್ಯಕಾಮತ್ವವಿರುವುದಿಲ್ಲ. ಮತ್ತು 'ಏಷ ಆತ್ಮಾ' ಎಂಬಲ್ಲಿ 'ಏಷಃ' ಎಂದು ಪರಾಮರ್ಶ ಮಾಡಿದ್ದು ಜೀವ ನನ್ನಲ್ಲ ಪೂರ್ವದಲ್ಲಿ 'ಪರಂಜ್ಯೋತಿಃ' ಎಂದು ಪ್ರಸ್ತುತನಾದ ಬ್ರಹ್ಮನನ್ನೇ ಪರಾಮರ್ಶಿಸಲಾಗಿದೆ. ಪರಂಜ್ಯೋತಿಯು ಬ್ರಹ್ಮನೆಂಬುದು 'ಆತ್ಮಾ ಪ್ರಕರಣಾತ್' ಎಂಬಲ್ಲಿ ನಿರ್ಣಯಿಸಲಾಗುವುದು. ಪರಂಜ್ಯೋತಿಃ ಎಂಬ ಶಬ್ದವು ನಪುಂಸಕಲಿಂಗದ್ದಾದರೂ ಏಷಃ ಎಂದು ಪುಲ್ಲಿಂಗ ಶಬ್ದದಿಂದ ಪರಾಮರ್ಶ ಮಾಡಿರುವುದು ಆತ್ಮಾ ಎಂಬ ವಿಧೇಯ ವಾಚಕ ಪುಲ್ಲಿಂಗ ಶಬ್ದಕ್ಕನುಗುಣವಾಗಿ ಎಂದು ಭಾವಿಸಬೇಕು. ವ್ಯಾಪ್ತನಾದ ವಿಷ್ಣುವಿಗೆ ಅಲ್ಪಾಕಾಶಸ್ಥತ್ವ (ಹೃತ್ಪದ್ಮಗತಾಲ್ಪಾಕಾಶಸ್ಥತ್ವ) ಹೇಗೆ ಎಂಬ ಶಂಕೆಯನ್ನು 'ಅಚಿಂತ್ಯ ಶಕ್ತಿಯಿಂದ ಅಲ್ಪಸ್ಥಾನಸ್ಥಿತನಾಗಿದ್ದಾನೆ ಎಂದು ಸರ್ವತ್ರ ಎಂಬ ಅಧಿ ಕರಣದಲ್ಲಿ ಪರಿಹರಿಸಲಾಗಿದೆ.

ಶರೀರವನ್ನು ಬ್ರಹ್ಮಪುರ ಎಂದು ಹೃತ್ಕಮಲವನ್ನು ಬ್ರಹ್ಮ ವೇಶ್ಮ (ಮನೆ) ಎಂದು ಹೇಳಿದ್ದರಿಂದಲೇ ಹೃತ್ಕಮಲದಲ್ಲಿ ಆಕಾಶದಲ್ಲಿರುವವನು (ಪರಂ-ಪರಯಾ ಹೃತ್ಪದ್ಮಸ್ಥನಾದವನು) ಬ್ರಹ್ಮ ಎಂದು ಸಿದ್ಧವಾಗುವುದರಿಂದ 'ಅಲ್ಲಿ ಏನಿದೆ' ಎಂಬ ಪ್ರಶ್ನೆ ಯದ್ಯಪಿ ಅಸಂಗತ. ಆದರೂ ಆ ಪ್ರಶ್ನೆಗೆ 'ಅಲ್ಲಿರುವವನು ಎಂಥವನು' ಎಂದು ಅಭಿಪ್ರಾಯ. ಅದಕ್ಕೆ ಉತ್ತರ-ಹೃತ್ಪದ್ಮಸ್ಥ ದಹರಾಕಾಶ-ದಲ್ಲಿರುವ ಬ್ರಹ್ಮನು ವ್ಯಾಪ್ತನಾಗೇ ಇದ್ದಾನೆ. ಅವನಲ್ಲಿ ದ್ಯಾವಾಪೃಥಿವ್ಯಾದಿ-ಗಳೆಲ್ಲವೂ ಇದ್ದಾವೆ. ಅವನು ಸರ್ವಾಶ್ರಯ ಎಂದು ಯಾವಾನ್ ಇತ್ಯಾದಿ ವಾಕ್ಯಾನ್ವಯವನ್ನು ಕೂಡಿಸಬಹುದು. ಪರಪಕ್ಷದಲ್ಲಿಯೇ ಅನುಪಪತ್ತಿ ಇದೆ.

ಏಕೆಂದರೆ ಆಕಾಶದಲ್ಲಿ ಏನಿದೆ ಎಂದು ಅರ್ಥೈಸಿದಾಗ ಆ ಪ್ರಶ್ನೆಗೆ ಈ ಆಕಾಶವು ಬಾಹ್ಯಾಕಾಶತುಲ್ಯವಾಗಿದೆ ಎಂಬ ಉತ್ತರ ಅಸಂಗತವಾಗುತ್ತದೆ.

ಸಿದ್ಧಾಂತಿಗಳ ಪಕ್ಷಕ್ಕೆ ಸುಷಿರಾಕಾಶದಲ್ಲಿ ಸರ್ವಾಧಾರತ್ವ ಹೇಳಿದ್ದು ಬಾಧಕವಾಗುತ್ತದೆ ಎಂಬ ಪ್ರಶ್ನೆಗೆ ಉತ್ತರ ಹೀಗಿದೆ - ಮಂದಿರದಲ್ಲಿ ಪೆಟ್ಟಿಗೆಯಲ್ಲಿ ಮಣಿಮಾಲೆಯಿದ್ದರೂ ಮಂದಿರೇ ಮಣಿಮಾಲಾ ಎಂದು ವ್ಯವಹಾರವಿದೆ ಅವರಂತೆ ಸುಷಿರಾಕಾಶದಲ್ಲಿರುವ ಬ್ರಹ್ಮನಲ್ಲಿ ಸರ್ವವೂ ಇರುವುದರಿಂದ ಸುಷಿರಾಕಾಶಕ್ಕೆ ಸರ್ವಾಧಾರತ್ವ ಹೇಳಿದ್ದು ಬಾಧಕ-ವಾಗುವುದಿಲ್ಲ.

ಚಂದ್ರಾದ್ಯಾಧಾರದ್ವಾರಾ ಅಕ್ಷರಾಧಿಕರಣದ ಆಕ್ಷೇಪ ಹಾಗೂ ಸಮಾಧಾನಗಳು ಫಲ. (ಚಂದ್ರಾದ್ಯಾಧಾರತ್ವ ಇಲ್ಲಿ ಆಕಾಶಕ್ಕೆ ಎಂದಾದರೆ ಚಂದ್ರಾದ್ಯಾಧಾರ ಎಂದು ಹೇಳಲ್ಪಟ್ಟ ಅಕ್ಷರನೂ ಈಶನಿಗಿಂತ ಭಿನ್ನ ಎಂದು ಆಕ್ಷೇಪ. ಅದರ ಸಮಾಧಾನವೇ ಫಲ).

## II ಓಂ ಅನುಕೃತೇಸ್ತಸ್ಯ ಚ ಓಂ II ೧-೩-೬

ಹಿಂದಿನ ಅಧಿಕರಣದಲ್ಲಿ, ''ಏಷ ಆತ್ಮಾ . . . .' ಎಂಬ ವಾಕ್ಯದಲ್ಲಿರುವ ಏತದ್ ಶಬ್ದವು ಜ್ಯೋತಿಃಶಬ್ದವಾಚ್ಯನಾದ ಬ್ರಹ್ಮನನ್ನು ಪರಾಮರ್ಶಿಸುತ್ತಿದೆ ಎಂದು ಹೇಳಲಾಗಿದೆ. ಶ್ರುತಿಯಲ್ಲಿ 'ಏಷಃ' ಎಂದು ಪುಲ್ಲಿಂಗವಿದೆ. 'ಜ್ಯೋತಿಃ' ಶಬ್ದವು ನಪುಂಸಕಲಿಂಗ. ಹಾಗಾಗಿ ಪರಾಮರ್ಶ ಹೇಗೆ ಕೂಡುತ್ತದೆ ಎಂದರೆ, ಈ ವಾಕ್ಯದಲ್ಲಿ ವಿಧೇಯವಾದದ್ದು 'ಆತ್ಮಾ'. ಆತ್ಮ ಶಬ್ದವು ಪುಲ್ಲಿಂಗವಾದ್ದರಿಂದ ವಿಧೇಯಾನುಸಾರವಾಗಿ 'ಏಷಃ' ಎಂದು ಪುಲ್ಲಿಂಗ ಬಂದಿದೆ ಎಂದು ಉತ್ತರ ಕೊಡಲಾಗಿದೆ. ಈ ಉತ್ತರ ಸರಿಯಾಗಬಹುದು ಆದರೆ ಈ ಅಧಿಕರಣದ ವಿಷಯವಾಕ್ಯದಲ್ಲಿರುವ 'ತದೇತತ್' ಎಂಬ ಎರಡು ಶಬ್ದಗಳು ಹಿಂದೆ ಹೇಳಿದ ಈಶ್ವರನನ್ನು ಪರಾಮರ್ಶಿಸುತ್ತಿವೆ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಇಲ್ಲಿ 'ತತ್' 'ಏತತ್' ಎಂದು ಎರಡೂ ಶಬ್ದಗಳು ನಪುಂಸಕಲಿಂಗದಲ್ಲಿವೆ. ಇವುಗಳಲ್ಲಿ ಒಂದನ್ನು ವಿಧೇಯಾಪೇಕ್ಷೆಯಿಂದ ನಪುಂಸಕಲಿಂಗ ಎಂದು ಹೇಳಿದರೂ (ವಿಧೇಯ-ಸುಖ) ಉದ್ದೇಶ್ಯಸಮರ್ಪಕವಾದ ಇನ್ನೊಂದು

ಶಬ್ದವೂ ನಪುಂಸಕಲಿಂಗದಲ್ಲೇ ಇದೆ. ಅದರಿಂದ ಹಿಂದೆ ಪುಲ್ಲಿಂಗದಿಂದ ಪ್ರಕೃತನಾದ ಈಶ್ವರನನ್ನು ಪರಾಮರ್ಶಿಸಲು ಸಾಧ್ಯವಿಲ್ಲ. ಹೀಗೆ ಹಿಂದಿನ ಅಧಿಕರಣದ ನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ ಎಂದು ಶಂಕಾ ಮಾಡುತ್ತಿರು-ವುದರಿಂದ ಈ ಅಧಿಕರಣದಲ್ಲಿ ಪ್ರತ್ಯುದಾಹರಣ ಎಂಬ ಸಂಗತಿಯಿದೆ.

ಕಾಠಕದಲ್ಲಿ ''ತದೇತದಿತಿ ಮನ್ಯಂತೇ ಅನಿರ್ದೇಶ್ಯಂ ಪರಮಂ ಸುಖಂ. ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ.'' ಎಂಬ ವಾಕ್ಯವಿದೆ. ಈ ವಾಕ್ಯದಲ್ಲಿ 'ಆನುಕೂಲ್ಯೇನ ಗೃಹ್ಯಮಾಣತ್ವ ' ಎಂಬ ಲಿಂಗ ಶ್ರುತವಾಗಿದೆ. 'ಆನುಕೂಲ್ಯೇನ ಗೃಹ್ಯಮಾಣತ್ವ ' ಎಂದರೆ 'ಜ್ಞಾನಾರ್ಥಂ ಪ್ರಾರ್ಥಿತತ್ವ'. (ಜ್ಞಾನಕ್ಕೋಸ್ಕರ ಪ್ರಾರ್ಥಿತವಾದದ್ದು). ಈ ಆನುಕೂಲ್ಯೇನ ಗೃಹ್ಯಮಾಣತ್ವ ಎಂಬುದು ಜ್ಞಾನಿಸುಖಕ್ಕೆ ಸಂಬಂಧಿಸಿದ್ದೋ ವಿಷ್ಣುವಿಗೋ ಎಂಬುದೇ ಸಂದೇಹ. ಆನುಕೂಲ್ಯೇನ ಗೃಹ್ಯಮಾಣವಾದದ್ದು ಜ್ಞಾನಿಸುಖವೇ ಎಂದು ಪೂರ್ವಪಕ್ಷ. ಏಕೆಂದರೆ,

'ತದ್ವಿಜಾನೀಯಾಂ' ಎಂಬಲ್ಲಿರುವ 'ತತ್' ಶಬ್ದವು ಪೂರ್ವಾರ್ಧದಲ್ಲಿ ಉಕ್ತವಾದ ಸುಖವನ್ನು ಪರಾಮರ್ಶಿಸುತ್ತಿದೆ.

**ಪ್ರಶ್ನೆ** :- ಪೂರ್ವಾರ್ಧದಲ್ಲಿ ಉಕ್ತವಾದ ಸುಖವು ಜ್ಞಾನಿಸುಖವೇ ಏಕೆ ಆಗಬೇಕು? ಸುಖಶಬ್ದವು ವಿಷ್ಣುವಿನಲ್ಲೂ ಸಾವಕಾಶವಾಗಿದೆ.

**ಸಮಾಧಾನ** :- ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಸುಖವು ಜ್ಞಾನಿಸುಖವೇ. ಹೇಗೆಂದರೆ, ''ತಮಾತ್ಮಸ್ಥಂ ಯೇನುಪಶ್ಯಂತಿ ಧೀರಾಃ ತೇಷಾಂ ಸುಖಂ ಶಾಶ್ವತಂ ನೇತರೇಷಾಂ'' ಎಂದು ಹಿಂದೆ ಜ್ಞಾನಿ ಸುಖವು ಪ್ರಕೃತವಾಗಿದೆ. ಸನ್ನಿಹಿತವಾದ ಅದೇ ಜ್ಞಾನಿಸುಖವನ್ನು ಪೂರ್ವಾರ್ಧದಲ್ಲಿರುವ 'ತದೇತತ್' ಶಬ್ದಗಳು ಪರಾಮರ್ಶಿಸುತ್ತಿವೆ. ಹಾಗಾಗಿ ಅಲ್ಲೇ ಪೂರ್ವಾರ್ಧದಲ್ಲಿರುವ ಸುಖವೂ ಜ್ಞಾನಿಸುಖವೇ ಆಗಬೇಕು.

'ತದೇತತ್' ಎಂಬುದು ಹಿಂದೆ ಪ್ರಕೃತವಾದ ಜ್ಞಾಸುಖದ್ದೇ ಪ್ರತ್ಯಭಿಜ್ಞಾ ಎಂಬುದಕ್ಕೆ ಇಲ್ಲಿರುವ ಸುಖಶಬ್ದವೇ ಜ್ಞಾಪಕವಾಗಿದೆ.

**ಪ್ರಶ್ನೆ** :- ಹಿಂದೆ 'ಏಕೋ ವಶೀ' ಎಂಬುದಾಗಿ ಈಶ್ವರನೂ ಪ್ರಕೃತನಾಗಿದ್ದಾನೆ. ಅವನನ್ನೇ ಏಕೆ 'ತದೇತತ್' ಎಂಬುದರಿಂದ ಇಟ್ಟುಕೊಳ್ಳಬಾರದು?

**ಸಮಾಧಾನ** :- 'ಏಕೋ ವಶೀ' ಎಂಬ ವಾಕ್ಯವು ದೂರದಲ್ಲಿದೆ. ಸನ್ನಿಹಿತವಾದದ್ದು ''ತಮಾಸ್ಮಸ್ಥಂ . . . '' ಎಂಬ ಜ್ಞಾನಿಸುಖವನ್ನು ಹೇಳುವ ವಾಕ್ಯವೇ. ಸನ್ನಿಹಿತವಾದದ್ದನ್ನು ಬಿಟ್ಟು ದೂರದಲ್ಲಿರುವುದನ್ನು ಪರಾಮರ್ಶಿಸುವುದು ಸರಿಯಲ್ಲ. ಜೊತೆಗೆ ಈಶ್ವರನು ಪುಲ್ಲಿಂಗಶಬ್ದಗಳಿಂದ ಪ್ರಕೃತನಾಗಿದ್ದಾನೆ ಇಲ್ಲಿರುವ ಎರಡೂ ಶಬ್ದಗಳು ನಪುಂಸಕಲಿಂಗದಲ್ಲಿವೆ. ಆದ್ದರಿಂದಲೂ ಇದು ಈಶ್ವರನ ಪರಾಮರ್ಶವಲ್ಲ.

**ಸಿದ್ಧಾಂತ** :- ಆನುಕೂಲ್ಯೇನ ಗೃಹ್ಯಮಾಣನಾದವನು ವಿಷ್ಣುವೇ ಜ್ಞಾನಿ ಸುಖವಲ್ಲ. ಏಕೆಂದರೆ,

೧) ಈ ಪ್ರಕರಣದಲ್ಲಿ ''ನ ತತ್ರ ಸೂರ್ಯೋ ಭಾತಿ'' ಎಂಬುದಾಗಿ ಸೂರ್ಯಾದ್ಯಪ್ರಕಾಶ್ಯತ್ವ (ಸೂರ್ಯಾದಿಗಳು ಅವನನ್ನು ತಿಳಿಸಲಾರರು) ಎಂಬ ಲಿಂಗವು ಉಕ್ತವಾಗಿದೆ. ಈ ಲಿಂಗವು ''ನ ತದ್ಭಾಸಯತೇ ಸೂರ್ಯಃ'' ಎಂಬ ಗೀತಾವಚನದಿಂದ ವಿಷ್ಣ್ವೇಕ ನಿಷ್ಠವಾಗಿದೆ. ಹಾಗೇ ''ತಮೇವ ಭಾಂತಂ ಅನುಭಾತಿ ಸರ್ವಂ'' ಎಂಬುದಾಗಿ ಸೂರ್ಯಾದಿಪ್ರಕಾಶನ ಹೇತುತ್ವ (ಸೂರ್ಯಾದಿಗಳ ಪ್ರಕಾಶವು ಇವನ ಅಧೀನ) ಎಂಬ ಲಿಂಗ ಶ್ರುತವಾಗಿದೆ. ಇದೂ ಕೂಡ ''ಅಹಂ ತತ್ತೇಜೋ ರಶ್ಮೀತ್'' ಎಂಬ ಚತುರ್ವೇದಶಿಖಾ ವಚನದಿಂದ ಈಶೈಕನಿಷ್ಠವಾಗಿದೆ. ಅದೇ ರೀತಿ ''ತಸ್ಯ ಭಾಸಾ ಸರ್ವಮಿದಂ ವಿಭಾತಿ'' ಎಂಬಲ್ಲಿ ಸರ್ವಜಗತ್ಪ್ರಕಾಶಕತ್ವ ಎಂಬ ಲಿಂಗ ಶ್ರುತವಾಗಿದೆ. ಇದೂ ಕೂಡ ''ಯದಾದಿತ್ಯಗತಂ ತೇಜಃ'' ಎಂಬ ಗೀತಾವಾಕ್ಯದಿಂದ ಈಶೈಕನಿಷ್ಠವೆಂದು ಸಿದ್ಧವಾಗಿದೆ. ಹೀಗೆ ಅನೇಕ ವಿಷ್ಣುಲಿಂಗಗಳಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣನಾದವನು ವಿಷ್ಣುವೇ.

**ಪ್ರಶ್ನೆ** :- ಈ ಎಲ್ಲಾ ವಿಷ್ಣು ಲಿಂಗಗಳಿದ್ದರೂ ಆನುಕೂಲ್ಯೇನ ಗೃಹ್ಯಮಾಣ ವಿಷ್ಣು ಎಂದು ಹೇಗೆ ತಿಳಿಯುವುದು?

**ಉತ್ತರ :-** ''ನತತ್ರ ಸೂರ್ಯೋ ಭಾತಿ'' ಇತ್ಯಾದಿ ವಿಷ್ಣುಲಿಂಗಗಳನ್ನು ಹೇಳುವ ವಾಕ್ಯಗಳ ಪೂರ್ವದಲ್ಲಿ ಸನ್ನಿಹಿತವಾದ ವಾಕ್ಯ ''ಕಥಂ ನು ತದ್ವಿಜಾನೀಯಾಂ'' ಎಂಬುದು. ಅಲ್ಲಿ 'ತದ್' ಶಬ್ದದಿಂದ ಆನುಕೂಲ್ಯೇನ ಗೃಹ್ಯಮಾಣ ಪ್ರಕೃತನಾಗಿದ್ದಾನೆ. ಸನ್ನಿಹಿತ ಪರಾಮರ್ಶವೇ ಯುಕ್ತವಾದ್ದರಿಂದ, ಸನ್ನಿಹಿತವಾದ 'ತದ್' ಶಬ್ದದಿಂದ ಪ್ರಕೃತನಾದ ಆನುಕೂಲ್ಯೇನ ಗೃಹ್ಯ-ಮಾಣನನ್ನೇ ''ನ ತತ್ರ ಸೂರ್ಯೋ ಭಾತಿ'' ಮೊದಲಾದ ವಾಕ್ಯಗಳಲ್ಲಿರುವ 'ತತ್ರ' ಮೊದಲಾದ ಶಬ್ದದಿಂದ ಪರಾಮರ್ಶಮಾಡಿ ಸೂರ್ಯಾದ್ಯಪ್ರಕಾಶ್ಯತ್ವ ಮುಂತಾದ ವಿಷ್ಣುಲಿಂಗಗಳನ್ನು ಹೇಳುತ್ತಿರುವುದರಿಂದ ಆನುಕೂಲ್ಯೇನ ಗೃಹ್ಯಮಾಣ ವಿಷ್ಣುವೇ ಎಂದು ತೀರ್ಮಾನ ಮಾಡಬಹುದು.

'ತದೇತತ್' ಎಂಬ ಎರಡೂ ಶಬ್ದಗಳಿಂದ ಈಶ್ವರನನ್ನೇ ಪರಾಮರ್ಶೆ ಮಾಡಲಾಗುತ್ತಿದೆ. ನಪುಂಸಕ ಲಿಂಗದ ವಿರೋಧವಿಲ್ಲ. ವಾಕ್ಯಯೋಜನೆಯನ್ನು ಈ ರೀತಿ ಮಾಡಬೇಕು. ''ಯತ್ ಅನಿರ್ದೇಶ್ಯಂ ಪರಮಂ ಸುಖಂ ಕಥಂ ನು ತದ್ವಿಜಾನೀಯಾಂ'' ಇತಿ ಜ್ಞಾನಾರ್ಥಂ ಪ್ರಾರ್ಥಯಂತೇ ಯಾವ ಅನಿರ್ದೇಶ್ಯ ಪರಮಸುಖರೂಪವನ್ನು ಜ್ಞಾನಕ್ಕಾಗಿ ಪ್ರಾರ್ಥಿಸುತ್ತಾರೋ ತತ್ = ಅಂತಹ ಅನಿರ್ದೇಶ್ಯ ಸುಖವು ಏತತ್ = ಪ್ರಸ್ತುತ ಆತ್ಮರೂಪವಾಗಿದೆ ಎಂದು.

('ತದೇತತ್' ಎಂಬ ನಪುಂಸಕಲಿಂಗ ಶಬ್ದಗಳಿಂದ, ಸುಖ ಹಾಗು ಆತ್ಮರೂಪ ಎಂಬ ನಪುಂಸಕಲಿಂಗದಲ್ಲೇ ಇರುವ ಶಬ್ದವಾಚ್ಯಗಳನ್ನು ಗ್ರಹಿಸುತ್ತಿರುವುದರಿಂದ ಲಿಂಗವಿರೋಧವಿಲ್ಲ) ಇನ್ನು 'ಚೇತನಶ್ಚೇತನಾನಾಂ'' ಎಂಬುದಾಗಿ ಈಶ್ವರನೂ ಸನಿಹದಲ್ಲೇ ಪ್ರಕೃತನಾಗಿದ್ದಾನೆ. ಹಾಗಾಗಿ ಸನ್ನಿಹಿತವಾದದ್ದನ್ನು ಬಿಟ್ಟು ದೂರಸ್ಥ ಪರಾಮರ್ಶ ಸರಿಯಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

**ಅಧಿಕರಣ ಫಲ :-** ಇಲ್ಲಿರುವ ಅನಿರ್ದೇಶ್ಯ ಶಬ್ದಕ್ಕೆ ಅದೃಶ್ಯ ಎಂದರ್ಥ. ಈ ಅನಿರ್ದೇಶ್ಯಶಬ್ದೋಕ್ತವಾದ ಅದೃಶ್ಯತ್ವವುಳ್ಳ ಆನುಕೂಲ್ಯೇನ ಗೃಹ್ಯಮಾಣ ವಿಷ್ಣುವಿಗಿಂತ ಬೇರೆ ಎಂದಾದರೆ ಆಗ ಅದೃಶ್ಯತ್ವಾಧಿಕರಣದಲ್ಲಿ ಹೇಳಲ್ಪಟ್ಟ ಅದೃಶ್ಯತ್ವಗುಣವುಳ್ಳ ಅಕ್ಷರವೂ ವಿಷ್ಣುವಲ್ಲ ಎಂದಾಗಬೇಕು. ಹೀಗೆ ಅದೃಶ್ಯ-ತ್ವಾಧಿಕರಣದ ಮೇಲಿನ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿ ಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಶಬ್ದಾದೇವ ಪ್ರಮಿತಃ ಓಂ ॥ ೧-೩-೭

''ವಿಶ್ವೇ ದೇವಾ ಉಪಾಸತೇ'' ಎಂಬಲ್ಲಿ ವಿಷ್ಣುವಿಗಿಂತ ಅನ್ಯನಿಗೇ ಉಪಾಸ್ಯತ್ವ ಹೇಳಲ್ಪಟ್ಟಿದೆ. ಹಾಗಾಗಿ ಅವಶ್ಯವಾಗಿ ಅವನ ಜ್ಞಾನದಿಂದಲೇ ಮೋಕ್ಷವಾಗಬೇಕು. ಆದ್ದರಿಂದ ''ತಮಾತ್ಮಸ್ಥಂ ಯೇಽನು ಪಶ್ಯಂತಿ ಧೀರಾಃ'' ಎಂಬಲ್ಲಿ ವಿಷ್ಣುವಿನ ಜ್ಞಾನದಿಂದ ಮೋಕ್ಷ ಎಂದು ಹೇಳಿದ್ದು ಸರಿಯಲ್ಲ. ಎಂದು ಆಕ್ಷೇಪ ಮಾಡುತ್ತಿರುವುದರಿಂದ ಈ ಅಧಿಕರಣದಲ್ಲಿ ಆಕ್ಷೇಪಿಕೀ ಎಂಬ ಸಂಗತಿಯಿದೆ.

ಕಾಠಕದಲ್ಲಿ ''ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ಈಶಾನೋ ಭೂತಭವ್ಯಸ್ಯ'' ಎಂಬ ವಾಕ್ಯವಿದೆ. ಇಲ್ಲಿ ಶ್ರುತನಾದ ಈಶಾನನು ಮುಖ್ಯವಾಯುವೋ ಅಥವಾ ವಿಷ್ಣುವೋ ಎಂಬುದೇ ಸಂದೇಹ. ಮುಖ್ಯ-ವಾಯು ಎಂಬುದು ಪೂರ್ವಪಕ್ಷ. ಏಕೆಂದರೆ,

೧) ''ಊರ್ಧ್ವಂ ಪ್ರಾಣಮುನ್ನಯತಿ ಅಪಾನಂ ಪ್ರತ್ಯಗಸ್ಯತಿ ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ'' ಎಂಬ ಇದೇ ಪ್ರಕರಣ-ದಲ್ಲಿರುವ ವಾಕ್ಯದಲ್ಲಿ ಪ್ರಾಣಾದಿವ್ಯವಸ್ಥಾಪಕತ್ವ, ಮಧ್ಯಮತ್ವ, ಹಾಗು ಸರ್ವದೇವೋಪಾಸ್ಯತ್ವ ಎಂಬ ಲಿಂಗಗಳು ಶ್ರುತವಾಗಿವೆ. ಇವುಗಳಲ್ಲಿ ಮೊದಲನೆಯದಾದ 'ಪ್ರಾಣಾದಿವ್ಯವಸ್ಥಾಪಕತ್ವ' ಎಂಬ ಲಿಂಗವು ಮುಖ್ಯ-ವಾಯುವಿನ ಧರ್ಮ ಎಂದು ''ಏವಮೇವ ಏಷ ಪ್ರಾಣಃ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ'' ಎಂಬ ಷಟ್‌ಪ್ರಶ್ನದ ವಾಕ್ಯದಿಂದ ಸಿದ್ಧವಾಗಿದೆ. ಹಾಗೇ ಎರಡನೆಯದಾದ 'ಮಧ್ಯಮತ್ವ' ಎಂಬುದೂ ''ಅಥೇ-ಮಮೇವ ನಾಪ್ನೋದ್ಯೋಽಯಂ ಮಧ್ಯಮಃ ಪ್ರಾಣಃ'' ಎಂಬ ಬೃಹದಾರಣ್ಯಕದ ಮೂರನೇ ಅಧ್ಯಾಯದ ವಾಕ್ಯದಿಂದಲೂ ಹಾಗೇ ಅದೇ ಬೃಹದಾರಣ್ಯಕದ ನಾಲ್ಕನೇ ಅಧ್ಯಾಯದಲ್ಲಿರುವ ''ಅಯಂ ವಾವ ಶಿಶುಃ ಯೋಽಯಂ ಮಧ್ಯಮಃ ಪ್ರಾಣಃ'' ಎಂಬ ವಾಕ್ಯದಿಂದಲೂ ಪ್ರಾಣನ ಧರ್ಮ ಎಂದು ಸಿದ್ಧವಾಗಿದೆ. ಇನ್ನು ಮೂರನೆಯದಾದ 'ಸರ್ವದೇವೋಪಾಸ್ಯತ್ವ'ವೂ ಕೂಡ ''ಕುವಿದಙ್ಗ ನಮಸಾ'' ಎಂಬ ಋಗ್ವೇದದ ವಾಕ್ಯದಿಂದ ಪ್ರಾಣನ-ಧರ್ಮ ಎಂದು ಸಿದ್ಧವಾಗಿದೆ.

ಹೀಗೆ ಪ್ರಾಣಲಿಂಗಗಳಿರುವುದರಿಂದ 'ಈಶಾನ' ಮುಖ್ಯವಾಯುವೇ ಆಗಬೇಕು.

ವಿಷ್ಣುವು ವಿಭುವಾದ್ದರಿಂದ 'ಅಗುಷ್ಠಮಾತ್ರ' ಎಂದು ಹೇಳಲ್ಪಟ್ಟ 'ಈಶಾನ' ಆಗಲು ಸಾಧ್ಯವಿಲ್ಲ.

ಅಕ್ಷರಾಧಿಕರಣದಲ್ಲಿ ವಿಷ್ಣುವಿಗೆ ಅಣುತ್ವವನ್ನೂ ಹೇಳಿದ್ದಾರಲ್ಲಾ ? ಎಂದರೆ, ಅಲ್ಲಿ ಅಣುತ್ವವನ್ನು ಹೇಳಿದ್ದರೂ ಇಲ್ಲಿ ಹೇಳಿರುವ ಅಂಗುಷ್ಠಮಾತ್ರತ್ವ (ಅಂಗಷ್ಠ ಪರಿಮಾಣ ಬಿಟ್ಟು ಬೇರೆ ಪರಿಮಾಣ ಇಲ್ಲ ಎಂಬುದು) ವಿಷ್ಣುವಿಗೆ ಕೂಡುವುದಿಲ್ಲ.

**ಪ್ರಶ್ನೆ** :- ಹೃದಯವು ಅಂಗುಷ್ಠ ಪರಿಮಾಣವಾದ್ದರಿಂದ ಅದರಲ್ಲಿರುವ ವಿಷ್ಣುವೂ ಅಂಗುಷ್ಠ ಪರಿಮಾಣವುಳ್ಳವನು ಎಂದು ಔಪಾಧಿಕವಾದ ಅಂಗುಷ್ಠ ಪರಿಮಾಣತ್ವವನ್ನು ಹೇಳಬಹುದಲ್ಲಾ?

**ಪರಿಹಾರ** :- ಯತ್ಕಿಂಚಿತ್ ಅಂಗುಷ್ಠ ಪರಿಮಾಣತ್ವವನ್ನು ಹೇಳುತ್ತೀರೋ ಅಥವಾ ಆಯಾ ವ್ಯಕ್ತಿಗಳ ಅಂಗುಷ್ಠ ಪರಿಮಾಣತ್ವವನ್ನು ಹೇಳುತ್ತೀರೋ? ಯತ್ಕಿಂಚಿತ್ ಅಂಗುಷ್ಠ ಪರಿಮಾಣತ್ವವನ್ನು ಹೇಳಿದರೆ ಪರಿಮಾಣ ನಿರ್ಧಾರ ಸಾಧ್ಯವಿಲ್ಲವಾದ್ದರಿಂದ ಉಪಾಸನೆ ಕೂಡುವುದಿಲ್ಲ. ಆಗ ಅಂಗುಷ್ಠ ಪರಿ-ಮಾಣತ್ವವನ್ನು ಹೇಳಿದ್ದೇ ವ್ಯರ್ಥವಾಗುತ್ತದೆ. ಹಾಗಾಗಿ ತತ್ತದಗುಷ್ಠಪರಿ-ಮಾಣತ್ವವನ್ನು ಹೇಳಬೇಕು. ಆದರೆ ಪಶ್ವಾದಿಗಳಿಗೆ ಅಂಗುಷ್ಠವೇ ಇರುವುದಿಲ್ಲ-ವಾದ್ದರಿಂದ ಅವುಗಳ ಒಳಗಿರುವ ಈಶ್ವರನಿಗೆ ಅಂಗುಷ್ಠ ಪರಿಮಾಣತ್ವ ಎಂಬುದೇ ಅಸಾಧ್ಯ .

**ಸಿದ್ಧಾಂತ** :- ಈಶಾನ ಶಬ್ದವಾಚ್ಯ ವಿಷ್ಣುವೇ. ಏಕೆಂದರೆ,

೧) ''ಮಧ್ಯೇ ವಾಮಸಮಾಸೀನಂ'' ಎಂಬುದಾಗಿ ವಾಮನ ಶಬ್ದ ಶ್ರುತವಾಗಿದೆ. ವಾಮನ ಶಬ್ದವು ''ಏಷ ಏವ ವಾಮನಿಃ ಏಷ ಹಿ ಸರ್ವಾಣಿ ವಾಮಾನಿ ನಯತಿ'' ಎಂಬ ಛಾಂದೋಗ್ಯ ಶ್ರುತಿಯಿಂದಲೂ ''ಉಪೇಂದ್ರೋ ವಾಮನಃ ಪ್ರಾಂಶುಃ'' ಎಂಬ ವಿಷ್ಣು ಸಹಸ್ರನಾಮವಚನದಿಂದಲೂ ವಿಷ್ಣುವಿನಲ್ಲೇ ಪ್ರಸಿದ್ಧವಾಗಿದೆ.

**ಪ್ರಶ್ನೆ** :- ಶ್ರುತಿಯಲ್ಲಿ 'ವಾಮನಿ' ಎಂಬ ಶಬ್ದ ಶ್ರುತವಾಗಿದೆ. ವಾಮನ ಶಬ್ದವಲ್ಲ ?

**ಉತ್ತರ** :- 'ಏಕದೇಶವಿಕೃತಮನನ್ಯವದ್ಭವತಿ'' (ಒಂದಂಶದಲ್ಲಿ ವಿಕಾರ-ವಾಗಿದ್ದರೂ ಅದೇ ವಸ್ತುವೇ) ಎಂಬ ನ್ಯಾಯದಿಂದ ಇಲ್ಲಿರುವ ವಾಮನಿ ಶಬ್ದಕ್ಕೆ ವಾಮನ ಎಂದೇ ಅರ್ಥ.

ಇನ್ನು ವಾಮನ ಶಬ್ದಕ್ಕೆ ವಿಷ್ಣುವಿನಲ್ಲಿ ವಿದ್ವದ್ರೂಢಿಯೂ ಇದೆ. ಹೀಗೆ ಯೋಗರೂಢಿಗಳಿಂದ ವಾಮನ ಶಬ್ದವು ವಿಷ್ಣ್ವೇಕನಿಷ್ಠವಾಗಿದೆ.

೨) ಪ್ರಾಣನಿಯಾಮಕತ್ವವೂ ವಿಷ್ಣುವಿನದೇ ಲಿಂಗ. ಅಂತರ್ಯಾ-ಮ್ಯಧಿಕರಣ ನ್ಯಾಯದಿಂದ ಪ್ರಾಣಾದಿ ವ್ಯವಸ್ಥಾಪಕತ್ವವು ಪ್ರಾಣನ ಅಂತ-ರ್ಯಾಮಿಯಾದ ಸರ್ವನಿಯಮಾಮಕನಾದ ವಿಷ್ಣುವಿನಲ್ಲೇ ಮುಖ್ಯವಾಗಿ ಇರುವುದು.

ಇನ್ನು ''ಯದ್ದೇವಾನ್ ಪ್ರಾಣಯೋ ನವ'' ಎಂಬ ಶ್ರುತಿಯು ಸ್ಪಷ್ಟವಾಗಿ ಪ್ರಾಣಾದಿ ನಿಯಾಮಕತ್ವ ವಿಷ್ಣುವಿನ ಧರ್ಮ ಎಂದು ಹೇಳುತ್ತಿದೆ. ಹೀಗೆ ಈ ಲಿಂಗವು ಸಾವಕಾಶವಾಯಿತು.

೩) ''ಮಧ್ಯೇ ವಾಮನಮಾಸೀನಂ'' ಎಂಬಲ್ಲಿ ಶ್ರುತವಾಗಿರುವ ಮಧ್ಯ ಶಬ್ದಕ್ಕೆ ಮಧ್ಯದೇಶ ಎಂದರ್ಥ. ಏಕೆಂದರೆ ಅಲ್ಲೇ ಊರ್ಧ್ವ ಶಬ್ದ ಶ್ರುತವಾಗಿದೆ. ಅದು ದೇಶವಾಚಕವೆಂದು ಪ್ರಸಿದ್ಧ. ಅದರ ಸಹಚಾರವುಳ್ಳ ಮಧ್ಯಶಬ್ದವು ದೇಶವಾಚಕವೇ ಆಗಬೇಕು. ಇದರಿಂದ ಮಧ್ಯಮತ್ವ ಸಿದ್ಧವಾಗುವುದಿಲ್ಲ. ಮಧ್ಯದೇಶಸ್ಥತ್ವ ವಿಷ್ಣುವಿನಲ್ಲೂ ಕೂಡುತ್ತದೆ. ಹಾಗಾಗಿ ಇದೂ ಸಾವಕಾಶವಾಯಿತು.

೪) 'ಸರ್ವದೇವೋಪಾಸ್ಯತ್ವ' ಎಂಬುದೂ ವಿಷ್ಣುವಿನದೇ ಧರ್ಮ. ಸರ್ವದೇವೋಪಾಸ್ಯತ್ವ ಎಂದರೆ ಸರ್ವಜಿಜ್ಞಾಸ್ಯತ್ವ. ಈ ಸರ್ವಜಿಜ್ಞಾಸ್ಯತ್ವ ವಿಷ್ಣುವಿನ ಧರ್ಮ ಎಂದು ದಹರಾಧಿಕರಣದಲ್ಲಿ ಸಿದ್ಧವಾಗಿದೆ.

ಹೀಗೆ ಮೂರು ಲಿಂಗಗಳು ಸಾವಕಾಶಾವಾಗಿವೆ. ಆದ್ದರಿಂದ ದುರ್ಬಲವೂ ಆಗಿದೆ.

ಆದರೆ ವಾಮನ ಶ್ರುತಿಯು ನಿರವಕಾಶವಾಗಿದೆ. ಹಾಗಾಗೇ ಪ್ರಬಲ. ಹೀಗೆ ಪ್ರಬಲವಾದ ಶ್ರುತಿಯಿಂದ ದುರ್ಬಲವಾದ ಲಿಂಗಗಳಿಗೆ ಬಾಧವನ್ನು ಹೇಳಬೇಕು.

೫) ಇನ್ನು 'ಅಂಗುಷ್ಠಮಾತ್ರತ್ವ' ವಿಷ್ಣುವಿನಲ್ಲಿ ಕೂಡುವುದಿಲ್ಲ ಎಂಬ ಆಕ್ಷೇಪವೂ ಸರಿಯಲ್ಲ. 'ತತ್ತದಂಗುಷ್ಠಮಾತ್ರತ್ವ' ಎಂಬ ವಿಕಲ್ಪವನ್ನೇ ಒಪ್ಪುತ್ತೇವೆ. ಉಪಾಸಕರ ಅಂಗುಷ್ಠ ಪರಿಮಾಣಕ್ಕೆ ಅನುಸಾರವಾಗಿ ವಿಷ್ಣುವು ಅಭಿವ್ಯಕ್ತನಾಗುತ್ತಾನೆ. ಹೀಗೆ ವಿಷ್ಣುವಿನ ರೂಪವಿಶೇಷವನ್ನು ಇಟ್ಟುಕೊಂಡು ಅಂಗುಷ್ಠ ಮಾತ್ರತ್ವವನ್ನು ಹೇಳಬಹುದು. ಅಥವಾ, ಹೃದಯವು ಅಂಗುಷ್ಠ-ಪರಿಮಾಣವಾದ್ದರಿಂದ ಅದರ ಧರ್ಮವನ್ನು ಅದರಲ್ಲಿರುವ ವಿಷ್ಣುವಿಗೆ ಹೇಳುತ್ತಿದ್ದಾರೆ. ಇದು ಔಪಚಾರಿಕ ಪ್ರಯೋಗ. ಹೀಗೆ ಕೂಡಿಸಬಹುದು.

ಇನ್ನು, ಪ್ರಾಣಿಗಳಿಗೆ ಅಂಗುಷ್ಠವಿರುವುದಿಲ್ಲವಾದ್ದರಿಂದ ಅವುಗಳ ಒಳಗಿ-ರುವ ವಿಷ್ಣುವಿಗೆ ಅಂಗುಷ್ಠ ಮಾತ್ರತ್ವ ಹೇಗೆ? ಎಂದು ಪ್ರಶ್ನೆ ಮಾಡಲಾಗಿತ್ತು. ಅದಕ್ಕೆ ಉತ್ತರ, ವೇದವಿದ್ಯೆಯ ಉಪಾಸನೆಯ ಅಧಿಕಾರ ಮನುಷ್ಯರಿಗೆ ಮಾತ್ರ. ಪ್ರಾಣಿಗಳಿಗಿಲ್ಲ. 'ಅಂಗುಷ್ಠಮಾತ್ರತ್ವ'ವನ್ನು ಉಪಾಸನೆಯ ದೃಷ್ಟಿ-ಯಿಂದ ಹೇಳಿರುವುದು. ಪ್ರಾಣಿಗಳಿಗೆ ಯಾವ ಉಪಾಸನೆಯೂ ಇಲ್ಲ. ಹಾಗಾಗಿ ಈ ಪ್ರಶ್ನೆ ಅಸಂಗತ.

ಹೀಗೆ ಈಶಾನ ಶಬ್ದವಾಚ್ಯ ವಿಷ್ಣುವೇ ಎಂದು ಸಿದ್ಧವಾಗುತ್ತದೆ.

**ಅಧಿಕರಣ ಫಲ :-** ಇಲ್ಲಿ ಹೇಳಲ್ಪಟ್ಟ ಈಶಾನ ವಿಷ್ಣುವಲ್ಲ ಎಂದಾದರೆ, ಈಶಾನನಿಗೆ ಹೇಳಲ್ಪಟ್ಟ ಸರ್ವದೇವೋಪಾಸ್ಯತ್ವ (ಸರ್ವಜಿಜ್ಞಾಸ್ಯತ್ವ)ವೂ ವಿಷ್ಣುವಿಗಿಲ್ಲ ಎಂದಾಗಿ ಜಿಜ್ಞಾಸಾ ಸೂತ್ರದಲ್ಲಿ ಹೇಳಲ್ಪಟ್ಟ ಜಿಜ್ಞಾಸ್ಯತ್ವವೇ ಕೂಡುವುದಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನ, ಇದೇ ಈ ಅಧಿ ಕರಣದ ಪೂರ್ವಪಕ್ಷ, ಸಿದ್ಧಾಂತ ಪ್ರಯೋಜನ.

## ॥ ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ ॥
## ೧-೩-೮

ಶಾಸ್ತ್ರದಲ್ಲಿ ಮನುಷ್ಯರಿಗೇ ಅಧಿಕಾರ ಎಂದು ಹಿಂದೆ ಹೇಳಿದ್ದು ತಿರ್ಯ-ಗಾದಿಜಂತುಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ಹೊರತು ದೇವತೆಗಳನ್ನು ಅಲ್ಲ. ದೇವತೆಗಳಿಗೆ ಶಾಸ್ತ್ರದಲ್ಲಿ ಅಧಿಕಾರವಿದ್ದೇ ಇದೆ ಎಂದು ಈ ಅಧಿಕರಣ-ದಲ್ಲಿ ಪ್ರತಿಪಾದನೆ ಮಾಡುತ್ತಿರುವುದರಿಂದ ಆನಂತರ್ಯ ಎಂಬ ಸಂಗತಿಯಿದೆ.

''ವಿಶ್ವೇ ದೇವಾ ಉಪಾಸತೇ'' ಎಂಬಲ್ಲಿ ದೇವತೆಗಳು ಉಪಾಸಕರೆಂದು ಶ್ರುತರಾಗಿದ್ದಾರೆ. ಅಂತಹ ದೇವತೆಗಳಿಗೆ ಉಪಾಸನೆಯಲ್ಲಿ ಅಧಿಕಾರ ಉಂಟೇ ಇಲ್ಲವೇ ಎಂಬುದೇ ಸಂದೇಹ. ದೇವತೆಗಳಿಗೆ ಉಪಾಸನೆಯಲ್ಲಿ ಅಧಿಕಾರವಿಲ್ಲ ಎಂದು ಪೂರ್ವಪಕ್ಷ. ಏಕೆಂದರೆ,

ದೇವತೆಗಳು ಉತ್ಪತ್ತಿವಿನಾಶವುಳ್ಳವರೋ ಅನಾದಿನಿತ್ಯರೋ? ಎಂದು ಪ್ರಶ್ನೆ ಮಾಡಬೇಕು. ಉತ್ಪತ್ತಿವಿನಾಶವುಳ್ಳವರು (ಉಪಾಸನೆಯಿಂದ ದೇವಪದವಿ ಹೊಂದಿ ಮುಕ್ತಿ ಪಡೆಯುವರು) ಎಂಬುದು ಸರಿಯಲ್ಲ. ಏಕೆಂದರೆ ಇಂದ್ರಾದಿ ದೇವತೆಗಳು ಆ ಪದವಿಗೆ ಬರುವುದಕ್ಕೆ ಮೊದಲು ಹಾಗು ಅನಂತರ ಇಂದ್ರಾದಿ ದೇವತೆಗಳು ಯಾರೂ ಇರುವುದಿಲ್ಲವಾದ್ದರಿಂದ ಅವರನ್ನು ಉದ್ದೇಶಿಸಿ ಮಾಡುವ ದ್ರವ್ಯತ್ಯಾಗಾತ್ಮಕವಾದ ಯಜ್ಞಾದಿ ಕರ್ಮಗಳು ವಿರುದ್ಧವಾಗುವುವು. ಇಂದ್ರಾದಿ ದೇವತೆಗಳು ಇಲ್ಲದೆ ಇರುವ ಕಾಲದಲ್ಲಿ ವೇದದಲ್ಲಿರುವ ಇಂದ್ರಾದಿ ಶಬ್ದಗಳಿಂದ ಪ್ರತಿಪಾದ್ಯವಾದ ವಸ್ತುವೇ ಇರುವುದಿಲ್ಲವಾದ್ದರಿಂದ ವೇದಕ್ಕೆ ಅಪ್ರಾಮಾಣ್ಯವೆಂಬ ದೋಷ ಬರಬೇಕಾಗುತ್ತದೆ. ಇಂದ್ರಾದಿಗಳು ಇಲ್ಲದೇ ಇರುವಾಗ ವೇದವೂ ಇರುವುದಿಲ್ಲ ಎನ್ನಬಾರದು. ಏಕೆಂದರೆ ವೇದವು ಅನಾದಿನಿತ್ಯ .

ಪ್ರಶ್ನೆ :- ಈಗಿರುವ ಇಂದ್ರ ಹುಟ್ಟುವುದಕ್ಕಿಂತ ಮೊದಲು ಮತ್ತು ಇವನು ಮುಕ್ತನಾದ ಮೇಲೆ ಬೇರೆ ಇಂದ್ರ ಆ ಪದವಿಯಲ್ಲಿ ಇರುತ್ತಾನೆ. ಹಾಗಾಗಿ ಹಿಂದೆ ಹೇಳಿದ ದೋಷ ಬರುವುದಿಲ್ಲ?

**ಪರಿಹಾರ :-** ಹೀಗೆ ಪ್ರವಾಹತಃ ಅನಾದಿ ನಿತ್ಯತ್ವವನ್ನು ಹೇಳಿದರೂ ಎಲ್ಲಾ ಇಂದ್ರರಿಗೂ ಅದೇ ಹೆಸರು ಅದೇ ರೂಪ ಇರುತ್ತದೆ ಎಂದು ಹೇಳಲು ಯಾವ ಪ್ರಮಾಣವೂ ಇಲ್ಲ. ಹಾಗಾಗಿ ಎಲ್ಲರಿಗೂ ಬೇರೆ ಬೇರೆ ಹೆಸರು, ರೂಪಗಳನ್ನು ಒಪ್ಪಬೇಕು. ಆದರೆ ವೇದವು ಮಾತ್ರ ಇಂದ್ರನನ್ನು ಒಂದೇ ರೀತಿಯಾಗಿ (ಸಹಸ್ರಾಕ್ಷ ಮುಂತಾದ ರೀತಿಯಿಂದ) ವರ್ಣನೆ ಮಾಡುತ್ತಿದೆ. ಯಾವುದೋ ಕಾಲದಲ್ಲಿರುವ ಇಂದ್ರನಿಗೆ ಈ ರೂಪವಿಲ್ಲ ಎಂದರೆ ಆಗ ವೇದಕ್ಕೆ ಬರುವ ಅಪ್ರಾಮಾಣ್ಯವನ್ನು ತಡೆಯಲು ಸಾಧ್ಯವಿಲ್ಲ.

ಇನ್ನು ಇಂದ್ರಾದಿ ದೇವತೆಗಳು ಅನಾದಿನಿತ್ಯರು ಎಂಬ ವಿಕಲ್ಪವೂ ಕೂಡುವುದಿಲ್ಲ, ಏಕೆಂದರೆ ಅವರು ಅನಾದ್ಯನಂತಕಾಲದವರೆಗೂ ದೇವತೆ-ಗಳಾಗಿಯೇ ಇರುವವರು. ಅವರಿಗೆ ಮೋಕ್ಷವೇ ಇಲ್ಲ. ಹಾಗಾಗಿ ಮೋಕ್ಷವನ್ನು ಫಲವಾಗಿ ಹೊಂದಿರುವ ಉಪಾಸನೆಯಲ್ಲಿ ಅವರು ತೊಡಗುವುದೇ ಇಲ್ಲ. ಅದರಿಂದ ಅವರಿಗೆ ಯಾವ ಪ್ರಯೋಜನವೂ ಇಲ್ಲವಾದ್ದರಿಂದ.

ದೇವತೆಗಳಿಗೆ ಉಪಾಸನೆಯಲ್ಲಿ ಅಧಿಕಾರ ಒಪ್ಪುವವರೂ ಕೂಡ ದೇವತೆ-ಗಳಿಗೆ ಮಧ್ವಾದಿ ವಿದ್ಯೆಗಳಲ್ಲಿ ಅಧಿಕಾರವಿದೆ ಎನ್ನುತ್ತೀರೋ ಅಥವಾ ಮೋಕ್ಷ-ಫಲಕವಾದ ವಿದ್ಯೆಯಲ್ಲಿ ಅಧಿಕಾರ ಒಪ್ಪುತ್ತೀರೋ? ಎರಡೂ ಕೂಡುವುದಿಲ್ಲ. ಮಧ್ವಾದಿವಿದ್ಯೆಯಿಂದ ಬರುವ ಫಲ 'ವಸು' ಮೊದಲಾದ ಪದವಿ. ಆ ಪದವಿ ವಸು ಮೊದಲಾದ ದೇವತೆಗಳಿಗೆ ಈ ಮೊದಲೇ ದೊರಕಿದೆಯಾದ್ದರಿಂದ ಅವರಿಗೆ ಆ ವಿದ್ಯೆಗಳಲ್ಲಿ ಅಧಿಕಾರವಿಲ್ಲ.

ಇನ್ನು ಮೋಕ್ಷ ಫಲಕವಾದ ವಿದ್ಯೆಯಲ್ಲಿ ಅಧಿಕಾರ ಎನ್ನಬೇಕು. ಅದೂ ಕೂಡುವುದಿಲ್ಲ. ಏಕೆಂದರೆ ''ನೈವ ದೇವಪದಂ ಪ್ರಾಪ್ತಾಃ ಬ್ರಹ್ಮದರ್ಶನ ವರ್ಜಿತಾಃ'' ಎಂಬ ಪ್ರಮಾಣವಿದೆ. ಅಂದರೆ ದೇವತಾಪದವಿಗೆ ಬರುವವರಿಗೆ ಬ್ರಹ್ಮಸಾಕ್ಷಾತ್ಕಾರ ಆಗೇ ಇರುತ್ತದೆ. ಹಾಗಾಗಿ ಅವರೆಲ್ಲ ಸಿದ್ಧಜ್ಞಾನರು. ಮೋಕ್ಷಕ್ಕೆ ಕಾರಣವಾದದ್ದು ಬ್ರಹ್ಮಸಾಕ್ಷಾತ್ಕಾರ. ಅದು ಅವರಿಗೆ ದೇವತೆಗಳಾಗುವಾಗಲೇ ಇದೆಯಾದ್ದರಿಂದ ಅವರಿಗೆ ಬ್ರಹ್ಮಸಾಕ್ಷಾತ್ಕಾರವನ್ನು ಫಲವಾಗಿ ಹೊಂದಿರುವ ಉಪಾಸನೆಯಲ್ಲಿ ಅಧಿಕಾರ ಕೂಡುವುದಿಲ್ಲ.

ಸಿದ್ಧಾಂತ :- ದೇವತೆಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆ. ಏಕೆಂದರೆ,

೧) ದೇವತೆಗಳೂ ವೇದಾಧ್ಯಯನಕ್ಕೆ ಬೇಕಾದ ವಿಶಿಷ್ಟ ಬುದ್ಧಿವುಳ್ಳವರು.

೨) ಶೂದ್ರರು ವೇದಾಧ್ಯಯನವನ್ನು ಮಾಡಬಾರದು ಎಂದು ನಿಷೇಧ ಮಾಡಿದಂತೆ ದೇವತೆಗಳು ವೇದಾಧ್ಯಯನ ಮಾಡಬಾರದು ಎಂದು ನಿಷೇಧ ಮಾಡಿಲ್ಲ.

೩) ದೇವತೆಗಳಿಗೂ ಹುಟ್ಟು ಮತ್ತು ಮೋಕ್ಷವಿದೆಯಾದ್ದರಿಂದ ಅವರಿಗೆ ಮೋಕ್ಷದಲ್ಲಿ ಅರ್ಥಿತ್ವಕೂಡುತ್ತದೆ. ಅವರಿಗೆ ಉತ್ಪತ್ತಿ ವಿನಾಶಗಳನ್ನು ಒಪ್ಪಿದರೆ ಕರ್ಮವಿರೋಧವಾಗಲೀ ವೇದಾಪ್ರಾಮಾಣ್ಯವಾಗಲಿ ಬರುವುದಿಲ್ಲ. ಏಕೆಂದರೆ ಪ್ರವಾಹತಃ ಅನಾದಿತ್ವವನ್ನು ಹೇಳುತ್ತೇವೆ. ಈ ಪ್ರವಾಹತಃ ಅನಾದಿತ್ವವು ''ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ'' ''ಧಾತಾ ಯಥಾ ಪೂರ್ವಮಕಲ್ಪಯತ್'' ಎಂಬ ಪುರುಷಸೂಕ್ತದ ಮಾತಿ-ನಿಂದಲೂ ''ಯಥೈವ ನಿಯಮಃ ಕಾಲೇ ಸುರಾದಿನಿಯಮಸ್ತಥಾ'' ಎಂಬ ಪ್ರಮಾಣವಾಕ್ಯದಿಂದಲೂ ಸಿದ್ಧವಾಗಿದೆ.

೪) ವೇದವು 'ಪ್ರಮಾಣ' ಹಾಗೂ 'ಅನಾದಿನಿತ್ಯ' ಎಂದು ಸರ್ವವಾದಿ ಸಮ್ಮತವಾಗಿದೆ. ದೇವತೆಗಳಿಗೆ ಪ್ರವಾಹತಃ ಅನಾದಿ ನಿತ್ಯತ್ವವನ್ನು ಒಪ್ಪದೇ ಹೋದರೇ ವೇದಗಳ ಅನಾದಿನಿತ್ಯತ್ವ ವನ್ನೂ ಪ್ರಾಮಾಣ್ಯವನ್ನೂ ಕೂಡಿಸಲು ಸಾಧ್ಯವಿಲ್ಲ. ಈ ಅನ್ಯಥಾನುಪಪತ್ತಿ (ಅರ್ಥಾಪತ್ತಿ)ಯೂ ಕೂಡ ದೇವತೆಗಳ ಪ್ರವಾಹತಃ ಅನಾದಿನಿತ್ಯತ್ವದಲ್ಲಿ ಒಂದು ಪ್ರಮಾಣವಾಗಿದೆ.

೫) ''ಯಥಾಪೂರ್ವಂ'' ಎಂಬ ಶ್ರುತಿಯಿಂದಲೂ ''ಅನಾದಿನಿಧನಾ'' ಎಂಬ ಸ್ಮೃತಿಯಿಂದಲೂ ಬೇರೆ ಬೇರೆ ಕಾಲದಲ್ಲಿ ಆ ಪದವಿಗೆ ಬರುವ ಎಲ್ಲಾ ದೇವತೆಗಳ ನಾಮರೂಪಗಳು ಸಮಾನವಾಗಿರುವುದರಿಂದ, ವೇದಕ್ಕೆ ಅಪ್ರಾಮಾಣ್ಯದ ಪ್ರಸಕ್ತಿಯಿಲ್ಲ.

೬) ಇನ್ನು, ವಸು ಮೊದಲಾದ ದೇವತೆಗಳಿಗೆ, ವಸು ಪದವಿಯನ್ನು ಕೊಡುವ ಮಧು ವಿದ್ಯೆಯಲ್ಲಿ ಅರ್ಥಿತ್ವವಿರುವುದಿಲ್ಲ ಹಾಗಾಗಿ ಅವರಿಗೆ ಆ ವಿದ್ಯೆಯಲ್ಲಿ ಅಧಿಕಾರವಿಲ್ಲ ಎಂಬ ವಾದವೂ ಸರಿಯಲ್ಲ. ಅವರಿಗೆ ಆ ಪದವಿ

ದೊರತಿದ್ದರು ಆ ವಿದ್ಯೆಯ ಅತಿಶಯಜ್ಞಾನಕ್ಕಾಗಿ ಅಥವಾ ಮೋಕ್ಷದಲ್ಲಿ ಆನಂದಾತಿಶಯಕ್ಕಾಗಿ ಉಪಾಸನೆಯನ್ನು ಮಾಡಬಹುದು. ಹಾಗಾಗಿ ಅರ್ಥಿತ್ವ ಕೂಡುತ್ತದೆ. ತನ್ಮೂಲಕ ಅಧಿಕಾರವೂ ಇದ್ದೇ ಇದೆ. ಹೀಗೇ ಮೋಕ್ಷ ಫಲಕವಾದ ವಿದ್ಯೆಯಲ್ಲೂ ದೇವತೆಗಳಿಗೆ ಅಧಿಕಾರ ಒಪ್ಪಬೇಕು.

**ಅಧಿಕರಣ ಫಲ :-** ದೇವತೆಗಳಿಗೆ ಉಪಾಸನೆಯೇ ಕೂಡುವುದಿಲ್ಲವಾದ್ದರಿಂದ ಹಿಂದೆ ಹೇಳಿದ ''ವಿಶ್ವೇ ದೇವಾ ಉಪಾಸತೇ'' ಎಂಬುದು ಅಪ್ರಮಾಣ, ಎಂದು ಹಿಂದಿನ ಅಧಿಕರಣದ ಮೇಲಿನ ಆಕ್ಷೇಪ ಹಾಗು ಸಮಾಧಾನ, ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಶುಗಸ್ಯ ತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ ಓಂ ॥ ೧-೩-೯

ದೇವತೆಗಳಿಗೆ ಅಧಿಕಾರವಿದ್ದಂತೆ ಶೂದ್ರರಿಗೂ ಅಧಿಕಾರವಿರಲಿ ಎಂದು ಪೂರ್ವಾಧಿಕರಣ ಸಿದ್ಧಾಂತ ನ್ಯಾಯವನ್ನು ಇಟ್ಟುಕೊಂಡು ಪೂರ್ವಪಕ್ಷ ಪ್ರವೃತ್ತವಾಗುತ್ತಿರುವುದರಿಂದ ಈ ಅಧಿಕರಣದಲ್ಲಿ 'ಆಪವಾದಿಕೀ' ಎಂಬ ಸಂಗತಿಯಿದೆ.

ಶೂದ್ರರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಇದೆಯೋ ಇಲ್ಲವೋ ಎಂಬುದೇ ಸಂದೇಹ. ಬ್ರಹ್ಮವಿದ್ಯೆಯಲ್ಲಿ ಶೂದ್ರರಿಗೂ ಅಧಿಕಾರವಿದೆ ಎಂದು ಪೂರ್ವಪಕ್ಷ. ಏಕೆಂದರೆ, ಅವರಿಗೂ ದೇವತೆಗಳಿಗೆ ಇರುವಂತೆ ವಿಶಿಷ್ಟಬುಧ್ಯಾದಿಗಳಿವೆ.

ಪ್ರಶ್ನೆ - ಶೂದ್ರರಿಗೆ ವೇದಾಧ್ಯಯನದಲ್ಲಿ ಅಧಿಕಾರವಿಲ್ಲ. ಉಪನಯನ ಸಂಸ್ಕಾರವುಳ್ಳವನಿಗೆ ಮಾತ್ರ ವೇದಾಧ್ಯಯನದಲ್ಲಿ ಅಧಿಕಾರ ಎಂದು ''ಉಪನಯೀತ ತಮಧ್ಯಾಪಯೀತ'' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಶೂದ್ರರಿಗೆ ಉಪನಯನ ಸಂಸ್ಕಾರವಿಲ್ಲ, ಹಾಗಾಗಿಯೇ ವೇದಾಧ್ಯಯನವೂ ಇಲ್ಲ. ಆದ್ದರಿಂದಲೇ ಬ್ರಹ್ಮ ವಿದ್ಯೆಯಲ್ಲೂ ಅಧಿಕಾರವಿಲ್ಲ. ''ಅಧ್ಯಯನಮಾತ್ರವತಃ'' ಎಂಬ ಬ್ರಹ್ಮಸೂತ್ರದಿಂದ ವೇದಾಧ್ಯಯನ ಮಾಡಿದವರಿಗೆ ಮಾತ್ರ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರ ಎಂಬುದಾಗಿ ಹೇಳಿರುವುದರಿಂದ.

ಪರಿಹಾರ - ವೇದೋಕ್ತವಾದ 'ಸಂವರ್ಗ' ವಿದ್ಯೆಯನ್ನು ಉಪದೇಶ ಪಡೆದ ಪೌತ್ರಾಯಣನನ್ನು ಸಂಬೋಧಿಸುವಾಗ ಗುರುಗಳಾದ ರೈಕ್ವರು ''ಅಹ ಹಾರೇತ್ವಾ ಶೂದ್ರ'' ಎಂದು ಹೇಳಿದ್ದಾರೆ. ಇಲ್ಲಿ ಶೂದ್ರ ಎಂಬ ಶಬ್ದವಿದೆ. ಅದು ಕೊನೆಯ ವರ್ಣ ಎಂಬರ್ಥದಲ್ಲಿ ಪ್ರಸಿದ್ಧವಾಗಿದೆ. ಹೀಗಾಗಿ ಪೌತ್ರಾಯಣ ಶೂದ್ರವರ್ಣಕ್ಕೆ ಸೇರಿದವನೆಂದು ತಿಳಿಯುತ್ತದೆ. ಹಾಗಿದ್ದರೂ ಅವನಿಗೆ ವೇದವಿದ್ಯೆಯನ್ನು ಉಪದೇಶಿಸಿದ್ದಾರೆ. ಇದು ಒಂದು ಲಿಂಗ ಜೊತೆಗೆ ಶೂದ್ರವರ್ಣಕ್ಕೆ ಸೇರಿದ ವಿದುರಾದಿಗಳಿಗೂ ವೇದಾರ್ಥನಿಶ್ಚಯವಿದ್ದದ್ದು ತಿಳಿದು ಬರುತ್ತಿದೆ. ಈ ಕಾರಣದಿಂದಲೂ ಶೂದ್ರರಿಗೆ ಉಪನಯನ ಹಾಗು ಅಧ್ಯಯನಗಳನ್ನು ಒಪ್ಪಬೇಕು. ಅಥವಾ ಅವರಿಗೆ ಉಪನಯನವಿಲ್ಲದಿದ್ದರೂ ಅಧ್ಯಯನದಲ್ಲಿ ಅಧಿಕಾರವಿದೆ ಎಂದು ಹೇಳಬೇಕು. ಅಥವಾ ಅವರು ಅಧ್ಯಯನ-ದಲ್ಲಿ ತೊಡಗದಿದ್ದರೂ ಪುಸ್ತಕವನ್ನು ಓದಿ ಅರ್ಥಜ್ಞಾನವನ್ನು ಹೊಂದುವರು ಎಂದು ಹೇಳಬೇಕು. ಹೀಗೆ ಯಾವುದಾದರೂ ರೀತಿಯಲ್ಲಿ ಅವರು ವೇದಾರ್ಥ ವನ್ನು ತಿಳಿದು ಬ್ರಹ್ಮ ವಿದ್ಯೆಯಲ್ಲಿ ಅಧಿಕಾರವುಳ್ಳವರು ಆಗುತ್ತಾರೆ.

**ಸಿದ್ಧಾಂತ** :- ಶೂದ್ರರಿಗೆ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರವಿಲ್ಲ. ಪೌತ್ರಾಯಣ ಶೂದ್ರನಾದರೂ ಅವನಿಗೆ ರೈಕ್ವರು ಬ್ರಹ್ಮ ವಿದ್ಯೆಯನ್ನು ಉಪದೇಶಿಸಿದ್ದಾರಲ್ಲಾ? ಎಂದರೆ ಪೌತ್ರಾಯಣ ಶೂದ್ರನಲ್ಲ. ಅವನು ಕ್ಷತ್ರಿಯ. ಹೇಗೆಂದರೆ, ''ಅಯಮಶ್ವತರೀರಥಃ'' ಎಂಬ ವಾಕ್ಯಶೇಷದಲ್ಲಿ ಪೌತ್ರಾಯಣನು ಅಶ್ವತರೀ-ರಥವುಳ್ಳವನೆಂದು ತಿಳಿಯುತ್ತಿದೆ. ''ಯತ್ರ ವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥಃ'' ಎಂಬ ಸ್ಮೃತಿ ವಾಕ್ಯದಿಂದ ರಥಕ್ಕೂ ವೇದಕ್ಕೂ ವ್ಯಾಪ್ತಿ ಸಿದ್ಧವಾಗುತ್ತಿದೆ. (ವೇದಾಧಿಕಾರವಿದ್ದವರು ಮಾತ್ರ ರಥವನ್ನು ಹೊಂದಬೇಕು ಇಲ್ಲದಿದ್ದವರು ಇಲ್ಲ )

ಶೂದ್ರರಿಗೆ ವೇದಾಧಿಕಾರವಿಲ್ಲವಾದ್ದರಿಂದ ರಥವೂ ಇಲ್ಲ. ಪೌತ್ರಾಯಣ ರಥವುಳ್ಳವನಾದ್ದರಿಂದ ಅವನು ಶೂದ್ರನಲ್ಲ.

**ಪ್ರಶ್ನೆ** :- ಪೌತ್ರಾಯಣ ರಥವುಳ್ಳವನಾದ್ದರಿಂದ ಶೂದ್ರನಲ್ಲ ಎಂದು ಸಿದ್ಧ-ವಾದರೂ ಅವನು ಕ್ಷತ್ರಿಯ ಎಂದು ಹೇಗೆ ಸಿದ್ಧವಾಗುವುದು? ರಥವುಳ್ಳವನಾದ್ದ-ರಿಂದ ಅವನು ವೇದಾಧಿಕಾರವುಳ್ಳವನೆಂದು ಇಷ್ಟು ಮಾತ್ರ ಸಿದ್ಧವಾಗುವುದು?

**ಸಮಾಧಾನ** :- ಇಲ್ಲಿ ಹೇಳಲ್ಪಟ್ಟ ರಥಿತ್ವವು ಸ್ವಾಭಾವಿಕ ರಥಿತ್ವ. ಬ್ರಾಹ್ಮಣಾದಿಗಳಿಗಿರುವಂತೆ ಆಗಂತುಕವಲ್ಲ. ಸ್ವಾಭಾವಿಕರಥಿತ್ವ ಕ್ಷತ್ರಿಯರಲ್ಲಿ ಮಾತ್ರ ಇರುವುದಾದ್ದರಿಂದ ಪೌತ್ರಾಯಣ ಕ್ಷತ್ರಿಯ ಎಂದು ಸಿದ್ಧವಾಗುವುದು.

ಹೀಗೆ ಪೌತ್ರಾಯಣ ಕ್ಷತ್ರಿಯ ಎಂದು ನಿಶ್ಚಿಯವಾದ ಮೇಲೆ ಈ ಬಾಧಕ-ವಿರುವುದರಿಂದ ಅವನಲ್ಲಿ ಪ್ರಯುಕ್ತವಾದ ಶೂದ್ರ ಶಬ್ದಕ್ಕೆ ಪ್ರಸಿದ್ಧಾರ್ಥವನ್ನು ಮಾಡಬಾರದು. ಹಾಗಾದರೆ ಶೂದ್ರ ಶಬ್ದಕ್ಕೆ ಏನು ಅರ್ಥ? ಎಂದರೆ ಪೌತ್ರಾಯಣನಿಗೆ ಹಂಸಗಳು ಅವಮಾನ ಮಾಡಿದ್ದರಿಂದ ಅತೀವ ಶೋಕ ಉಂಟಾಯಿತು. ಆ ಶೋಕದಿಂದ ಅವನು ಕರಗಿಹೋದ ಮತ್ತು ರೈಕ್ವರನ್ನು ಹುಡುಕಿಕೊಂಡು ಓಡಿ ಬಂದ. ಈ ಕಥೆ ವಾಕ್ಯಶೇಷದಿಂದ ತಿಳಿಯುತ್ತಿದೆ. ಇದಕ್ಕೆ ಅನುಗುಣವಾಗಿ ಶೂದ್ರ ಎಂದು ರೈಕ್ವರು ಕರೆದಿದ್ದಾರೆ. ಆದ್ದರಿಂದ ಶೂದ್ರ ಎಂದರೆ ಶುಚಾ = ಶೋಕದಿಂದ ಆದ್ರವಣಾತ್ = ಕರಗಿ ಹೋಗೋಣ ಅಥವಾ ತೀವ್ರಗಮನ ಎಂಬ ಕಾರಣದಿಂದ ಶೂದ್ರ ಎಂದು ಕರೆಯಲ್ಪಟ್ಟಿದ್ದಾನೆ.

ಹಾಗಾಗಿ ಇಲ್ಲಿ ಶೂದ್ರ ಶಬ್ದಕ್ಕೆ ಯೌಗಿಕವಾದ ಅರ್ಥವನ್ನು ಮಾಡಬೇಕು. ರೂಢಾರ್ಥವನ್ನು ಕೈಬಿಟ್ಟಿದ್ದರಿಂದ ಶೂದ್ರ ಶಬ್ದವು ಶೂದ್ರನಿಗೆ ವೇದಾಧಿಕಾರವಿದೆ ಎಂಬುದಕ್ಕೆ ಸಾಧಕವಾಗುವುದಿಲ್ಲ.

ವೇದಾಧ್ಯಯನಕ್ಕೆ ಅಧಿಕಾರ ಬರಬೇಕಾದರೆ ಉಪನಯನ ಸಂಸ್ಕಾರ-ವಾಗಿರಲೇಬೇಕು. ಆದರೆ ಶೂದ್ರರಿಗೆ ಉಪನಯನ ಸಂಸ್ಕಾರವಿಲ್ಲವೆಂದು ''ನಾಗ್ನಿರ್ನ ಯಜ್ಞೊ ನ ಕ್ರಿಯಾ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯ'' ಎಂಬ ಶ್ರುತಿಯಿಂದ ಸಿದ್ಧವಾಗಿದೆ.

**ಪ್ರಶ್ನೆ** :- ಶೂದ್ರರಿಗೆ ಉಪನಯನ ಸಂಸ್ಕಾರವಿಲ್ಲ ಎಂಬುದು ಸರಿಯಲ್ಲ. ಸತ್ಯಕಾಮ ಶೂದ್ರನಾದರೂ ಅವನಿಗೆ ಉಪನಯನವನ್ನು ಮಾಡಿಸಿ ವೇದವನ್ನು ಉಪದೇಶಿಸಿದ್ದು ತಿಳಿಯುತ್ತಿದೆ?

**ಉತ್ತರ** :- ''ನೈತದಬ್ರಾಹ್ಮಣೋ ವಿವಕ್ತುಮರ್ಹತಿ'' ಎಂಬ ವಾಕ್ಯದಿಂದ, ಗುರುಗಳಾದ ಗೌತಮರು, ಸತ್ಯಕಾಮನು ಸತ್ಯವನ್ನು ಹೇಳಿತ್ತಿರುವುದನ್ನು ಗಮನಿಸಿ ಬ್ರಾಹ್ಮಣನಲ್ಲದವನು ಈ ರೀತಿ ಸತ್ಯವನ್ನು ಹೇಳಲಾರ ಎಂದು

ವಿಮರ್ಶಿಸಿ ಇವನು ಬ್ರಾಹ್ಮಣನಾಗಿರಲೇಬೇಕು ಎಂದು ನಿಶ್ಚಯ ಮಾಡಿಕೊಂಡೇ ವೇದವನ್ನು ಉಪದೇಶಿಸಿದ್ದಾರೆಂದು ತಿಳಿಯುತ್ತದೆ. ಹಾಗಾಗಿ ಶೂದ್ರರಿಗೆ ಸಂಸ್ಕಾರವಿದೆ ಎಂಬುದಕ್ಕೆ ಇದು ಸಾಧಕವಾಗಲು ಸಾಧ್ಯವಿಲ್ಲ.

''ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಂ, ಅಧ್ಯಯನೇ ಜಿಹ್ವಾ-ಛೇದಃ, ಅರ್ಥಾವಧಾರಣೇ ಹೃದಯವಿದಾರಣಂ'' (ವೇದಮಂತ್ರಗಳನ್ನು ಕೇಳಿದರೆ ಕಾದ ಸೀಸವನ್ನು ಕಿವಿಯಲ್ಲಿ ಹಾಕಬೇಕು, ಅಧ್ಯಯನದಲ್ಲಿ ತೊಡಗಿ-ದರೆ ನಾಲಗೆ ಕತ್ತರಿಸಬೇಕು ಅರ್ಥವನ್ನು ತಿಳಿದರೆ ಹೃದಯ ಸೀಳಬೇಕು) ಎಂದು ಶೂದ್ರರಿಗೆ ವೇದಾಧ್ಯಯನವನ್ನು ನಿಷೇಧ ಮಾಡುವ ಶ್ರುತಿಗಳಿರು-ವುದರಿಂದಲೂ ಶೂದ್ರರಿಗೆ ಅಧಿಕಾರವಿಲ್ಲ.

ಶೂದ್ರರಿಗೆ ವಿಶಿಷ್ಟ ಬುದ್ಧಿಯಿದ್ದರೂ ಕೇವಲ ವಿಶಿಷ್ಟಬುದ್ಧಿಮತ್ವ ಮಾತ್ರ ಅಧಿಕಾರಕ್ಕೆ ಪ್ರಯೋಜಕವಲ್ಲ ಅನಿಷಿದ್ಧತ್ವವೂ ಕೂಡ. ಶೂದ್ರರಲ್ಲಿ ಅನಿಷಿದ್ಧತ್ವ ವಿಲ್ಲವಾದ್ದರಿಂದ ಅವರಿಗೆ ಅಧಿಕಾರವಿಲ್ಲ. ಬರೆದ ವೇದಪುಸ್ತಕವನ್ನು ಓದಿ ಮೇಲ್ನೋಟದ ಅರ್ಥವನ್ನು ತಿಳಿಯಬಹುದಾದರೂ ಅರ್ಥ ನಿಶ್ಚಯ ಉಂಟಾಗಲು ಸಾಧ್ಯವಿಲ್ಲ.

ವಿದುರಾದಿಗಳಿಗೆ ಇರುವುದು ಜನ್ಮಾಂತರದ ಸಂಸ್ಕಾರದಿಂದ ಹುಟ್ಟಿದ ಜ್ಞಾನ. ಹಾಗಾಗಿ ಈ ಅಂಶವೂ ಶೂದ್ರರಿಗೆ ಅಧಿಕರವಿದೆ ಎನ್ನುವುದಕ್ಕೆ ಸಾಧಕ-ವಾಗುವುದಿಲ್ಲ.

**ಅಧಿಕರಣ ಫಲ** :- ಶೂದ್ರರಿಗೂ ವಿಶಿಷ್ಟಬುದ್ಧ್ಯಾದಿಗಳಿರುವುದರಿಂದ ದೇವತೆಗಳಂತೆ ಅವರಿಗೂ ವೇದವಿದ್ಯೆಯಲ್ಲಿ ಅಧಿಕಾರವಿದೆ ಎಂದರೆ ಆಗ ಶೂದ್ರರಿಗೆ ಅಧಿಕಾರವನ್ನು ನಿಷೇಧಮಾಡುವ ಶ್ರುತಿಯ ವಿರೋಧ ಬರುತ್ತದೆ. ಶ್ರುತಿಯ ವಿರೋಧವಿರುವುದರಿಂದ ಅಧಿಕಾರ ಒಪ್ಪುವುದು ಬೇಡ ಎಂದರೆ ಆಗ ಹಿಂದೆ 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಎಂಬ ಸೂತ್ರದಲ್ಲಿ ಹೇಳಿದ್ದು ಸರಿಯಲ್ಲ ಎಂದಾಗುತ್ತದೆ. ಅಲ್ಲಿ ಮನುಷ್ಯರಿಗೆ ಶಾಸ್ತ್ರದಲ್ಲಿ ಅಧಿಕಾರ ಎಂದು ಹೇಳಿದೆ. ಶೂದ್ರರೂ ಮನುಷ್ಯರಾದ್ದರಿಂದ ಅವರಿಗೂ ಅಧಿಕಾರ ಒಪ್ಪಬೇಕು. ಇಲ್ಲದೇ ಹೋದರೆ ಸೂತ್ರದಲ್ಲಿ ಹೇಳಿದ್ದು ಸರಿಯಲ್ಲ ಎಂಬುದು ಸ್ಪಷ್ಟ. ಇದು ಪೂರ್ವಪಕ್ಷ ಫಲ.

ಶೂದ್ರರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ. ಆದರೂ ಮನುಷ್ಯಾಧಿಕಾರತ್ವಾತ್ ಎಂದು ಹೇಳಿದ್ದು ಸರಿ. ಏಕೆಂದರೆ ಅಲ್ಲಿ ಮನುಷ್ಯರು ಎಂದರೆ ಶೂದ್ರರನ್ನು ಬಿಟ್ಟು ಉಳಿದ ತ್ರೈವರ್ಣಿಕರು ಎಂದರ್ಥ. ಇದು ಸಿದ್ಧಾಂತ ಫಲ.

## || ಓಂ ಕಂಪನಾತ್ ಓಂ || ೧-೩-೧೦

ಹಿಂದಿನ ಅಧಿಕರಣದಲ್ಲಿ ಶೂದ್ರ ಶಬ್ದವನ್ನು ಕ್ಷತ್ರಿಯನಲ್ಲಿ ಸಮನ್ವಯ ಮಾಡುವಾಗ ವಾಕ್ಯಶೇಷದಲ್ಲಿ ಯೋಗವು ಉಕ್ತವಾಗಿತ್ತು. ಹಾಗಾಗಿ ಅದು ಕೂಡಬಹುದು. ಆದರೆ ಪ್ರಕೃತದಲ್ಲಿ ವಜ್ರ ಶಬ್ದವನ್ನು ಯೋಗವೃತ್ತಿಯಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಲು ಸಾಧ್ಯವಿಲ್ಲ. ವಾಕ್ಯಶೇಷದಲ್ಲಿ ಯೋಗವು ಹೇಳಲ್ಪಟ್ಟಿಲ್ಲವಾದ್ದರಿಂದ ಎಂಬ ಶಂಕೆಯನ್ನು ಮಾಡುತ್ತಿರುವುದರಿಂದ ಈ ಅಧಿಕರಣದಲ್ಲಿ ಪ್ರತ್ಯುದಾಹರಣ ಎಂಬ ಸಂಗತಿಯಿದೆ.

''ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಮ್ । ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುಃ ಅಮೃತಾಸ್ತೇ ಭವಂತಿ'' ಎಂಬ ಕಾಠಕ-ಶ್ರುತಿಯಲ್ಲಿ ಉಕ್ತವಾದ 'ವಜ್ರ' ಇಂದ್ರನ ಆಯುಧವೋ ಅಥವಾ ವಿಷ್ಣುವೋ ಎಂಬುದೇ ಸಂದೇಹ. ಇಂದ್ರನ ಆಯುಧವೇ ಎಂದು ಪೂರ್ವಪಕ್ಷ. ಏಕೆಂದರೆ,

೧) ವಜ್ರ ಶಬ್ದಕ್ಕೆ ಇಂದ್ರಾಯುಧ ಎಂಬರ್ಥದಲ್ಲಿ ರೂಢಿಯಿದೆ. ಹಿಂದಿನಂತೆ ವಾಕ್ಯಶೇಷದಲ್ಲಿ ವಿಷ್ಣುಪರವಾದ ಯೋಗ (ಅವಯವಾರ್ಥ)ವು ಹೇಳಲ್ಪಟ್ಟಿಲ್ಲ.

೨) 'ವರ್ಜನಾತ್ ವಜ್ರಂ' ಎಂಬ ಸ್ಮೃತಿಯಲ್ಲಿ ಯೋಗವು ಹೇಳಲ್ಪಟ್ಟಿದೆ ಎಂದರೆ, ಸ್ಮೃತಿಗಿಂತಲೂ ವಜ್ರಶ್ರುತಿ ಪ್ರಬಲ. ಸ್ಮೃತಿ ದುರ್ಬಲ. ಹಾಗಾಗಿ ಸಾಧಕವಾಗಲು ಸಾಧ್ಯವಿಲ್ಲ.

೩) ಪ್ರಸಿದ್ಧವಾದ ರೂಢ್ಯರ್ಥವನ್ನು ಬಿಟ್ಟು ಯೋಗವೃತ್ತಿಯಿಂದ 'ವಿಷ್ಣು' ಎಂಬ ಅರ್ಥ ಮಾಡಿದರೆ, ಆಗ ಬೇರೆ ಅರ್ಥಗಳಲ್ಲೂ ಯೋಗವನ್ನು ತೋರಿಸಬಹುದಾದ್ದರಿಂದ ಈ ಶಬ್ದಕ್ಕೆ ಇದೇ ಅರ್ಥ ಎಂಬ ವ್ಯವಸ್ಥೆ ಇಲ್ಲದೇ ಹೋಗಬೇಕಾಗುತ್ತದೆ.

೪) ಉದ್ಯತತ್ವ (ಎತ್ತಿ ಹಿಡಿಯುವುದು) ಎಂಬ ಲಿಂಗವೂ ಇದೆ. ಇದೂ ಆಯುಧಕ್ಕೇ ಹೊಂದುತ್ತದೆ. ಉದ್ಯತತ್ವ ಎಂಬುದು ''ಉದ್ಯತಾಯುಧ-ದೋರ್ದಂಡಃ'' ಎಂಬ ಸ್ಮೃತಿಯಲ್ಲಿ ಹಾಗು ''ತೇನೇಂದ್ರೋ ವಜ್ರಮುದ-ಯಚ್ಛತ್'' ಎಂಬ ಶ್ರುತಿಯಲ್ಲಿ ಆಯುಧದಲ್ಲೇ ಪ್ರಸಿದ್ಧವಾಗಿದೆ.

**ಪ್ರಶ್ನೆ** :- ''ಯ ಏತದ್ವಿದುಃ ಅಮೃತಾಸ್ತೇ ಭವಂತಿ'' ಎಂಬುದಾಗಿ ವಜ್ರದ ಜ್ಞಾನವು ಮೋಕ್ಷಕ್ಕೆ ಕಾರಣ ಎಂದು ಹೇಳಲಾಗಿದೆ. 'ಮೋಕ್ಷಹೇತುಜ್ಞಾನ ವಿಷಯತ್ವ' ಎಂಬುದು ವಿಷ್ಣುವಿನ ಲಿಂಗ. ಹಾಗಾಗಿ ವಜ್ರ ಎಂದರೆ ಇಂದ್ರಾಯುಧ ಹೇಗೆ?

**ಪರಿಹಾರ** :- ಇಂದ್ರಾಯುಧ ಎಂಬರ್ಥದಲ್ಲಿ ವಜ್ರಶ್ರುತಿ ಹಾಗು ಉದ್ಯತತ್ವ ಲಿಂಗ, ಎರಡೂ ಇದೆ. ವಿಷ್ಣು ಎಂಬ ಅರ್ಥದಲ್ಲಿ ಕೇವಲ ಲಿಂಗವಿದೆ. ಹಾಗಾಗಿ ಶ್ರುತಿಲಿಂಗಗಳಿಂದ ಕೇವಲ ಲಿಂಗಕ್ಕೆ ಬಾಧ ಹೇಳಬೇಕು.

**ಸಿದ್ಧಾಂತ** :- ವಜ್ರಶಬ್ದ ವಿಷ್ಣುವಾಚಕವೇ. ಹೇಗೆಂದರೆ,

೧) ''ಜಗತ್ಸರ್ವಂ ಪ್ರಾಣ ಏಜತಿ'' ಎಂಬುದಾಗಿ ಸರ್ವಚೇಷ್ಟಕತ್ವ ಎಂಬ ಧರ್ಮ ಶ್ರುತವಾಗಿದೆ. ಈ ಧರ್ಮವು ವಿಷ್ಣುನಲ್ಲಿ ಹೊರತು ಬೇರೆ ಕಡೆ ಇರಲು ಅವಕಾಶವಿಲ್ಲ ಎಂದು ''ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್'' ಇತ್ಯಾದಿ ಶ್ರುತಿ ಸ್ಮೃತಿಗಳಿಂದ ಸಿದ್ಧವಾಗಿದೆ.

೨) ವಜ್ರ ಶಬ್ದವು ವಿಷ್ಣುವಿನಲ್ಲಿ ಸಾವಕಾಶವಾಗಿದೆ. ವಿಷ್ಣು ಪರವಾದ ಯೋಗವು ಶ್ರುತಿಯಲ್ಲಿ ಬಂದಿಲ್ಲ. ಸ್ಮೃತಿಯಲ್ಲಿ ಮಾತ್ರ ಹೇಳಲ್ಪಟ್ಟಿದೆ ಎಂದರೆ, ಸ್ಮೃತಿಯು ಶ್ರುತಿಗೆ ಉಪಬೃಂಹಕ (ಅನುಗ್ರಾಹಕ)ವಾದ್ದರಿಂದ ಸ್ಮೃತ್ಯುಕ್ತವಾದ ಯೋಗವು ಗ್ರಾಹ್ಯವಾಗಿದೆ. ಜೊತೆಗೆ ಅದು ನಿರವಕಾಶವಾಗಿದೆ.

೩) ಇನ್ನು ''ಆಯುಧಾನಾಂ ಅಹಂ ವಜ್ರಂ'' ಎಂಬ ಗೀತಾವಾಕ್ಯದಲ್ಲಿ ವಿಷ್ಣು ಎಂಬರ್ಥದಲ್ಲಿ ವಜ್ರ ಶಬ್ದವು ಪ್ರಯುಕ್ತವೂ ಆಗಿದೆ. ಬೇರೆ ಅರ್ಥಗಳಲ್ಲೂ ಯೋಗವನ್ನು ಹೇಳಬಹುದಲ್ಲಾ? ಆಗ ಅವ್ಯವಸ್ಥೆ ಉಂಟಾಗುತ್ತದೆ ಎಂದರೆ, ಇಲ್ಲ. ಈ ಯೋಗವು ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ. ಪ್ರಾಮಾಣಿಕವಾಗಿದೆ, ಹಾಗಾಗಿ ಯಾವುದೇ ಅವ್ಯವಸ್ಥೆಗೆ ಅವಕಾಶವಿಲ್ಲ.

ಇನ್ನು 'ಉದ್ಯತತ್ವ' ಲಿಂಗವೂ ವಿಷ್ಣುವಿನಲ್ಲಿ ಸಾವಕಾಶವಾಗಿದೆ. 'ಉತ್' ಪೂರ್ವಕ 'ಯತೀ' ಧಾತುವಿನಿಂದ ನಿಷ್ಪನ್ನವಾಗಿರುವ ಶಬ್ದ 'ಉದ್ಯತ'. ಅದರರ್ಥ ಉತ್ಕೃಷ್ಟ ಪ್ರಯತ್ನವುಳ್ಳವನು. ಈ 'ಉತ್ಕೃಷ್ಟ ಪ್ರಯತ್ನವತ್ವ' ಎಂಬ ಲಿಂಗವು ವಿಷ್ಣುವಿನಲ್ಲೂ ಇರಲು ಸಾಧ್ಯವಿದೆ. ಹಾಗಾಗಿ ಸಾವಕಾಶವಾಯಿತು. ಹೀಗೆ ವಜ್ರಶ್ರುತಿ, ಉದ್ಯತತ್ವಲಿಂಗ ಎರಡೂ ಸಾವಕಾಶವಾಯಿತು. 'ಸರ್ವಜಗತ್ಶ್ರೇಷ್ಟಕತ್ವ' ಎಂಬ ನಿರವಕಾಶವಾದ ವಿಷ್ಣುಲಿಂಗವಿದೆ. ಆದ್ದರಿಂದ ವಜ್ರ ಎಂದರೆ ವಿಷ್ಣುವೇ ಆಗಬೇಕು.

**ಅಧಿಕರಣ ಫಲ :-** ಇಲ್ಲಿ ಬಂದಿರುವ ವಜ್ರ ವಿಷ್ಣುವಿಗಿಂತ ಬೇರೆ ಎಂದಾದರೆ ಆಗ ವಜ್ರನಿಗೆ ಹೇಳಲ್ಪಟ್ಟ ಮುಕ್ತಿಹೇತುವೇದನತ್ವವೂ ವಿಷ್ಣುವಿಗಿಂತ ಬೇರೆಯದಕ್ಕೇ ಬರಬೇಕಾಗುತ್ತದೆ ಎಂಬ ಆಕ್ಷೇಪ ಹಾಗು ಅದರ ಸಮಾಧಾನ. ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ

## ॥ ಓಂ ಜ್ಯೋತಿರ್ದರ್ಶನಾತ್ ಓಂ ॥ ೧-೩-೧೧

ಹಿಂದಿನ ಅಧಿಕರಣದಲ್ಲಿ ನಿರವಕಾಶವಾದ ವಿಷ್ಣುಲಿಂಗವಿರುವುದರಿಂದ ವಜ್ರ ಶಬ್ದಕ್ಕೆ ಪ್ರಸಿದ್ಧಾರ್ಥವನ್ನು ತ್ಯಾಗ ಮಾಡಿ ವಿಷ್ಣು ಎಂಬ ಅರ್ಥ ಮಾಡಿದಂತೆ ಪ್ರಕೃತದಲ್ಲಿಯೂ ಜ್ಯೋತಿಃ ಶಬ್ದಕ್ಕೆ ''ವಿಷ್ಣುರೇವ ಜ್ಯೋತಿಃ'' ಎಂಬ ಶ್ರುತಿಯಲ್ಲಿ ಹೇಳಿದಂತೆ ವಿಷ್ಣು ಎಂಬ ಅರ್ಥ ಪ್ರಸಿದ್ಧವಾದರೂ ನಿರವಕಾಶವಾದ ಜೀವಲಿಂಗವಿರುವುದರಿಂದ ವಿಷ್ಣು ಎಂಬ ಅರ್ಥವನ್ನು ತ್ಯಾಗ ಮಾಡಿ ಜೀವ ಎಂಬ ಅರ್ಥ ಮಾಡಬೇಕು. ಎಂದು ಈ ಆಕ್ಷೇಪದ ಮೂಲಕ ಪೂರ್ವಪಕ್ಷ ಹೊರಡುತ್ತಿರುವುದರಿಂದ ಇಲ್ಲಿ 'ಆಪವಾದಿಕೀ' ಎಂಬ ಸಂಗತಿಯಿದೆ.

ಬೃಹದಾರಣ್ಯಕೋಪನಿಷತ್ತಿನ ಆರನೇ ಅಧ್ಯಾಯದಲ್ಲಿ ಬಂದಿರುವ ''ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ'' ಎಂಬ ವಾಕ್ಯದಲ್ಲಿ ಶ್ರುತವಾದ ಜ್ಯೋತಿಯು ಜೀವನೋ ಅಥವಾ ಬ್ರಹ್ಮನೋ ಎಂಬುದೇ ಸಂದೇಹ. ಜೀವನೇ ಎಂದು ಪೂರ್ವಪಕ್ಷ. ಏಕೆಂದರೆ,

೧) ಇಲ್ಲಿ ಜೀವಲಿಂಗಗಳು ಶ್ರುತವಾಗಿವೆ.

''ಸ ಸಮಾನಸ್ಸನ್ ಉಭೌ ಲೋಕಾವನುಸಂಚರತಿ''

''ಸ ವಾಽಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂಸೃಜ್ಯತೇ । ಸ ಉತ್ಕ್ರಾಮನ್ ಮ್ರಿಯಮಾಣಃ ಪಾಪ್ಮನೋ ವಿಜಹಾತಿ'' ಎಂಬ ಶ್ರುತಿಗಳಲ್ಲಿ ಕರ್ಮಾಧೀನವಾಗಿ ಲೋಕ ಸಂಚರಣವೇ ಮೊದಲಾದ ಅನೇಕ ಜೀವಲಿಂಗಗಳು ಉಕ್ತವಾಗಿವೆ.

೨) ''ಕಿಂ ಜೋತಿರಯಂ ಪುರುಷಃ'' (ಈ ಜೀವನಿಗೆ ಜ್ಞಾನಕಾರಣವಾದದ್ದು ಯಾವುದು) ಎಂಬ ಪ್ರಶ್ನೆ ಮಾಡಿದಾಗ ಅದಕ್ಕೆ ಉತ್ತರವಾಗಿ ''ಆದಿತ್ಯೇನೈವ ಜ್ಯೋತಿಷಾ ಆಸ್ತೇ'' ಎಂದು ಹೇಳಲಾಗಿದೆ. ಇಲ್ಲಿ ಕ್ರಮವಾಗಿ ಆದಿತ್ಯ, ಚಂದ್ರ, ಅಗ್ನಿ, ವಾಕ್, ಆತ್ಮ ತಾನು ಇವು ಪುರುಷನಿಗೆ ಜ್ಯೋತಿ (ಜ್ಞಾನಕಾರಣ) ಎಂದು ಹೇಳಿ, ಇವುಗಳಲ್ಲಿ ಪೂರ್ವಪೂರ್ವಜ್ಯೋತಿ ಅಸ್ತಮಯವಾದರೆ ಮುಂದೆ ಮುಂದಿನದ್ದು ಜ್ಯೋತಿಯಾಗುತ್ತದೆ ಎಂದು ಹೇಳಿದೆ. ಮುಂದೆ ''ಕತಮ ಆತ್ಮಾ'' ಎಂದು ಈ ಜ್ಯೋತಿಗಳಲ್ಲಿ ಕೊನೆಯದಾದ ಆತ್ಮಾ ಎಂಥವನು ಎಂದು ಕೇಳಿದಾಗ ''ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ'' ಎಂದು ಹೇಳಲಾಗಿದೆ. ಹಾಗಾಗಿ ಇಲ್ಲಿ ಹೇಳಿರುವ ಜ್ಯೋತಿಃ ಬ್ರಹ್ಮನಾಗಲು ಸಾಧ್ಯವಿಲ್ಲ ಜೀವನೇ ಆಗಬೇಕು. ಏಕೆಂದರೆ, ಈ ಜ್ಯೋತಿಗೆ ಆದಿತ್ಯಾದಿಗಳನ್ನು ಜ್ಞಾನಕಾರಣ ಎಂದು ಹೇಳಿದ್ದಾರೆ. ಆದರೆ ಆದಿತ್ಯಾದಿಗಳು ಬ್ರಹ್ಮನ ಜ್ಞಾನಕ್ಕೆ ಕಾರಣವಾಗುವುದಿಲ್ಲ ಎಂದು ''ನ ತತ್ರ ಸೂರ್ಯೋ ಭಾತಿ'' ಇತ್ಯಾದಿ ವಾಕ್ಯಗಳಲ್ಲಿ ಪ್ರಸಿದ್ಧವಾಗಿದೆ. ಹಾಗಾಗಿ ಆದಿತ್ಯಾದಿ-ಗಳನ್ನು ಜ್ಞಾನಕಾರಣವಾಗಿ ಹೊಂದಿರುವ ಜ್ಯೋತಿ ಜೀವನೇ ಆಗಬೇಕು.

**ಪ್ರಶ್ನೆ** :- ಇಲ್ಲಿರುವ (ಆತ್ಮೈವಾಸ್ಯ ಜೋತಿಃ) ಆತ್ಮ ಶಬ್ದಕ್ಕೆ ಪರಮಾತ್ಮ ಎಂದು ಅರ್ಥ. ಪರಮಾತ್ಮನನ್ನೇ ಜ್ಯೋತಿ (ಜ್ಞಾನ ಸಾಧನ)ವಾಗಿ ಹೊಂದಿದವನು ಎಂದರ್ಥ. ಪುನಃ ''ಕತಮ ಆತ್ಮಾ'' (ಈ ಆತ್ಮ ಎಂತಹವನು) ಎಂದು ಪ್ರಶ್ನೆ ಮಾಡಿದಾಗ ''ಯೋಽಯಂ ಜ್ಯೋತಿಃ'' ಎಂದು ಉತ್ತರ ಕೊಟ್ಟಿರುವುದರಿಂದ ಜ್ಯೋತಿ ಎಂದರೆ ಪರಮಾತ್ಮನೇ ಆಗಬೇಕು?

**ಪರಿಹಾರ** :- ಜೀವನಿಗೆ ಪರಮಾತ್ಮನೇ ಜ್ಯೋತಿ ಎಂದು ಹೇಳಲು ಬರುವುದಿಲ್ಲ. ಏಕೆಂದರೆ, ಪರಮಾತ್ಮನಿಗೆ ಅಸ್ತಮಯವಿಲ್ಲ. ಜಾಗ್ರದಾದಿ ಎಲ್ಲಾ ಅವಸ್ಥೆಗಳಲ್ಲೂ ಅವನೇ ಜೀವನಿಗೆ ಜ್ಯೋತಿ (ಜ್ಞಾನ ಸಾಧನ)ವಾಗಲು

ಇನ್ನು 'ಉದ್ಯತತ್ವ' ಲಿಂಗವೂ ವಿಷ್ಣುವಿನಲ್ಲಿ ಸಾವಕಾಶವಾಗಿದೆ. 'ಉತ್' ಪೂರ್ವಕ 'ಯತೀ' ಧಾತುವಿನಿಂದ ನಿಷ್ಪನ್ನವಾಗಿರುವ ಶಬ್ದ 'ಉದ್ಯತ'. ಅದರರ್ಥ ಉತ್ಕೃಷ್ಟ ಪ್ರಯತ್ನವುಳ್ಳವನು. ಈ 'ಉತ್ಕೃಷ್ಟ ಪ್ರಯತ್ನವತ್ವ' ಎಂಬ ಲಿಂಗವು ವಿಷ್ಣುವಿನಲ್ಲೂ ಇರಲು ಸಾಧ್ಯವಿದೆ. ಹಾಗಾಗಿ ಸಾವಕಾಶವಾಯಿತು. ಹೀಗೆ ವಜ್ರಶ್ರುತಿ, ಉದ್ಯತತ್ವಲಿಂಗ ಎರಡೂ ಸಾವಕಾಶವಾಯಿತು. 'ಸರ್ವಜಗತ್ಚೇಷ್ಟಕತ್ವ' ಎಂಬ ನಿರವಕಾಶವಾದ ವಿಷ್ಣುಲಿಂಗವಿದೆ. ಆದ್ದರಿಂದ ವಜ್ರ ಎಂದರೆ ವಿಷ್ಣುವೇ ಆಗಬೇಕು.

**ಅಧಿಕರಣ ಫಲ :-** ಇಲ್ಲಿ ಬಂದಿರುವ ವಜ್ರ ವಿಷ್ಣುವಿಗಿಂತ ಬೇರೆ ಎಂದಾದರೆ ಆಗ ವಜ್ರನಿಗೆ ಹೇಳಲ್ಪಟ್ಟ ಮುಕ್ತಿಹೇತುವೇದನತ್ವವೂ ವಿಷ್ಣುವಿಗಿಂತ ಬೇರೆಯದಕ್ಕೇ ಬರಬೇಕಾಗುತ್ತದೆ ಎಂಬ ಆಕ್ಷೇಪ ಹಾಗು ಅದರ ಸಮಾಧಾನ. ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ

## ॥ ಓಂ ಜ್ಯೋತಿರ್ದರ್ಶನಾತ್ ಓಂ ॥ ೧-೩-೧೧

ಹಿಂದಿನ ಅಧಿಕರಣದಲ್ಲಿ ನಿರವಕಾಶವಾದ ವಿಷ್ಣುಲಿಂಗವಿರುವುದರಿಂದ ವಜ್ರ ಶಬ್ದಕ್ಕೆ ಪ್ರಸಿದ್ಧಾರ್ಥವನ್ನು ತ್ಯಾಗ ಮಾಡಿ ವಿಷ್ಣು ಎಂಬ ಅರ್ಥ ಮಾಡಿದಂತೆ ಪ್ರಕೃತದಲ್ಲಿಯೂ ಜ್ಯೋತಿಃ ಶಬ್ದಕ್ಕೆ ''ವಿಷ್ಣುರೇವ ಜ್ಯೋತಿಃ'' ಎಂಬ ಶ್ರುತಿಯಲ್ಲಿ ಹೇಳಿದಂತೆ ವಿಷ್ಣು ಎಂಬ ಅರ್ಥ ಪ್ರಸಿದ್ಧವಾದರೂ ನಿರವಕಾಶವಾದ ಜೀವಲಿಂಗವಿರುವುದರಿಂದ ವಿಷ್ಣು ಎಂಬ ಅರ್ಥವನ್ನು ತ್ಯಾಗ ಮಾಡಿ ಜೀವ ಎಂಬ ಅರ್ಥ ಮಾಡಬೇಕು. ಎಂದು ಈ ಆಕ್ಷೇಪದ ಮೂಲಕ ಪೂರ್ವಪಕ್ಷ ಹೊರಡುತ್ತಿರುವುದರಿಂದ ಇಲ್ಲಿ 'ಆಪವಾದಿಕೀ' ಎಂಬ ಸಂಗತಿಯಿದೆ.

ಬೃಹದಾರಣ್ಯಕೋಪನಿಷತ್ತಿನ ಆರನೇ ಅಧ್ಯಾಯದಲ್ಲಿ ಬಂದಿರುವ ''ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ'' ಎಂಬ ವಾಕ್ಯದಲ್ಲಿ ಶ್ರುತವಾದ ಜ್ಯೋತಿಯು ಜೀವನೋ ಅಥವಾ ಬ್ರಹ್ಮನೋ ಎಂಬುದೇ ಸಂದೇಹ. ಜೀವನೇ ಎಂದು ಪೂರ್ವಪಕ್ಷ. ಏಕೆಂದರೆ,

೧) ಇಲ್ಲಿ ಜೀವಲಿಂಗಗಳು ಶ್ರುತವಾಗಿವೆ.

''ಸ ಸಮಾನಸ್ಸನ್ ಉಭೌ ಲೋಕಾವನುಸಂಚರತಿ''

''ಸ ವಾऽಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂಸೃಜ್ಯತೇ । ಸ ಉತ್ಕ್ರಾಮನ್ ಮ್ರಿಯಮಾಣಃ ಪಾಪ್ಮನೋ ವಿಜಹಾತಿ'' ಎಂಬ ಶ್ರುತಿಗಳಲ್ಲಿ ಕರ್ಮಾಧೀನವಾಗಿ ಲೋಕ ಸಂಚರಣವೇ ಮೊದಲಾದ ಅನೇಕ ಜೀವಲಿಂಗಗಳು ಉಕ್ತವಾಗಿವೆ.

೨) ''ಕಿಂ ಜೋತಿರಯಂ ಪುರುಷಃ'' (ಈ ಜೀವನಿಗೆ ಜ್ಞಾನಕಾರಣವಾದದ್ದು ಯಾವುದು) ಎಂಬ ಪ್ರಶ್ನೆ ಮಾಡಿದಾಗ ಅದಕ್ಕೆ ಉತ್ತರವಾಗಿ ''ಆದಿತ್ಯೇನೈವ ಜ್ಯೋತಿಷಾ ಆಸ್ತೇ'' ಎಂದು ಹೇಳಲಾಗಿದೆ. ಇಲ್ಲಿ ಕ್ರಮವಾಗಿ ಆದಿತ್ಯ, ಚಂದ್ರ, ಅಗ್ನಿ, ವಾಕ್, ಆತ್ಮ ತಾನು ಇವು ಪುರುಷನಿಗೆ ಜ್ಯೋತಿ (ಜ್ಞಾನಕಾರಣ) ಎಂದು ಹೇಳಿ, ಇವುಗಳಲ್ಲಿ ಪೂರ್ವಪೂರ್ವಜ್ಯೋತಿ ಅಸ್ತಮಯವಾದರೆ ಮುಂದೆ ಮುಂದಿನದ್ದು ಜ್ಯೋತಿಯಾಗುತ್ತದೆ ಎಂದು ಹೇಳಿದೆ. ಮುಂದೆ ''ಕತಮ ಆತ್ಮಾ'' ಎಂದು ಈ ಜ್ಯೋತಿಗಳಲ್ಲಿ ಕೊನೆಯದಾದ ಆತ್ಮಾ ಎಂಥವನು ಎಂದು ಕೇಳಿದಾಗ ''ಯೋऽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ'' ಎಂದು ಹೇಳಲಾಗಿದೆ. ಹಾಗಾಗಿ ಇಲ್ಲಿ ಹೇಳಿರುವ ಜ್ಯೋತಿಃ ಬ್ರಹ್ಮನಾಗಲು ಸಾಧ್ಯವಿಲ್ಲ ಜೀವನೇ ಆಗಬೇಕು. ಏಕೆಂದರೆ, ಈ ಜ್ಯೋತಿಗೆ ಆದಿತ್ಯಾದಿಗಳನ್ನು ಜ್ಞಾನಕಾರಣ ಎಂದು ಹೇಳಿದ್ದಾರೆ. ಆದರೆ ಆದಿತ್ಯಾದಿಗಳು ಬ್ರಹ್ಮನ ಜ್ಞಾನಕ್ಕೆ ಕಾರಣವಾಗುವುದಿಲ್ಲ ಎಂದು ''ನ ತತ್ರ ಸೂರ್ಯೋ ಭಾತಿ'' ಇತ್ಯಾದಿ ವಾಕ್ಯಗಳಲ್ಲಿ ಪ್ರಸಿದ್ಧವಾಗಿದೆ. ಹಾಗಾಗಿ ಆದಿತ್ಯಾದಿಗಳನ್ನು ಜ್ಞಾನಕಾರಣವಾಗಿ ಹೊಂದಿರುವ ಜ್ಯೋತಿ ಜೀವನೇ ಆಗಬೇಕು.

**ಪ್ರಶ್ನೆ** :- ಇಲ್ಲಿರುವ (ಆತ್ಮೈವಾಸ್ಯ ಜೋತಿಃ) ಆತ್ಮ ಶಬ್ದಕ್ಕೆ ಪರಮಾತ್ಮ ಎಂದು ಅರ್ಥ. ಪರಮಾತ್ಮನನ್ನೇ ಜ್ಯೋತಿ (ಜ್ಞಾನ ಸಾಧನ)ವಾಗಿ ಹೊಂದಿದವನು ಎಂದರ್ಥ. ಪುನಃ ''ಕತಮ ಆತ್ಮಾ'' (ಈ ಆತ್ಮ ಎಂತಹವನು) ಎಂದು ಪ್ರಶ್ನೆ ಮಾಡಿದಾಗ ''ಯೋऽಯಂ ಜ್ಯೋತಿಃ'' ಎಂದು ಉತ್ತರ ಕೊಟ್ಟಿರುವುದರಿಂದ ಜ್ಯೋತಿ ಎಂದರೆ ಪರಮಾತ್ಮನೇ ಆಗಬೇಕು?

**ಪರಿಹಾರ** :- ಜೀವನಿಗೆ ಪರಮಾತ್ಮನೇ ಜ್ಯೋತಿ ಎಂದು ಹೇಳಲು ಬರುವುದಿಲ್ಲ. ಏಕೆಂದರೆ, ಪರಮಾತ್ಮನಿಗೆ ಅಸ್ತಮಯವಿಲ್ಲ. ಜಾಗ್ರದಾದಿ ಎಲ್ಲಾ ಅವಸ್ಥೆಗಳಲ್ಲೂ ಅವನೇ ಜೀವನಿಗೆ ಜ್ಯೋತಿ (ಜ್ಞಾನ ಸಾಧನ)ವಾಗಲು

ಬರುವಾಗ ''ಆದಿತ್ಯೇನೈವ ಜೋತಿಷಾ'' ಇತ್ಯಾದಿ ಕಡೆಗಳಲ್ಲಿ ಹೇಳಿರುವ ಅವಧಾರಣ (ಏವಕಾರ) ಕೂಡುವುದಿಲ್ಲ. ಪರಮಾತ್ಮನ ಜೊತೆಗೆ ಆದಿತ್ಯಾದಿ-ಗಳೂ ಜ್ಯೋತಿ ಎಂದು ಹೇಳಬಹುದೇ ಹೊರತು ಆದಿತ್ಯಾದಿಗಳೇ ಜ್ಯೋತಿ ಎಂದು ಹೇಳಲು ಸಾಧ್ಯವಿಲ್ಲ. ಹಾಗಾಗಿ ಇಲ್ಲಿರುವ ಆತ್ಮ, ಪರಮಾತ್ಮನಲ್ಲ, ಜೀವಸ್ವರೂಪವೇ.

**ಸಿದ್ಧಾಂತ** :- ಯೋಽಯಂ ಹೃದ್ಯಂತರ್ಜೋತಿಃ ಎಂಬಲ್ಲಿರುವ ಜ್ಯೋತಿಃ ಶಬ್ದವಾಚ್ಯ ವಿಷ್ಣುವೇ. ಏಕೆಂದರೆ,

೧) ''ವಿಷ್ಣುರೇವ ಜ್ಯೋತಿಃ ವಿಷ್ಣುರೇವ ಬ್ರಹ್ಮ'' ಎಂಬ ಶ್ರುತಿಯಿಂದ ವಿಷ್ಣುವೇ ಜ್ಯೋತಿಃ ಶಬ್ದವಾಚ್ಯ ಎಂದು ಸಿದ್ಧವಾಗಿದೆ. ಹೀಗೆ ವಿಷ್ಣ್ವೇಕನಿಷ್ಠ ಎಂದು ನಿರ್ಣಯಿಸಲ್ಪಟ್ಟ ಜ್ಯೋತಿಃಶಬ್ದವು ಈ ಪ್ರಕರಣದ ಉಪಕ್ರಮದಲ್ಲಿ ''ಹೃದ್ಯಂತರ್ಜೋತಿಃ'' ಎಂಬುದಾಗಿ, ಹಾಗು ಉಪಸಂಹಾರದಲ್ಲಿ ''ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ'' ಎಂಬುದಾಗಿ ವಿಷ್ಣು ವಾಚಕ 'ಸ್ವಯಂ' ಶಬ್ದವು ಶ್ರುತವಾಗಿದೆ. ಈ ಉಪಕ್ರಮ ಮತ್ತು ಉಪಸಂಹಾರ ವಿಷ್ಣುಪರವಾದ್ದರಿಂದ ಮಧ್ಯದಲ್ಲಿರುವ ವಾಕ್ಯಗಳೂ ವಿಷ್ಣುಪರ ಎಂದು ಸಿದ್ಧವಾಗುತ್ತದೆ. ಇಲ್ಲಿ ಜೀವಲಿಂಗಗಳನ್ನು ಹೇಳಿದ್ದಾರಲ್ಲಾ? ಎಂದರೆ ಅದೂ ವಿಷ್ಣುಪರವಾಗಬಹುದು. ಹೇಗೆ? ಎಂದರೆ ಇಲ್ಲೆಲ್ಲಾ 'ಣಿಚ್' ಪ್ರತ್ಯಯವು ಅಂತರ್ಗತವಾಗಿದೆ ಎಂದು ಗ್ರಹಿಸಬೇಕು. ಆಗ ಶರೀರವನ್ನು ಹೊಂದುತ್ತಾನೆ ಎಂದರೆ ಶರೀರವನ್ನು ಹೊಂದಿಸುತ್ತಾನೆ ಎಂದರ್ಥವಾಗುತ್ತದೆ. ಆಗ ಅದು ವಿಷ್ಣುಪರವಾಗುತ್ತದೆ.

ಇನ್ನು ಲೋಕದ್ವಯ ಸಂಚಾರ ಮುಖ್ಯವಾಗಿ ವಿಷ್ಣುವಿನಲ್ಲೇ ಕೂಡುತ್ತದೆ. ವಿಷ್ಣುವೇ ಜೀವನನ್ನು ಕರೆದುಕೊಂಡು ಸ್ವತಂತ್ರವಾಗಿ ಸಂಚರಿಸುವುದರಿಂದ. ಜೀವನಿಗೆ ಪರಮಾತ್ಮಜ್ಯೋತಿಷ್ಟ್ವವನ್ನು ಹೇಳಿದರೂ 'ಆದಿತ್ಯೇನೈವ' ಎಂಬಲ್ಲಿರುವ ಅವಧಾರಣ ಕೂಡುತ್ತದೆ. ಜೀವನಿಗೆ ಜ್ಞಾನಪ್ರದವಾದ ಬಾಹ್ಯ ಜ್ಯೋತಿಗಳಲ್ಲಿ (ಜ್ಞಾನಸಾಧನಗಳಲ್ಲಿ) ಆದಿತ್ಯಾದಿಗಳೇ ಪ್ರಧಾನ ಎಂದು ಹೇಳುವುದಕ್ಕೋಸ್ಕರ ಏವಕಾರವನ್ನು ಹಾಕಿದ್ದಾರೆ ಹೊರತು ಅನ್ಯವ್ಯಾವೃತ್ತಿ-ಗೋಸ್ಕರ ಅಲ್ಲ.

**ಅಧಿಕರಣ ಫಲ :-** ''ಯೋऽಯಂ ಹೃದ್ಯಂತರ್ಜ್ಯೋತಿಃ'' ಎಂದು ಇಲ್ಲಿರುವ ಜ್ಯೋತಿಗೆ ಹೃದ್ಯಂತಸ್ಥತ್ವವನ್ನು ಹೇಳಿದ್ದಾರೆ. ಅದೇ ಹೃದ್ಯಾಹಿತತ್ವವನ್ನು 'ಜ್ಯೋತಿಃ ಚರಣಾಭಿಧಾನಾತ್' ಎಂಬಲ್ಲಿ ಬರದಿರುವ ಜ್ಯೋತಿಗೂ ಹೇಳಿದ್ದಾರೆ. ಈಗ ಈ ಜ್ಯೋತಿ ವಿಷ್ಣುವಲ್ಲ ಎಂದಾದರೆ ಹಿಂದೆ ಬಂದ ಜ್ಯೊತಿಯೂ ವಿಷ್ಣುವಾಗಲು ಸಾಧ್ಯವಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನ ಇದೇ ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತ ಫಲ.

## ॥ ಓಂ ಆಕಾಶೋऽರ್ಥಾಂತರತ್ವಾದಿ ವ್ಯಪದೇಶಾತ್ ಓಂ ॥ ೧-೩-೧೨

ಹಿಂದಿನ ಅಧಿಕರಣದಲ್ಲಿ ಬಂದ ಜ್ಯೋತಿಸ್ಸಿಗೆ ''ಬಹಿಷ್ಕುಲಾಯಾದಮೃತಶ್ಚರಿತ್ವಾ'' ಎಂಬುದಾಗಿ ಅಮೃತತ್ವವನ್ನು ಹೇಳಿದ್ದಾರೆ. ಅದೇ ಅಮೃತತ್ವವು ''ತದಮೃತಮ್'' ಎಂಬುದಾಗಿ ಆಕಾಶಕ್ಕೂ ಹೇಳಲ್ಪಟ್ಟಿದೆ. ಆಕಾಶವಾದರೋ ವಿಷ್ಣುವಿಗಿಂತ ಭಿನ್ನ. ಆದ್ದರಿಂದ ಹಿಂದೆ ಬಂದ ಜ್ಯೊತಿಯೂ ವಿಷ್ಣುವಿಗಿಂತ ಭಿನ್ನವಾದದ್ದೇ ಆಗಬೇಕು ಎಂಬ ಆಕ್ಷೇಪದಿಂದ ಈ ಅಧಿಕರಣ ಹೊರಡುತ್ತಿರುವುದರಿಂದ ಇಲ್ಲಿ 'ಆಕ್ಷೇಪಿಕೀ' ಎಂಬ ಸಂಗತಿಯಿದೆ.

ಛಾಂದೋಗ್ಯೋಪನಿಷತ್ತಿನ ಅಂತಿಮ ಖಂಡದಲ್ಲಿ ''ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಮ್'' ಎಂಬ ವಾಕ್ಯವಿದೆ. ಇಲ್ಲಿ ಆಕಾಶ ಶಬ್ದ ಶ್ರುತವಾಗಿದೆ. ಈ ಆಕಾಶವು ಪ್ರಸಿದ್ಧವಾದ ಅವ್ಯಾಕೃತಾಕಾಶವೋ ಅಥವಾ ಬ್ರಹ್ಮನೋ ಎಂಬುದೇ ಸಂದೇಹ.

ಅವ್ಯಾಕೃತಾಕಾಶವೇ ಎಂದು ಪೂರ್ವಪಕ್ಷ. ಏಕೆಂದರೆ, ಶ್ರುತಿಯಲ್ಲಿ 'ವೈ' 'ನಾಮ' ಎಂಬ ಎರಡು ಶಬ್ದಗಳು ಇವೆ. ಈ ಎರಡೂ ಶಬ್ದಗಳು ಪ್ರಸಿದ್ಧಾರ್ಥಕವಾದ ಅವ್ಯಯಗಳು. ಈ ವಾಕ್ಯದಲ್ಲಿ ಉದ್ದೇಶ್ಯವಾದದ್ದು 'ಆಕಾಶ', 'ವಿಧೇಯವಾದದ್ದು ನಾಮರೂಪಯೋರ್ನಿರ್ವಹಿತಾ' ಎಂಬುದು. 'ವೈ' 'ನಾಮ' ಎಂಬ ಎರಡು ಶಬ್ದಗಳನ್ನು ಉದ್ದೇಶ್ಯವಾಚಕವಾದ ಆಕಾಶ ಶಬ್ದದ ಜೊತೆಗೆ ಅನ್ವಯ ಮಾಡಿದರೆ ಆಗ 'ಆಕಾಶೋ ವೈ ನಾಮ' ಎಂದಾಗಿ ಪ್ರಸಿದ್ಧವಾದ ಆಕಾಶ ಎಂದರ್ಥವಾಗುತ್ತದೆ. ವಿಧೇಯಾನ್ವಯ ಮಾಡಿದಾಗ

'ಆಕಾಶೋ ನಾಮರೂಪಯೋರ್ನಿರ್ವಹಿತಾ ವೈ ನಾಮ' ಎಂದಾಗುತ್ತದೆ. ಆಗ ಆಕಾಶದ ನಾಮರೂಪನಿರ್ವೋಢೃತ್ವ (ನಾಮ ರೂಪಾತ್ಮಕವಾದ ಪ್ರಪಂಚಕ್ಕೆ ಅವಕಾಶಪ್ರದತ್ವ) ಪ್ರಸಿದ್ಧ ಎಂದಾಗುತ್ತದೆ.

ಹೀಗೆ ಎರಡು ವಿಧವಾದ ಅನ್ವಯದಲ್ಲಿಯೂ ಪ್ರಸಿದ್ಧವಾದ (ಸ್ವರೂಪೇಣ) ಆಕಾಶ ಎಂದರೆ ಅವ್ಯಾಕೃತಾಕಾಶವೇ. ನಾಮರೂಪನಿರ್ವಾಹಕವಾಗಿ ಪ್ರಸಿದ್ಧ-ವಾದ ಆಕಾಶವೂ ಅವ್ಯಾಕೃತಾಕಾಶವೇ. ಈ ಎರಡೂ ರೀತಿಯ ಪ್ರಸಿದ್ಧಿ ಈಶ್ವರನಲ್ಲಿ ಇಲ್ಲ. (ಪ್ರಸಿದ್ಧವಾದ ಆಕಾಶ ಎಂದರೂ ಅದು ಈಶ್ವರನಲ್ಲ, ನಾಮರೂಪನಿರ್ವಾಹಕತ್ವವೂ ಅವನಲ್ಲಿ ಪ್ರಸಿದ್ಧವಲ್ಲ ಎಂದರ್ಥ).

**ಸಿದ್ಧಾಂತ :-** ಇಲ್ಲಿರುವ ಆಕಾಶ ಶಬ್ದವಾಚ್ಯ ವಿಷ್ಣುವೇ. ಏಕೆಂದರೆ,

೧) ಈ ಪ್ರಕರಣದಲ್ಲಿ 'ತೇ ಯದಂತರಾ' ಎಂಬ ವಾಕ್ಯವಿದೆ. ಅದರರ್ಥ ನಾಮರೂಪಗಳಿಲ್ಲದೇ ಯಾವುದು ಇದೆಯೋ ಎಂದು. ಇದರಿಂದ 'ಅನಾಮತ್ವ' ಎಂಬ ಲಿಂಗ ಹೇಳಿದಂತಾಯಿತು. ಅನಾಮತ್ವ ಎಂದರೆ, ಶಬ್ದಗಳಿಂದ ಸಂಪೂರ್ಣವಾಗಿ ತಿಳಿಯಲ್ಪಡದೇ ಇರುವಿಕೆ ಎಂದರ್ಥ. ಈ ಲಿಂಗವು 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯಿಂದಲೂ ''ಅನಾಮಾ ಸೋಽಪ್ರಸಿದ್ಧತ್ವಾತ್'' ಎಂಬ ಸ್ಮೃತಿಯಿಂದಲೂ ವಿಷ್ಣ್ವೇಕನಿಷ್ಠ - ಎಂದು ಸಿದ್ಧವಾಗುತ್ತಿದೆ. ಅದೇ ರೀತಿ 'ಪ್ರಾಕೃತರೂಪರಾಹಿತ್ಯ' ಎಂಬ ಲಿಂಗವೂ ಉಕ್ತವಾಗಿದೆ. ಇಲ್ಲಿ ನಿರ್ವಾಹ್ಯತಯಾ ಪ್ರಕೃತವಾದದ್ದು (ಆಕಾಶವು ಯಾವ ರೂಪಕ್ಕೆ ನಿರ್ವಾಹಕವಾಗಿದೆಯೋ ಅದು) ಪ್ರಾಕೃತರೂಪವೇ ಆದ್ದರಿಂದ 'ತೇ ಯದಂತರಾ' ಎಂಬಲ್ಲಿ ಪ್ರಾಕೃತರೂಪರಾಹಿತ್ಯವನ್ನೇ ಇಟ್ಟುಕೊಳ್ಳಬೇಕು. ಇದೂ ಕೂಡ ''ಅರೂಪಮಸ್ಪರ್ಶಂ'' ಎಂಬ ಶ್ರುತಿಯಿಂದ 'ಅರೂಪೋ ಭೂತವರ್ಜನಾತ್' ಎಂಬ ಸ್ಮೃತಿಯಿಂದ ವಿಷ್ಣ್ವೇಕನಿಷ್ಠ ಎಂದು ಸಿದ್ಧವಾಗಿದೆ.

೨) ''ಆಕಾಶೋ ವೈ ನಾಮ'' ಎಂಬ ವಾಕ್ಯದಲ್ಲೇ 'ತದ್ಬ್ರಹ್ಮ' ಎಂದು ಹೇಳಲಾಗಿದೆ. ಬ್ರಹ್ಮ ಶಬ್ದ ವಿಷ್ಣುಪರ ಎಂದು ಸಿದ್ಧವಾಗಿದೆ. ಹಾಗಾಗಿ ಆಕಾಶವೂ ವಿಷ್ಣುವೇ ಆಗಬೇಕು.

೩) ಅದೇ ವಾಕ್ಯದಲ್ಲಿ 'ತದಮೃತಮ್' ಎಂದಿದೆ. ಈ ಅಮೃತತ್ವವೂ ಕೂಡ ವಿಷ್ಣುವಿನದೇ ಧರ್ಮ.

'ವೈ''ನಾಮ' ಎಂಬ ಪ್ರಸಿದ್ಧಾರ್ಥಕವಾದ ನಿಪಾತಗಳಿರುವುದೂ ಬಾಧಕವಲ್ಲ. ಏಕೆಂದರೆ ''ಆಕಾಶ ಇತಿ ಹೋವಾಚ'' ಎಂಬ ಶ್ರುತಿಯಲ್ಲಿ ಆಕಾಶ ಶಬ್ದವು ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ (ರೂಢವಾಗಿದೆ). ''ಏಕೋ ದಾಧಾರ ಭುವನಾನಿ ವಿಶ್ವ'' ಎಂಬ ಶ್ರುತಿಯಲ್ಲಿ ವಿಷ್ಣುವಿಗೆ 'ನಾಮರೂಪ-ನಿರ್ವಾಹಕತ್ವ' ಪ್ರಸಿದ್ಧವಾಗಿದೆ. ಇವೆರಡೂ ವೇದಪ್ರಸಿದ್ಧಿ. ವೇದವಾಕ್ಯಗಳಿಗೆ ಅರ್ಥ ಮಾಡುವಾಗ ವೇದಪ್ರಸಿದ್ಧಿಯು ಅಂತರಂಗ. ಹಾಗಾಗಿ ಅದೇ ಗ್ರಾಹ್ಯ.

**ಅಧಿಕರಣ ಫಲ :-** ಇಲ್ಲಿ ಆಕಾಶಕ್ಕೆ ನಾಮರೂಪನಿರ್ವೋಢೃತ್ವ ಹೇಳಲ್ಪಟ್ಟಿದೆ. ನಾಮರೂಪನಿರ್ವೋಢೃತ್ವ ಎಂದರೆ ಸಾರ್ವಾಧಾರತ್ವ. ಈ ಸರ್ವಾಧಾರತ್ವ ಎಂಬ ದ್ಯುಭ್ವಾದ್ಯಾಯನತ್ವ ಹಿಂದೆ ದ್ಯುಭ್ವಾದ್ಯಧಿಕರಣದಲ್ಲಿ ವಿಷ್ಣುವಿಗೆ ಹೇಳಲ್ಪಟ್ಟಿದೆ. ಈಗ ಇಲ್ಲಿರುವ ಆಕಾಶ ವಿಷ್ಣುವಲ್ಲ ಎಂದಾದರೆ ದ್ಯುಭ್ವಾ-ದ್ಯಾಯತನನೂ ವಿಷ್ಣುವಲ್ಲ ಎಂದಾಗಬೇಕಾಗುತ್ತದೆ ಎಂಬ ಆಕ್ಷೇಪ ಹಾಗು ಅದರ ಸಮಾಧಾನ. ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

**ಪ್ರಶ್ನೆ :-** 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿಯೇ ಆಕಾಶ ಶಬ್ದವನ್ನು ವಿಷ್ಣುವಿ-ನಲ್ಲಿ ಸಮನ್ವಯ ಮಾಡಲಾಗಿದೆ. ಪುನಃ ಈ ಅಧಿಕರಣದಲ್ಲಿ ಏಕೆ ಆಕಾಶ ಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆ?

**ಉತ್ತರ :-** ಹಿಂದೆ ಆಕಾಶ ಶಬ್ದವು ಅನ್ಯತ್ರ ಪ್ರಸಿದ್ಧ ಎಂದು ಪ್ರಸಕ್ತವಾದಾಗ ಪರೋವರೀಯಸ್ತ್ವವೇ ಮೊದಲಾದ ನಿರವಕಾಶ ವಿಷ್ಣು ಲಿಂಗಗಳಿರುವುದರಿಂದ ಲೋಕರೂಢಿಯನ್ನು ತ್ಯಾಗ ಮಾಡಬೇಕು ಎಂದು ಹೇಳಿದ್ದರು. ಈಗ 'ವೈ' 'ನಾಮ' ಎಂಬ ಪ್ರಸಿದ್ಧಾರ್ಥಕವಾದ ಶಬ್ದಗಳಿರುವುದರಿಂದ 'ಆಕಾಶ' ಎಂದರೆ ಪ್ರಸಿದ್ಧಾಕಾಶವೂ ಆಗಬಹುದು ಎಂಬ ವಿಶೇಷ ಶಂಕಾ ಮೂಲಕ ಉಭಯತ್ರ-ಪ್ರಸಿದ್ಧತ್ವೇನ ಪ್ರಸಕ್ತವಾದಾಗ ವಿಷ್ಣುಪರತ್ವವನ್ನು ಹೇಳುತ್ತಿದ್ದಾರೆ. ಹಾಗಾಗಿ ಪುನರುಕ್ತಿದೋಷವಿಲ್ಲ.

## ॥ ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ ॥ ೧-೩-೧೩

ಹಿಂದಿನ ಅಧಿಕರಣದಲ್ಲಿ, ಆಕಾಶ ಶಬ್ದಕ್ಕೆ ವಿಷ್ಣು ಎಂಬ ಅರ್ಥವು ವೇದದಲ್ಲಿ ಪ್ರಸಿದ್ಧವಾಗಿದೆ. ವೇದ ಪ್ರಸಿದ್ಧಿಯು ಅಂತರಂಗ. ಹಾಗಾಗಿ ಆಕಾಶ ಎಂದರೆ ವಿಷ್ಣು ಎಂದು ಹೇಳಿದ್ದು ಸರಿಯಾದರೂ ಈ ಅಧಿಕರಣದಲ್ಲಿ ಪ್ರಕೃತವಾದ 'ಸ್ವಪ್ನದ್ರಷ್ಟೃತ್ವ' ಎಂಬುದು ವಿಷ್ಣು ಪರವಾಗಿ ವೇದದಲ್ಲಿ ಪ್ರಸಿದ್ಧವಾಗಿಲ್ಲ. ಹಾಗಾಗಿ ಈ ಸ್ವಪ್ನದ್ರಷ್ಟಾ ವಿಷ್ಣುವಿಗಿಂತ ಬೇರೆ ಆಗಬೇಕು. ಅಥವಾ, ಹಿಂದೆ ಪ್ರಸ್ತುತವಾದ ಆಕಾಶ ಜಡ. ಅದರ ವಿಷಯದಲ್ಲಿ ಶ್ರುತವಾದ ಈಶ್ವರಲಿಂಗ-ಗಳನ್ನು ಜಡವಾದ ಆಕಾಶದಲ್ಲಿ, ಈಶ್ವರನಿಂದ ಅಭೇದವನ್ನು ಒಪ್ಪಿ ತರಲು ಸಾಧ್ಯವಿಲ್ಲ. ಚೈತನ್ಯಕ್ಕೂ ಜಡಕ್ಕೂ ಐಕ್ಯಕೂಡುವುದಿಲ್ಲವಾದ್ದರಿಂದ. ಆದರೆ ಈ ಅಧಿಕರಣದಲ್ಲಿ ಪ್ರಕೃತನಾದ ಜೀವನ ವಿಷಯದಲ್ಲಿ ಉಕ್ತವಾದ ಈಶ್ವರಲಿಂಗ-ಗಳನ್ನು, ಅಭೇದವನ್ನು ಒಪ್ಪಿ ಜೀವನಲ್ಲಿ ತರಬಹುದು. ಜೀವ ಈಶ್ವರ ಇಬ್ಬರೂ ಚೇತನರಾದ್ದರಿಂದ ಐಕ್ಯ ಕೂಡುತ್ತದೆ.

ಹೀಗೆ ಎರಡು ರೀತಿಯಿಂದ ಪೂರ್ವವೈಷಮ್ಯವಿದೆ ಎಂದು ಶಂಕಾ ಮಾಡುತ್ತಿರುವುದರಿಂದ ಇಲ್ಲಿ ಪ್ರತ್ಯುದಾಹರಣ ಎಂಬ ಸಂಗತಿಯಿದೆ. ಬೃಹದಾರಣ್ಯಕದ ಎಂಟನೇ ಅಧ್ಯಾಯದಲ್ಲಿ ''ಸ ವಾ ಏಷ ಏತಸ್ಮಿನ್ ಸಂಪ್ರಸಾದೇ.... ಸ್ವಪ್ನಾಯ್ಯೆವ ಸ ಯತ್ತತ್ರ ಕಿಂಚಿತ್ ಪಶ್ಯತಿ... ಅಸಂಗೋ-ಹ್ಯಯಂ ಪುರುಷಃ'' ಎಂಬ ವಾಕ್ಯವಿದೆ. ಇಲ್ಲಿ ಶ್ರುತನಾದ ಸ್ವಪ್ನಾದಿದ್ರಷ್ಟಾ ಜೀವನೋ ಈಶ್ವರನೋ ಎಂಬುದೇ ಸಂದೇಹ. ಸ್ವಪ್ನಾದಿದ್ರಷ್ಟೃತ್ವ ಜೀವನಲ್ಲೇ ಪ್ರಸಿದ್ಧವಾದ್ದರಿಂದ ಜೀವನೇ ಎಂದೂ ಪೂರ್ವಪಕ್ಷ. ಏಕೆಂದರೆ,

೧) ವೇದ ಪ್ರಸಿದ್ಧಿಯಿಲ್ಲದಿದ್ದಾಗ ಲೋಕಪ್ರಸಿದ್ಧಿಯನ್ನೇ ವೇದದಲ್ಲಿ ಗ್ರಹಿಸಬೇಕು. ಸ್ವಪ್ನಾದಿದ್ರಷ್ಟೃತ್ವ ಈಶ್ವರನಲ್ಲಿದೆ ಎಂದು ವೇದದಲ್ಲಿ ಪ್ರಸಿದ್ಧ-ವಾಗಿಲ್ಲ. ಹಾಗಾಗಿ ಲೋಕಪ್ರಸಿದ್ಧಿಯನ್ನೇ ಆಶ್ರಯಿಸಿ ಜೀವನ ಧರ್ಮ ಎಂಬರ್ಥ ಮಾಡಬೇಕು.

೨) ಈಶ್ವರನಿಗೆ ಶರೀರವಿಲ್ಲವಾದ್ದರಿಂದ ಅವನು ಸ್ವಪ್ನಾದಿದ್ರಷ್ಟಾ ಆಗಲು ಸಾಧ್ಯವಿಲ್ಲ.

**ಪ್ರಶ್ನೆ :-** ಸ್ವಪ್ನಾದಿ ದ್ರಷ್ಟೃವಿಗೆ ಅಸಂಗತ್ವವನ್ನು ಹೇಳಿದ್ದಾರೆ ಇದು ಬ್ರಹ್ಮಲಿಂಗ. ಹಾಗಾಗಿ ಜೀವ ಎಂದರ್ಥ ಸರಿಯಲ್ಲ?

**ಪರಿಹಾರ :-** ಅಸಂಗತ್ವ ಬ್ರಹ್ಮಲಿಂಗವಾದರೂ ಜೀವಬ್ರಹ್ಮರಿಗೆ ಅಭೇದ-ವಿರುವುದರಿಂದ ಜೀವನಲ್ಲೂ ಅಸಂಗತ್ವ ಬರಬಹುದು.

**ಪ್ರಶ್ನೆ :-** ಸ್ವಪ್ನಾದಿದ್ರಷ್ಟಾ ಜೀವ ಎಂದು ಒಪ್ಪಿ ಅಸಂಗತ್ವ - ಎಂಬ ಬ್ರಹ್ಮಲಿಂಗವನ್ನು ಅಭೇದ ಒಪ್ಪಿ ಜೀವನಲ್ಲಿ ಕೂಡಿಸುವುದರ ಬದಲು ಸ್ವಪ್ನಾದಿ-ದ್ರಷ್ಟೃತ್ವ ಎಂಬ ಜೀವನ ಧರ್ಮವನ್ನೇ ಅಭೇದ ಒಪ್ಪಿ ಬ್ರಹ್ಮನಲ್ಲಿ ಏಕೆ ಹೇಳಬಾರದು?

**ಪರಿಹಾರ :-** ಶುದ್ಧ ಬ್ರಹ್ಮನ ಧರ್ಮವನ್ನು ಅಭೇದ ಒಪ್ಪಿ ಜೀವನಲ್ಲಿ ಹೇಳಬಹುದು. ಆದರೆ ಔಪಾಧಿಕನಾದ ಜೀವನ ಧರ್ಮವನ್ನು ಶುದ್ಧನಲ್ಲಿ ಹೇಳಲು ಸಾಧ್ಯವಿಲ್ಲ.

ಇನ್ನು ಸಿದ್ಧಾಂತಿಯು ಜೀವೇಶ್ವರರಿಗೆ ಅಭೇದವನ್ನು ಒಪ್ಪಿ ಜೀವನ ಧರ್ಮ-ವನ್ನು ಈಶ್ವರನಲ್ಲಿ ಹೇಳಲು ಸಾಧ್ಯವೂ ಇಲ್ಲ. ಏಕೆಂದರೆ, ಜಿಜ್ಞಾಸಾಸೂತ್ರದಲ್ಲೇ ಸಿದ್ಧಾಂತಿಯು ಜೀವೇಶ್ವರರಿಗೆ ಭೇದವನ್ನು ಉಪಪಾದನೆ ಮಾಡಿರುವುದರಿಂದ.

**ಸಿದ್ಧಾಂತ :-** ಸ್ವಪ್ನಾದಿದ್ರಷ್ಟಾ ಈಶ್ವರನೇ ಜೀವನಲ್ಲ. ಏಕೆಂದರೆ,

೧) ''ಅಸಂಗೋಹ್ಯಯಂ ಪುರುಷಃ'' ಎಂಬುದಾಗಿ ಅಸಂಗತ್ವ ಎಂಬ ಲಿಂಗ ಶ್ರುತವಾಗಿದೆ. ಈ ಲಿಂಗವಾದರೋ ''ಅಸಂಗಮಸ್ಪರ್ಶಂ'' ಇತ್ಯಾದಿ ಪ್ರಮಾಣಗಳಿಂದ ಈಶ್ವರನದ್ದೇ ಧರ್ಮ ಎಂದು ಸಿದ್ಧವಾಗಿದೆ.

''ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ'' ಎಂದು ಮುಂದೆ ಮೂರನೇ ಅಧ್ಯಾಯದಲ್ಲಿ ಸ್ವಾಪ್ನ ಪದಾರ್ಥಗಳಿಗೆ ಸತ್ಯತ್ವವನ್ನು ಉಪಪಾದನೆ ಮಾಡುತ್ತಾರೆ. ಈಶ್ವರನು ''ಯಃ ಸರ್ವಜ್ಞಃ'' ಎಂಬ ಶ್ರುತಿಯಿಂದ ಸರ್ವಜ್ಞ ಎಂದು ಸಿದ್ಧನಾಗಿದ್ದಾನೆ. ಈ ಎರಡು ಕಾರಣಗಳಿಂದ ಸ್ವಪ್ನಾದಿದ್ರಷ್ಟೃತ್ವ ಚಿತ್ ಶರೀರ ಉಳ್ಳ ಈಶ್ವರನಲ್ಲೇ ಮುಖ್ಯವಾಗಿ ಬರುತ್ತದೆ. (..... ಸ್ವಾಪ್ನ ಪದಾರ್ಥಗಳು. ಮಿಥ್ಯಾ ಆದ್ದರಿಂದ ಅದರ ಜ್ಞಾನ ಈಶ್ವರನಿಗೆ ಒಪ್ಪಲು

ಸಾಧ್ಯವಿಲ್ಲ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಸ್ವಾಪ್ನಪದಾರ್ಥಗಳು ಸತ್ಯವಾದ್ದ-ರಿಂದ ಸತ್ಯವಾದ ಸ್ವಾಪ್ನಪದಾರ್ಥಗಳ ಜ್ಞಾನ ಈಶ್ವರನಿಗಿಲ್ಲ ಎಂದರೆ ಸರ್ವಜ್ಞತ್ವಕ್ಕೆ ಭಂಗ ಬರುತ್ತದೆ. ಸರ್ವಜ್ಞತ್ವ ಶ್ರುತಿಸಿದ್ಧವಾಗಿದೆ. ಹಾಗಾಗಿ ಎಂದರ್ಥ)

೩) ಜೀವೇಶ್ವರರಿಗೆ ಅಭೇದವನ್ನು ಹೇಳಿದ್ದು ತಪ್ಪು. ಏಕೆಂದರೆ ''ಪ್ರಾಜ್ಞೇನಾ-ತ್ಮನಾ ಸಂಪರಿಷ್ವಕ್ತಃ'' ''ಪ್ರಾಜ್ಞೇನಾತ್ಮನಾ ಅನ್ವಾರೂಢಃ'' ಎಂದು ಸುಷುಪ್ತಿ-ಉತ್ಕ್ರಾಂತಿ ಪ್ರಕರಣಗಳಲ್ಲಿ ಜೀವೇಶ್ವರರಿಗೆ ಭೇದವೇ ಉಕ್ತವಾಗಿದೆ.

೪) ಭೇದವು ವ್ಯಾವಹಾರಿಕ ಎಂದೂ ಹೇಳಲು ಸಾಧ್ಯವಿಲ್ಲ. ಏಕೆಂದರೆ, ''ಸ್ವಾಪ್ಯಯಸಂಪತ್ತ್ಯೋಃ'' ಎಂಬಲ್ಲಿ ಸುಷುಪ್ತಿ ಪ್ರಕರಣವು ಮೋಕ್ಷಪರವೂ ಆಗಿದೆ ಎಂದು ಹೇಳಲಾಗಿದೆ. ಸುಷುಪ್ತಿಯಲ್ಲಿ ಭೇದವನ್ನು ಹೇಳಿದ್ದರಿಂದ ಮೋಕ್ಷದಲ್ಲೂ ಹೇಳಿದಂತಾಯಿತು. ಮೋಕ್ಷದಲ್ಲಿರುವ ಭೇದ ವ್ಯಾವಹಾರಿಕ-ವಾಗಲು ಸಾಧ್ಯವಿಲ್ಲ. ಪಾರಮಾರ್ಥಿಕವೇ ಆಗಬೇಕು. ಆದ್ದರಿಂದ ಸ್ವಪ್ನಾದಿ-ದ್ರಷ್ಟಾ ವಿಷ್ಣುವೇ.

**ಅಧಿಕರಣ ಫಲ :-** ಇಲ್ಲಿ ಸ್ವಪ್ನಾದಿದ್ರಷ್ಟೃವಿಗೆ ಅಸಂಗತ್ವವನ್ನು ಹೇಳಿದ್ದಾರೆ. ಸ್ವಪ್ನಾದಿದ್ರಷ್ಟಾ ವಿಷ್ಣುವಿಗಿಂತ ಅನ್ಯನಾದರೆ ಅಸಂಗತ್ವವೂ ಅನ್ಯನಿಗೇ ಎಂದಾಗಿ ಅಕ್ಷರಾಧಿಕರಣದಲ್ಲಿ ಹೇಳಲ್ಪಟ್ಟ ಅಸಂಗತ್ವವೂ ವಿಷ್ಣುವಿಗೆ ಕೂಡುವುದಿಲ್ಲ ಎಂಬ ಆಕ್ಷೇಪ ಹಾಗು ಸಮಾಧಾನ ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಪತ್ಯಾದಿಶಬ್ದೇಭ್ಯಃ ಓಂ ॥ ೧-೩-೧೪

''ಅಸಂಗೋ ನ ಹಿ ಸಜ್ಜತೇ'' ಎಂಬ ವಾಕ್ಯ ಬೃಹದಾರಣ್ಯಕದಲ್ಲಿದೆ. ಇಲ್ಲಿ ಹೇಳಲ್ಪಟ್ಟ 'ಅಸಂಗ' ವಿಷ್ಣುವಲ್ಲ ಎಂದಾದರೆ ಹಿಂದಿನ ಅಧಿಕರಣದಲ್ಲಿ ಬಂದ ಅಸಂಗತ್ವವುಳ್ಳವನೂ ಅನ್ಯನೇ ಆಗಬೇಕು ಎಂಬ ಆಕ್ಷೇಪಪೂರ್ವಕವಾಗಿ ಈ ಅಧಿಕರಣ ಪ್ರವೃತ್ತವಾದ್ದರಿಂದ ಇಲ್ಲಿ 'ಆಕ್ಷೇಪಿಕೀ' ಎಂಬ ಸಂಗತಿಯಿದೆ.

ಬೃಹದಾರಣ್ಯಕದ ಆರನೇ ಅಧ್ಯಾಯದಲ್ಲಿ ''ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ'' ಎಂಬ ವಾಕ್ಯವಿದೆ. ಇಲ್ಲಿ ಶ್ರುತನಾದ 'ಬ್ರಾಹ್ಮಣ' ವಿರಿಂಚನೋ

ವಿಷ್ಣುವೋ ಎಂಬುದೇ ಸಂದೇಹ. ಇಲ್ಲಿ ಹೇಳಲ್ಪಟ್ಟ 'ಬ್ರಾಹ್ಮಣ' ವಿರಿಂಚನೇ ಎಂದು ಪೂರ್ವಪಕ್ಷ. ಏಕೆಂದರೆ,

೧) '' ಸ ವಾ ಏಷ ಮಹಾನ್ ಅಜಃ'' ಎಂಬುದಾಗಿ ಇಲ್ಲಿ 'ಅಜ' ಶಬ್ದ ಶ್ರುತವಾಗಿದೆ. ಈ ಅಜ ಶಬ್ದವು ವಿರಿಂಚನಲ್ಲಿ ರೂಢವಾಗಿದೆ. ಜೊತೆಗೆ 'ಅ'ಕಾರವಾಚ್ಯನಾದ ಈಶ್ವರನಿಂದ ಹುಟ್ಟಿದವನು ಎಂಬ ಯೋಗವೃತ್ತಿ-ಯಿಂದಲೂ 'ಅಜ' ಶಬ್ದ ವಿರಿಂಚಿಪರವಾಗಿದೆ.

**ಪ್ರಶ್ನೆ** :- ಅಜ ಶಬ್ದಕ್ಕೆ ಚತುರ್ಮುಖನಲ್ಲಿ ಹೇಗೆ ರೂಢಿಯೋಗಗಳಿವೆಯೋ ಅದೇ ರೀತಿ ವಿಷ್ಣುವಿನಲ್ಲೂ ಇದೆ. 'ತಸ್ಮಾದಹಮಜಃ ಸ್ಮೃತಃ' ಎಂಬ ಭಾರತ-ವಾಕ್ಯದಲ್ಲಿ ಅಜ ಶಬ್ದವು ವಿಷ್ಣು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಜೊತೆಗೆ 'ನ ಜಾಯತೇ' (ಹುಟ್ಟುವುದಿಲ್ಲವಾದ್ದರಿಂದ) ಎಂಬ ಯೋಗದಿಂದಲೂ 'ಅಜ' ಎಂದರೆ ವಿಷ್ಣು. ಹಾಗಾಗಿ ಅಜ ಶಬ್ದ ವಾಚ್ಯ ವಿರಿಂಚನೇ ಎಂಬುದು ಹೇಗೆ?

**ಪರಿಹಾರ** :- ನಿಜ, ಅಜ ಶಬ್ದಕ್ಕೆ ವಿಷ್ಣುವಿನಲ್ಲಿ ಯೋಗರೂಢಿಗಳಿವೆ. ಆದರೂ ಈ ಪ್ರಕರಣದಲ್ಲಿ 'ಬ್ರಾಹ್ಮಣ' ಶಬ್ದ ಶ್ರುತವಾಗಿದೆ. ಬ್ರಾಹ್ಮಣ ಶಬ್ದವು ವಿಪ್ರತ್ವಜಾತಿವಾಚಕವಾಗಿದೆ. ಈ ಬ್ರಾಹ್ಮಣ ಶಬ್ದ ವಿಷ್ಣುಪರವಾಗಲು ಸಾಧ್ಯವಿಲ್ಲ. ವಿಷ್ಣುವು ವರ್ಣ (ಜಾತಿ) ಅತೀತನಾದ್ದರಿಂದ. ಇಂತಹ ಬ್ರಾಹ್ಮಣತ್ವ ಜಾತಿವಾಚಕವಾದ ಬ್ರಾಹ್ಮಣಶಬ್ದ ಇರುವುದರಿಂದ ಇಲ್ಲಿ ಹೇಳಲ್ಪಟ್ಟ 'ಅಜ' ಚತುರ್ಮುಖನೇ ಆಗಬೇಕು.

''ಮಹಾನಜಃ'' ಎಂಬುದಾಗಿ 'ಮಹತ್' ಶಬ್ದವೂ ಶ್ರುತವಾಗಿದೆ. ಮಹತ್ ಶಬ್ದಕ್ಕೆ ಮಹತ್ತತ್ವಾಭಿಮಾನಿ ಎಂದರ್ಥ. ಅಭಿಮಾನ್ಯಧಿಕರಣ ನ್ಯಾಯದಿಂದ ಈ ಶಬ್ದ ಅಭಿಮಾನಿಪರವಾಗಿದೆ. ಮಹತ್ತತ್ವಾಭಿಮಾನೀ ಚತುರ್ಮುಖನೇ. ಹಾಗಾಗಿ ಅದರ ಜೊತೆ ಇರುವ 'ಅಜ' ಶಬ್ದವೂ ಚತುರ್ಮುಖ ಪರವೇ ಆಗಬೇಕು.

**ಪ್ರಶ್ನೆ** :- ಬ್ರಾಹ್ಮಣ ಶಬ್ದ ಸಾಹಿತ್ಯವಿರುವುದರಿಂದ ಅಜ ಶಬ್ದ ವಾಚ್ಯ ಚತುರ್ಮುಖ ಎಂದಾದರೆ, ಆತ್ಮ ಶಬ್ದ ಸಾಹಿತ್ಯವಿರುವುದರಿಂದ ಅಜ ಶಬ್ದ ವಾಚ್ಯ ವಿಷ್ಣು ಏಕೆ ಆಗಬಾರದು. ಆತ್ಮ ಶಬ್ದ ವಿಷ್ಣು ಪರತ್ವೇನ ಸಿದ್ಧವಾಗಿರುವುದರಿಂದ?

ಪರಿಹಾರ - ''ಆತ್ಮಾ ವಿರಿಂಚಃ ಸುಮನಾ'' ''ಬುದ್ಧೇರಾತ್ಮಾ ಮಹಾನ್ ಪರಃ'' ಇತ್ಯಾದಿ ಕಡೆಗಳಲ್ಲಿ ಆತ್ಮ ಶಬ್ದವು ವಿರಿಂಚ ಎಂಬರ್ಥದಲ್ಲಿ ಪ್ರಯುಕ್ತ-ವಾಗಿದೆ. ಹಾಗಾಗಿ ಆತ್ಮ ಶಬ್ದ ವಿರಿಂಚನಲ್ಲಿ ರೂಢವಾಗಿದೆ. ಆದ್ದರಿಂದ ಆತ್ಮ ಶಬ್ದಸಾಹಿತ್ಯವು ವಿಷ್ಣುತ್ವಸಾಧಕವಾಗುವುದಿಲ್ಲ.

ಅಜ ಶ್ರುತಿ ಹಾಗು ಬ್ರಹ್ಮಲಿಂಗ ಇವೆರಡಕ್ಕೂ ಬಾಧ ಬರದೇ ಇರಬೇಕಾದರೆ ಬ್ರಹ್ಮ ವಿರಿಂಚಿಗಳಿಗೆ ಅಭೇದವನ್ನು ಒಪ್ಪಿ ಬ್ರಹ್ಮಲಿಂಗಗಳನ್ನು ವಿರಿಂಚನಲ್ಲಿ ತರಬೇಕು. ಇದೇ ಕ್ರಮವನ್ನು ಹಿಂದಿನ ಅಧಿಕರಣದ ಪೂರ್ವಪಕ್ಷದಲ್ಲೂ ಅನುಸರಿಸಲಾಗಿದೆ.

**ಪ್ರಶ್ನೆ** :- ಅಜ ಶ್ರುತಿ ವಿರಿಂಚಪರ. ಸರ್ವಸ್ಯ ವಶೀ ಎಂಬ ಬ್ರಹ್ಮಲಿಂಗ ವಿಷ್ಣುಪರ ಎಂದೇಕೆ ಹೇಳಬಾರದು? ಆಗ ಮುಖ್ಯತ್ವವನ್ನೇ ನಿರ್ವಾಹ ಮಾಡಿ-ದಂತಾಗುತ್ತದೆ.

**ಪರಿಹಾರ** :- ''ಸ್ಥಿತ್ಯಾದಯೇ ಹರಿವಿರಿಂಚಹರೇತಿ ಸಂಜ್ಞಾಃ'' (ಸೃಷ್ಟಿ ಸ್ಥಿತಿ ಲಯಕ್ಕಾಗಿ ಬ್ರಹ್ಮನೇ ಹರಿ, ವಿರಿಂಚ, ಹರ ಎಂಬ ಹೆಸರನ್ನು ಪಡೆಯುತ್ತಾನೆ) ಎಂಬ ವಾಕ್ಯದಿಂದ ಬ್ರಹ್ಮ ವಿರಿಂಚಿಗಳಿಗೆ ಅಭೇದ ಸಿದ್ಧವಾಗಿದೆ. ಈ ಅಭೇದವನ್ನು ಒಪ್ಪಿ ಏಕವಾಕ್ಯತ್ವ (ಸಮಾನವಿಷಯತ್ವ)ವನ್ನು ಹೇಳುವುದೇ ನ್ಯಾಯ. ಅದನ್ನು ಬಿಟ್ಟು ವಾಕ್ಯಭೇದದಿಂದ ಉಭಯಪರತ್ವವನ್ನು ಕಲ್ಪನೆ-ಮಾಡುವುದು ಉಚಿತವಲ್ಲ. ('ಗಂಗಾಯಾಂ ಘೋಷಃ' ಎಂಬ ವಾಕ್ಯದಲ್ಲಿ ಗಂಗಾಶಬ್ದಕ್ಕೆ ಗಂಗಾತೀರ ಎಂಬ ಅಮುಖ್ಯಾರ್ಥವನ್ನು ಒಪ್ಪಿ ಏಕವಾಕ್ಯತ್ವವನ್ನು ಹೇಳುವುದೇ ಉಚಿತ. ಅದನ್ನು ಬಿಟ್ಟು ಮುಖ್ಯಾರ್ಥವನ್ನೇ ಆಶ್ರಯಿಸಬೇಕು ಎಂಬ ನಿರ್ಬಂಧದಿಂದ ಗಂಗಾ ಶಬ್ದಕ್ಕೆ ಪ್ರವಾಹ ಎಂಬರ್ಥವನ್ನೇ ಇಟ್ಟು-ಕೊಂಡು 'ಗಂಗಾಯಾಂ ಮತ್ಸ್ಯಾಃ ತೀರೇ ಘೋಷಃ' ಎಂದು ವಾಕ್ಯಭೇದವನ್ನು ಕಲ್ಪನೇ ಮಾಡುವುದು ಉಚಿತವಲ್ಲ. ಅದರಂತೆ ಇಲ್ಲಿಯೂ ಅಭೇದವನ್ನು ಒಪ್ಪಿದಾಗ ಬ್ರಹ್ಮಲಿಂಗಗಳು ವಿರಿಂಚನಲ್ಲಿ ಅಮುಖ್ಯವಾಗಿ ಕೂಡುತ್ತವೆ. ಬ್ರಹ್ಮನಲ್ಲೇ ಅವು ಮುಖ್ಯವಾಗಿರುವುದು. ಹಾಗಿದ್ದರೂ ಏಕವಾಕ್ಯತ್ವವನ್ನು ನಿರ್ವಾಹ ಮಾಡುವುದಕ್ಕಾಗಿ ಅಮುಖ್ಯಾರ್ಥವನ್ನು ಒಪ್ಪುವುದು ತಪ್ಪಲ್ಲ )

**ಸಿದ್ಧಾಂತ** :- ಬ್ರಾಹ್ಮಣ ಶಬ್ದ ವಾಚ್ಯ ವಿಷ್ಣುವೇ ಏಕೆಂದರೆ,

೧) ''ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ'' ಎಂಬಲ್ಲಿ ಸರ್ವವಶಿತ್ವವೇ ಮೊದಲಾದ ಲಿಂಗಗಳು ಹೇಳಲ್ಪಟ್ಟಿವೆ. ಈ ಎಲ್ಲಾ ಲಿಂಗಗಳು ವಿಷ್ಣುಪರ ಎಂಬುದು ''ಉತಾಮೃತತ್ವಸ್ಯೇಶಾನಃ'' ''ಸಪ್ತಾರ್ಧಗರ್ಭಾ'' ಮೊದಲಾದ ಶ್ರುತಿಗಳಿಂದ ಸಿದ್ಧವಾಗಿದೆ.

೨) ಬ್ರಾಹ್ಮಣ ಶಬ್ದವೂ ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಬ್ರಹ್ಮಣಾ = ವೇದದಿಂದ, ಅಣ್ಯತೇ, ಗಮ್ಯತೇ = ತಿಳಿಯಲ್ಪಡುತ್ತಾನೆ. ಆದ್ದರಿಂದ 'ಬ್ರಾಹ್ಮಣ' ವಿಷ್ಣುವೇ. 'ಅಜ' ಶಬ್ದವೂ ಹಿಂದೆ ಹೇಳಿದಂತೆ (ನ ಜಾಯತೇ) ಎಂಬ ವ್ಯುತ್ಪತ್ತಿಯಿಂದ ವಿಷ್ಣುವಿನಲ್ಲಿ ಸಾವಕಾಶವಾಗಿದೆ.

ಉಭಯ ಅಬಾಧಕ್ಕಾಗಿ (ಅಜ ಶ್ರುತಿ, ಜಹ್ಮ ಲಿಂಗ ಇವೆರಡರ) ಹಿಂದೆ ಅಭೇದವನ್ನು ಒಪ್ಪಿದ್ದು ಸರಿಯಲ್ಲ. ಹಾಗೆ ಹೇಳಿದರೆ ಅತಿಪ್ರಸಂಗ ಬರುತ್ತದೆ. (ವಿರುದ್ಧ ಧರ್ಮಾಧಿಕರಣಗಳಾದ ಜೀವೇಶ್ವರರಿಗೂ ಅಭೇದವನ್ನು ಒಪ್ಪುವುದಾದರೆ, ವ್ರೀಹಿ, ಯವ ಮೊದಲಾದ ಯಾವ ಸ್ಥಳದಲ್ಲೂ ಭೇದ ಇಲ್ಲದೇ ಹೋಗಬೇಕು. ಆಗ 'ವ್ರೀಹಿಭಿರ್ಯಜೇತ', 'ಯವೈರ್ಯಜೇತ' ಎಂಬಲ್ಲಿ ವಿಕಲ್ಪವನ್ನು ಒಪ್ಪಿದ್ದು ತಪ್ಪಾಗುತ್ತದೆ).

ಇನ್ನು ಬ್ರಹ್ಮ ವಿರಿಂಚಿಗಳಿಗೆ ಭೇದವನ್ನು ಹೇಳುವ ಪ್ರಮಾಣವೇ ಇದೆ. ''ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯಗರ್ಭ'' ಎಂಬುದಾಗಿ. ಅಭೇದ ಒಪ್ಪಿದರೆ ಈ ಪ್ರಮಾಣದ ವಿರೋಧ ಬರುತ್ತದೆ.

''ಸ್ಥಿತ್ಯಾದಯೇ ಹರಿವಿರಿಂಚಹರೇತಿ ಸಂಜ್ಞಾ'' ಎಂಬ ಸ್ಮೃತಿಯಲ್ಲಿ ಅಭೇದ ಹೇಳಲ್ಪಟ್ಟಿದೆಯಲ್ಲಾ? ಎಂದರೆ ಈ ಸ್ಮೃತಿಯನ್ನು ವಿರಿಂಚ, ಹರ ಇವರ ಅಂತರ್ಗವಾದ ಈಶ್ವರನ ರೂಪವನ್ನು ಇಟ್ಟುಕೊಂಡು ಕೂಡಿಸಬೇಕು. ಹಾಗಾಗಿ ಇದು ಜೀವೇಶ್ವರ ಅಭೇದಕ್ಕೆ ಪ್ರಮಾಣವಾಗಲು ಸಾಧ್ಯವಿಲ್ಲ. ಆದ್ದರಿಂದ 'ಬ್ರಾಹ್ಮಣ' ಎಂದರೆ ವಿಷ್ಣುವೇ.

**ಅಧಿಕರಣ ಫಲ :-** ಇಲ್ಲಿ ಬ್ರಾಹ್ಮಣ ಶಬ್ದ ವಾಚ್ಯನಿಗೆ ನಿತ್ಯಮಹಿಮತ್ವನ್ನು ಹೇಳಿದ್ದಾರೆ. ಇದೇ ನಿತ್ಯಮಹಿಮತ್ವವನ್ನು ಜಿಜ್ಞಾಸಾದಿ ಸೂತ್ರಗಳಲ್ಲಿ ವಿಷ್ಣುವಿಗೆ ಹೇಳಿದ್ದಾರೆ. ಈಗ ಬ್ರಾಹ್ಮಣಶಬ್ದ ವಾಚ್ಯ ವಿಷ್ಣುವಲ್ಲ ಎಂದಾರೆ ನಿತ್ಯಮಹಿಮತ್ವವೂ

ವಿಷ್ಣುವಿಗಿಲ್ಲ ಎಂದಾಗಿ ಹಿಂದೆ ಹೇಳಿದ ನಿತ್ಯಮಹಿಮತ್ವವೂ ವಿಷ್ಣುವಿಗೆ ಕೂಡುವುದಿಲ್ಲ ಎಂಬ ಆಕ್ಷೇಪ ಹಾಗು ಸಮಾಧಾನ ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಮೊದಲನೆಯ ಅಧ್ಯಾಯದ ಮೂರನೆಯ ಪಾದವು ಸಮಾಪ್ತವಾಯಿತು.**

# ಮೊದಲನೆಯ ಅಧ್ಯಾಯದ ನಾಲ್ಕನೆಯ ಪಾದ

## ॥ ಓಂ ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತ ಗೃಹೀತೇರ್ದರ್ಶಯತಿ ಚ ಓಂ ॥ ೧-೪-೧

ಮೊದಲನೇ ಅಧ್ಯಾಯದ ಮೂರು ಪಾದಗಳಲ್ಲಿ ಜಗತ್ಕಾರಣತ್ವವನ್ನು ಬೋಧಿಸುವ ವಾಕ್ಯಗಳಲ್ಲಿರುವ ಶಬ್ದಗಳ, ಹಾಗು ಜಗತ್‌ಕಾರಣತ್ವಕ್ಕೆ ಸಂಗತ-ವಾದ ಆನಂದಮಯಾದಿ ಗುಣಗಳನ್ನು ಬೋಧಿಸುವ ವಾಕ್ಯಗಳಲ್ಲಿರುವ ಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡಿಯಾಯಿತು. ಈಗ ಈ ನಾಲ್ಕನೇ ಪಾದದಲ್ಲಿ ಬ್ರಹ್ಮಶಬ್ದೋಕ್ತ ಗುಣಪೂರ್ಣತ್ವವನ್ನು ವಿಷ್ಣುವಿನಲ್ಲಿ ಸಾಧನೆ-ಮಾಡುವುದಕ್ಕೋಸ್ಕರ ಅನ್ಯತ್ರೈವ ಪ್ರಸಿದ್ಧವಾದ ನಾಮ ಹಾಗು ಲಿಂಗಾತ್ಮಕ-ವಾದ ಶಬ್ದಗಳ ಸಮನ್ವಯ ಮಾಡಲಾಗುವುದು.

ಹಿಂದಿನ ಅಧಿಕರಣದಲ್ಲಿ ವಿಷ್ಣುವಿಗೆ ಸರ್ವೇಶ್ವರತ್ವವು ಹೇಳಲ್ಪಟ್ಟಿದೆ. ವಿಷ್ಣುವು ಅವ್ಯಕ್ತಾದಿ ಶಬ್ದಗಳಿಂದ ಹಾಗು ಪರಾವಧಿತ್ವವನ್ನು ತಿಳಿಸುವ ಶಬ್ದಗಳಿಂದ ಅವರತ್ವ ಬೋಧಕವಾದ ಶಬ್ದಗಳಿಂದಲೂ ವಾಚ್ಯನಾಗುವುದಾದರೆ ಆ ಸರ್ವೇಶ್ವರತ್ವ ಕೂಡುವುದಿಲ್ಲ ಎಂದು ಆಕ್ಷೇಪ ಹೊರಡುವುದರಿಂದ ಈ ಅಧಿ ಕಾರಣದಲ್ಲಿ 'ಆಕ್ಷೇಪಿಕೀ' ಎಂಬ ಸಂಗತಿಯಿದೆ.

''ಮಹತಃ ಪರಮವ್ಯಕ್ತಂ ಅವ್ಯಕ್ತಾತ್ ಪುರುಷಃ ಪರಃ'' ''ಜೀವಾ ಏವ ತು ದುಃಖಿನಃ'' ''ಯೋನಿಮನ್ಯೇ ಪ್ರಪದ್ಯಂತೇ'' ''ಕಾರ್ಯಕಾರಣಬದ್ಧೌ ತೌ''

ಇತ್ಯಾದಿ ವಾಕ್ಯಗಳಲ್ಲಿ ಶ್ರುತವಾದ ಅವ್ಯಕ್ತ, ದುಃಖಿ, ಬದ್ಧ, ಅವರ ಮೊದಲಾದ ಶಬ್ದಗಳ ಮುಖ್ಯಾರ್ಥ ಪ್ರಕೃತಿ, ಜೀವ ಮೊದಲಾದವುಗಳೋ ಅಥವಾ ವಿಷ್ಣುವೋ ಎಂಬುದೇ ಸಂದೇಹ.

ಪ್ರಕೃತ್ಯಾದಿಗಳೇ ಅವ್ಯಕ್ತ ಮೊದಲಾದ ಶಬ್ದಗಳಿಂದ ವಾಚ್ಯ ಬ್ರಹ್ಮನಲ್ಲ ಎಂದು ಪೂರ್ವಪಕ್ಷ. ಏಕೆಂದರೆ.

೧) ಅವ್ಯಕ್ತ ಮೊದಲಾದ ಶಬ್ದಗಳು ಪ್ರಕೃತ್ಯಾದಿಗಳಲ್ಲೇ ಪ್ರಸಿದ್ಧವಾಗಿವೆ. ಇವೆಲ್ಲಾ ಶಬ್ದಗಳು ವಿಷ್ಣುವಾಚಕ ಎನ್ನುವುದಕ್ಕೆ ಯಾವುದೇ ಪ್ರಮಾಣವಿಲ್ಲ.

ಅವ್ಯಕ್ತಾದಿಶಬ್ದಗಳು ಪ್ರಕೃತ್ಯಾದಿವಾಚಕಗಳಲ್ಲ ಎಂದರೆ ವ್ಯವಹಾರ ಕೂಡುವುದಿಲ್ಲ. ವಾಚಕವಲ್ಲದಿದ್ದರೂ ವ್ಯವಹಾರ ನಡೆಯಲಿ ಎಂದರೆ ಯಾವ ಶಬ್ದವನ್ನು ಯಾವ ಅರ್ಥದಲ್ಲಿ ಬೇಕಾದರೂ ಬಳಸಬಹುದು ಎಂದಾಗಿ ಅವ್ಯವಸ್ಥೆ ಉಂಟಾಗುತ್ತದೆ. ಈ ಅವ್ಯವಸ್ಥೆ ತಪ್ಪಿಸಬೇಕಾದರೆ ಅವ್ಯಕ್ತಾದಿ ಶಬ್ದಗಳು ಪ್ರಕೃತ್ಯಾದಿ ಅರ್ಥವುಳ್ಳದ್ದು ಎಂದು ಒಪ್ಪಲೇಬೇಕು.

'ಅವ್ಯಕ್ತಾತ್' ಎಂಬಲ್ಲಿ ಪಂಚಮೀ ವಿಭಕ್ತಿಯಿದೆ. ಆದರಿಂದ ಅವ್ಯಕ್ತ ಶಬ್ದ-ವಾಚ್ಯವಾದದ್ದು 'ಪರಾವಧಿತ್ವವುಳ್ಳದ್ದು' ಎಂದು ತಿಳಿಯುತ್ತದೆ. ಯಾವುದು ಪರಾವಧಿಯೋ ಅದು ಅವರವೂ ಆಗಿರುತ್ತದೆ. ಹಾಗಾಗಿ ವಿಷ್ಣುವಿನಲ್ಲಿ (ಅವಕ್ತಶಬ್ದವಾಚ್ಯನಾದರೆ) ಅವರತ್ವ ಒಪ್ಪಬೇಕು. ಆದರೆ ವಿಷ್ಣುವು ''ನ ತ್ವತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ'' ಎಂಬ ಪ್ರಮಾಣದಿಂದ ಸರ್ವೋತ್ತಮ ಎಂದು ಸಿದ್ಧನಾಗಿದ್ದಾನೆ. ಹಾಗಾಗಿ ಅವನಲ್ಲಿ ಅವರತ್ವ ಕೂಡುವುದಿಲ್ಲ (ಯಾವುದಕ್ಕಿಂತ ಮತ್ತೊಂದು ಉತ್ತಮವಾಗಿರುತ್ತದೋ ಅದು ಪರತ್ವಕ್ಕೆ ಉತ್ತಮತ್ವಕ್ಕೆ ಅವಧಿ).

ದುಃಖಿತ್ವ ಎಂಬುದು ಜೀವರ ಧರ್ಮ ಎಂದು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ವಿಷ್ಣುವನ್ನು ದುಃಖೀ ಎಂದು ಒಪ್ಪಿದರೆ ''ನಿರನಿಷ್ಟೋ ನಿರವದ್ಯಃ'' ಇತ್ಯಾದಿ ಪ್ರಮಾಣವಿರೋಧ ಬರುತ್ತದೆ.

ವಿಷ್ಣುವನ್ನು 'ಅವರ' 'ದುಃಖೀ' ಎಂದು ಒಪ್ಪಿದರೆ ಹಿಂದೆ ಹೇಳಲ್ಪಟ್ಟ ಸರ್ವಾಧಿಪತಿತ್ವಕ್ಕೂ ವಿರೋಧ ಬರುತ್ತದೆ.

ಅವ್ಯಕ್ತ ಶಬ್ದವಾಚ್ಯವಾದದ್ದು ಪ್ರಧಾನ (ಪ್ರಕೃತಿ) ಎಂಬುದಕ್ಕೆ ಲಿಂಗವೂ ಇದೆ. ಅದೇನೆಂದರೆ, ''ಮಹಾಂತಂ ಚ ಸಮಾವೃತ್ಯ ಪ್ರಧಾನಂ ಸಮವಸ್ಥಿತಂ'' (ಪ್ರಧಾನವು ಮಹತ್ತತ್ವವನ್ನು ಆವರಿಸಿಕೊಂಡು ಇದೆ) ಎಂಬಲ್ಲಿ ಮಹತಃ ಪರತ್ವವು ಪ್ರಧಾನಕ್ಕೆ ಹೇಳಲ್ಪಟ್ಟಿದೆ. ಅದೇ ಮಹತಃ ಪರತ್ವ ಇಲ್ಲಿ ಅವ್ಯಕ್ತಕ್ಕೆ ಉಕ್ತವಾಗಿದೆ. ಹಾಗಾಗಿ ಇಲ್ಲಿರುವ 'ಅವ್ಯಕ್ತ' ಪ್ರಧಾನವೇ ಆಗಬೇಕು. 'ಮಹತ್ಪರತ್ವ' ಎಂಬುದೇ ಲಿಂಗ.

**ಸಿದ್ಧಾಂತ** :- ಅವ್ಯಕ್ತಾದಿ ಸರ್ವಶಬ್ದವಾಚ್ಯ ವಿಷ್ಣುವೇ. ಏಕೆಂದರೆ,

೧) ''ನಾಮಾನಿ ಸರ್ವಾಣಿ ಯಮಾವಿಶಂತಿ'' ಎಂಬ ಶ್ರುತಿಯಿಂದ ವಿಷ್ಣುವು ಅವ್ಯಕ್ತಾದಿಸರ್ವಶಬ್ದ ವಾಚ್ಯ ಎಂದು ತಿಳಿಯುತ್ತಿದೆ.

೨) ''ಅವ್ಯಕ್ತಮಚಲಂ ಶಾಂತಂ'' ''ಅನೇನ ಜೀವೇನಾತ್ಮನಾ'' ಎಂಬುದಾಗಿ ಅವ್ಯಕ್ತ, ಜೀವ ಮೊದಲಾದ ಶಬ್ದಗಳ ಪ್ರಯೋಗವೂ ವಿಷ್ಣುವಿನಲ್ಲಿದೆ.

೩) ಅವ್ಯಕ್ತ ಶಬ್ದದ ಪ್ರವೃತ್ತಿನಿಮಿತ್ತ 'ಸೂಕ್ಷ್ಮತ್ವ' ಜೀವಶಬ್ದದ ಪ್ರವೃತ್ತಿನಿಮಿತ್ತ 'ಪ್ರಾಣಧಾರಕತ್ವ' ಇದು ''ಯತ್ತತ್ ಸೂಕ್ಷ್ಮಂ ಪರಮಂ ವೇದಿತವ್ಯಂ'' ಇತ್ಯಾದಿ ಶ್ರುತಿಗಳಿಂದ ಮುಖ್ಯವಾಗಿ ವಿಷ್ಣುವಿನಲ್ಲೇ ಇರುವುದೆಂದು ತಿಳಿಯುತ್ತಿದೆ. ಹಾಗಾಗಿ ಈ ಶಬ್ದಗಳ ಮುಖ್ಯಾರ್ಥ ವಿಷ್ಣುವೇ.

**ಪ್ರಶ್ನೆ** :- ಅವ್ಯಕ್ತಾದಿ ಶಬ್ದಗಳು ಅನ್ಯತ್ರ ಪ್ರಸಿದ್ಧವಾದ್ದರಿಂದ ವಿಷ್ಣುವಿನಲ್ಲಿ ಹೇಗೆ ಮುಖ್ಯವಾಗುತ್ತವೆ?

**ಉತ್ತರ** :- 'ಮಹತ್' ಶಬ್ದ 'ಚಮಸ' ಶಬ್ದ ಇದಕ್ಕೆ ಪ್ರಸಿದ್ಧವಾದ ಅರ್ಥ ಕ್ರಮವಾಗಿ ಮಹತ್ತತ್ವ ಮತ್ತು ಯಜ್ಞ ಪಾತ್ರೆ. ಆದರೂ ಕೂಡ ಮಹತ್ ಶಬ್ದವು ''ಮಹಾಂತಂ ವಿಭುಮಾತ್ಮಾನಾಂ'' ಎಂಬುದಾಗಿ ವಿಷ್ಣುವನ್ನೇ ಮುಖ್ಯವಾಗಿ ಹೇಳುತ್ತಿದೆ. ಏಕೆಂದರೆ ಮಹತ್ ಶಬ್ದದ ಪ್ರವೃತ್ತಿನಿಮಿತ್ತ ಮುಖ್ಯವಾಗಿರುವುದು ವಿಷ್ಣುವಿನಲ್ಲೇ. ಅದೇ ರೀತಿ 'ಚಮಸ' ಶಬ್ದವೂ ಕೂಡ ''ಇದಂ ತಚ್ಛಿರಃ ಏಷ ಹ್ಯರ್ವಾಗ್ಬಿಲಶ್ಚಮಸಃ'' ಎಂಬುದಾಗಿ ಶಿರಸ್ಸೆಂಬ ಅರ್ಥವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿದೆ. ಏಕೆಂದರೆ 'ಚಮಸ' ಶಬ್ದದ ಪ್ರವೃತ್ತಿ ನಿಮಿತ್ತ ಮುಖ್ಯವಾಗಿರುವುದು ಶಿರಸ್ಸಿನಲ್ಲೇ ಆದ್ದರಿಂದ. ಅದೇ ರೀತಿ ಅವ್ಯಕ್ತಾದಿ ಶಬ್ದಗಳ

ಪ್ರಸಿದ್ಧಾರ್ಥ ಬೇರೆ ಆಗಿದ್ದರೂ ಪ್ರವೃತ್ತಿ ನಿಮಿತ್ತ ಮುಖ್ಯವಾಗಿ ವಿಷ್ಣುವಿನಲ್ಲೇ ಇರುವುದರಿಂದ ಅವನೇ ಮುಖ್ಯಾರ್ಥ.

ಸರ್ವಶಬ್ದವಾಚ್ಯ ಈಶ್ವರನೇ ಆದರೂ ಆ ಆ ಶಬ್ದವಾಚ್ಯ ಈಶ್ವರನ ಸಂಬಂಧ ಯಾವುದಕ್ಕೆ ಇದೆಯೋ ಅದೂ ಕೂಡ ಆ ಶಬ್ದವಾಚ್ಯವಾಗುತ್ತದೆ. ಹೀಗಾಗಿ ವ್ಯವಹಾರ ಕೂಡುತ್ತದೆ. ಯಾವುದೇ ಅವ್ಯವಸ್ಥೆಯಿಲ್ಲ.

'ಅವರತ್ವ' 'ದುಃಖ' ಇತ್ಯಾದಿಗಳು ಭಗವಂತನಲ್ಲಿ ಇಲ್ಲದೇ ಹೋದರೂ ಅನ್ಯಗತವಾದ ಅವರತ್ವಾದಿಗಳು ಭಗವಂತನ ಅಧೀನವಾದ್ದರಿಂದ 'ಸ್ವಾತಂತ್ರ್ಯ' ಎಂಬ ಪ್ರವೃತ್ತಿನಿಮಿತ್ತ ಭಗವಂತನಲ್ಲಿ ಇದ್ದೇ ಇದೆ. ಹಾಗಾಗಿ ಪರಾವಧಿತ್ವ ಬೋಧಕವಾದ ಪಂಚಮ್ಯಂತ ಪದ, ದುಃಖೀ ಮೊದಲಾದ ಪದಗಳಿಂದ ಭಗವಂತ ವಾಚ್ಯನಾಗಬಹುದು.

ಎಲ್ಲಕ್ಕಿಂತಲೂ ಉತ್ತಮನಾದ ವಿಷ್ಣುವಿನಲ್ಲಿ 'ಮಹತ್ತರತ್ವ'ವೂ ಇದ್ದೇ ಇದೆ. ಹೀಗಾಗಿ ಈ 'ಮಹತ್ತರತ್ವ' ಎಂಬ ಲಿಂಗವೂ ವಿಷ್ಣುವಿನಲ್ಲಿ ಸಾವಕಾಶವಾಗಿ, ಅವ್ಯಕ್ತ ಶಬ್ದವಾಚ್ಯವಾದದ್ದು ಪ್ರಧಾನ ಎಂದು ಸಾಧನೆ ಮಾಡಲು ಸಮರ್ಥವಾಗುವುದಿಲ್ಲ.

ಓಂ ತದಧೀನತ್ವಾದರ್ಥವತ್ ಓಂ ಎಂಬುದು ಇದೇ ಅಧಿಕರಣದಲ್ಲಿರುವ ಇನ್ನೊಂದು ಸೂತ್ರ. ಅದರರ್ಥವೇನೆಂದರೆ,

'ತದ್ವತ್ವ' ಎಂಬುದು ಶಬ್ದ ಪ್ರವೃತ್ತಿಗೆ ಹೇಗೆ ನಿಮಿತ್ತವೋ ಅದೇ ರೀತಿ 'ತತ್ ಪ್ರತಿ ಸ್ವಾತಂತ್ರ್ಯವೂ' ಶಬ್ದ ಪ್ರವೃತ್ತಿಗೆ ನಿಮಿತ್ತ ಹೌದೋ ಅಲ್ಲವೋ ಎಂದು ಸಂದೇಹ ಬಂದರೆ,

'ತತ್‌ಪ್ರತಿ ಸ್ವಾತಂತ್ರ್ಯ' ಶಬ್ದ ಪ್ರವೃತ್ತಿಗೆ ನಿಮಿತ್ತವಾಗಲು ಸಾಧ್ಯವಿಲ್ಲ ಎಂದು ಪೂರ್ವಪಕ್ಷ. ಏಕೆಂದರೆ, ಭೃತ್ಯನು ರಾಜನ ಅಧೀನನಾದರೂ ಭೃತ್ಯನು ಬದ್ಧನಾದರೆ ರಾಜನನ್ನು ಬದ್ಧ ಎಂದು ಹೇಳುವುದಿಲ್ಲ.

ತತ್‌ಪ್ರತಿ ಸ್ವಾತಂತ್ರ್ಯವೂ ಶಬ್ದಪ್ರವೃತ್ತಿಗೆ ನಿಮಿತ್ತ ಎಂದು ಸಿದ್ಧಾಂತ. ಭೃತ್ಯನು ಯುದ್ಧದಲ್ಲಿ ಜಯಶಾಲಿಯಾದರೂ ಭೃತ್ಯನು ರಾಜನ ಅಧೀನನಾದ್ದರಿಂದ

ರಾಜನನ್ನು 'ಜಯೀ' ಎಂದು ಕರೆಯುತ್ತಾರೆ. ಹಾಗಾದರೆ ಬದ್ಧಾದಿಶಬ್ದಗಳ ಪ್ರಯೋಗ ಏಕೆ ಮಾಡುವುದಿಲ್ಲ ಎಂದರೆ, ಅದು ಅಮಂಗಳಕಾರಿಯಾದ್ದರಿಂದ ಹಾಗೆ ಪ್ರಯೋಗ ಮಾಡುವುದಿಲ್ಲ. ರಾಜನೂ ಬದ್ಧನಾಗಲು ಸಾಧ್ಯವಿದೆ. ಹಾಗಾಗಿ ಬದ್ಧ ಶಬ್ದವನ್ನು ಪ್ರಯೋಗಿಸಿದಾಗ ಅದು ರಾಜನ ಕೋಪಕ್ಕೆ ಕಾರಣವಾಗಬಹುದು. ವಿಷ್ಣುವಿನಲ್ಲಾದರೋ ದುಃಖಾದಿಗಳು ಅಸಂಭಾವಿತ-ವಾದ್ದರಿಂದ 'ದುಃಖೀ' 'ಬದ್ಧ' ಶಬ್ದವನ್ನು ಪ್ರಯೋಗಿಸಿದಾಗ ಅಪಾರ್ಥಕ್ಕೆ ಅವಕಾಶವಿಲ್ಲ.

ಹೀಗೆ ತತ್ಪ್ರತಿ ಸ್ವಾತಂತ್ರ್ಯ ಶಬ್ದಪ್ರವೃತ್ತಿಗೆ ನಿಮಿತ್ತವಾಗಿದೆ ಎಂದು ಸಿದ್ಧವಾಯಿತು. ಈ ಸ್ವಾತಂತ್ರ್ಯ ಎಂಬ ನಿಮಿತ್ತದಿಂದ ವಿಷ್ಣುವು ಬದ್ಧಾದಿ ಸರ್ವಶಬ್ದವಾಚ್ಯನಾಗಬಹುದು. ಸ್ವಾತಂತ್ರ್ಯ ಎಂದರೆ ಸರ್ವನಿಯಾಮಕತ್ವ. ಇದು ಹಿಂದೆ ಅಂತರ್ಯಾಮ್ಯಧಿಕರಣವೇ ಮೊದಲಾದ ಕಡೆ ವಿಷ್ಣುವಿನಲ್ಲಿ ಸಾಧಿಸಲ್ಪಟ್ಟಿದೆ.

'ಸರ್ವಸ್ಯ ತದಧೀನತ್ವಾತ್ ತತ್ತಚ್ಛಬ್ದಾಭಿಧೇಯತಾ'' ಎಂಬ ಸ್ಮೃತಿಯೂ ಇದನ್ನೇ ಪ್ರತಿಪಾದಿಸುತ್ತಿದೆ.

ಸಮನ್ವಯಾಧಿಕರಣದಲ್ಲಿ ಭಗವಂತನಿಗೆ ಸರ್ವಶಬ್ದವಾಚ್ಯತ್ವವು ಹೇಳಲ್ಪಟ್ಟಿದೆ. ಈಗ ಅವ್ಯಕ್ತಾದಿಶಬ್ದವಾಚ್ಯನಾಗದೇ ಹೋದರೆ ಆಗ ಸರ್ವ-ಶಬ್ದವಾಚ್ಯತ್ವಕ್ಕೆ ಭಂಗ ಬರುತ್ತದೆ ಎಂಬ ಆಕ್ಷೇಪ ಹಾಗು ಅದಕ್ಕೆ ಸಮಾಧಾನ ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ ಓಂ ॥ ೧-೪-೨

ಹಿಂದಿನ ಅಧಿಕರಣದಲ್ಲಿ ಸಿದ್ಧಸ್ವರೂಪರಾದ ದೇವತೆಗಳ ಹಾಗು ದೇವತಾ-ಕ್ರಮ ವಾಚಕಗಳಾದ ''ಇಂದ್ರಿಯೇಭ್ಯಃ'' ಮೊದಲಾದ ಶಬ್ದಗಳ ಸಮನ್ವಯ ಮಾಡಿಯಾಯಿತು. ಈಗ ಈ ಅಧಿಕರಣದಲ್ಲಿ ಸಾಧ್ಯಸ್ವರೂಪವಾದ ಕರ್ಮ ಮತ್ತು ಕರ್ಮಕ್ರಮ ವಾಚಕಗಳಾದ ಶಬ್ದಗಳ ಸಮನ್ವಯ ಮಾಡಲಾಗುತ್ತದೆ-ಯಾದ್ದರಿಂದ ಆನಂತರ್ಯ ಎಂಬ ಸಂಗತಿ ಇದೆ.

''ವಸಂತೇ ವಸಂತೇ ಜ್ಯೋತಿಷಾ ಯಜೇತ'' ಎಂಬಲ್ಲಿರುವ 'ಜ್ಯೋತಿ' ಮೊದಲಾದ ಶಬ್ದಗಳಿಂದ ವಾಚ್ಯನಾದವನು ವಿಷ್ಣುವೋ ಅಥವಾ ತದನ್ಯವಾದ ಕರ್ಮಾದಿಗಳೋ ಎಂಬುದೇ ಸಂದೇಹ. ಜ್ಯೋತಿರಾದಿ ಶಬ್ದಗಳು ಕರ್ಮಾದಿ-ವಾಚಕಗಳೇ ಎಂದು ಪೂರ್ವಪಕ್ಷ. ಏಕೆಂದರೆ,

ಜೋತಿರಾದಿಶಬ್ದಗಳು 'ಜ್ಯೋತಿಷ್ಟೋಮ' ಮೊದಲಾದ ಕರ್ಮವಾಚಕ-ಗಳಾಗಿ ಪ್ರಸಿದ್ಧವಾಗಿವೆ. ಪ್ರಸಿದ್ಧವಾದ ಅರ್ಥವನ್ನು ಬಿಟ್ಟು ಬ್ರಹ್ಮಪರತ್ವವನ್ನು ಹೇಳಿದರೆ ಆಗ, ಈ ಕರ್ಮ ಮತ್ತು ಅದಕ್ಕೆ ಅಂಗವಾದ ಕ್ರಮ, ದೇವತೆ, ಕಾಲ ಅಧಿಕಾರೀ ಇವುಗಳನ್ನು ಬೋಧಿಸುವ ಬೇರೆ ವಾಕ್ಯಗಳಿಲ್ಲವಾದ್ದರಿಂದ ನಿಯತ-ವಾದ ಕರ್ಮಾನುಷ್ಠಾನಕ್ಕೇ ಲೋಪ ಒದಗಿಬರುತ್ತದೆ.

**ಪ್ರಶ್ನೆ** :- ಜೋತಿರಾದಿ ಶಬ್ದವಾಚ್ಯನಾದವನು ಈಶ್ವರನೇ. ಆದರೆ ಹಿಂದೆ ಹೇಳಿದಂತೆ ಈಶ್ವರ ಸಂಬಂಧದಿಂದ ಆ ಶಬ್ದಗಳು ಕರ್ಮಾದಿವಾಚಕಗಳಾಗುತ್ತವೆ ಎಂದೇಕೆ ಹೇಳಬಾರದು?

**ಪರಿಹಾರ** :- ಹಾಗೇ ಹೇಳಿದರೆ ಆಗ ಜೋತಿರಾದಿ ಶಬ್ದಗಳಿಗೆ ಕರ್ಮಾದಿ ಅರ್ಥದಲ್ಲಿ 'ಲಕ್ಷಣಾ' ಒಪ್ಪಿದಂತಾಗುತ್ತದೆ. ಅದು ಕೂಡುವುದಿಲ್ಲ. ಏಕೆಂದರೆ ಲೋಕದಲ್ಲಿ ಲಕ್ಷಣಾ ವೃತ್ತಿಯನ್ನು ಬಿಟ್ಟು ಬೇರೆ ಯಾವ ಶಬ್ದವೃತ್ತಿಯೂ ಇಲ್ಲದಂತಾಗುತ್ತದೆ.

ಮತ್ತೇನೆಂದರೆ, ಈ ಜ್ಯೋತಿರಾದಿ ಶಬ್ದಗಳಿಗೆ ಈಶ್ವರನಲ್ಲಿ ರೂಢಿಯಿಲ್ಲ. ರೂಢಿಯನ್ನು ಒಪ್ಪಲೂಬಾರದು. ಏಕೆಂದರೆ ಅದರಿಂದ ಸಿದ್ಧಾಂತಿಗಳ ಮುಖ್ಯ ಉದ್ದೇಶ್ಯವಾದ ಗುಣಪೂರ್ಣತ್ವ ಸಿದ್ಧಿಸುವುದಿಲ್ಲ. ಹಾಗಾಗಿ ಈ ಶಬ್ದಗಳಿಗೆ ಈಶ್ವರನಲ್ಲಿ ಯೋಗವೃತ್ತಿಯನ್ನೇ ಒಪ್ಪಬೇಕು. ಆಗ ಈ ಶಬ್ದಗಳಿಗೆ ಕರ್ಮಾದಿ ಅರ್ಥದಲ್ಲಿ ರೂಢಿಯಿರುವುದರಿಂದ ಯೋಗಕ್ಕಿಂತಲೂ ರೂಢಿಯೇ ಪ್ರಬಲ-ವಾದ್ದರಿಂದ ಈ ಶಬ್ದಗಳೆಲ್ಲವೂ ಕರ್ಮಾದಿವಾಚಕಗಳೇ ಆಗಬೇಕು.

ಜ್ಯೋತಿರಾದಿ ಶಬ್ದಗಳಿಗೆ ಈಶ್ವರನಲ್ಲಿ ಯೋಗವೃತ್ತಿಯನ್ನು ಒಪ್ಪಲು ಸಾಧ್ಯವೂ ಇಲ್ಲ. ಏಕೆಂದರೆ, 'ಅವಯವಾರ್ಥಃ ಯೋಗಃ' ಎಂದಿರುವುದರಿಂದ 'ಜೋತಿರಾದಿಶಬ್ದದ ಅವಯವಕ್ಕೆ ಏನು ಅರ್ಥ ಹೇಳಬೇಕು? ಬ್ರಹ್ಮ ಪರವಾದ

ಅರ್ಥ ಹೇಳಿದರೆ ಸಮುದಾಯವು ಬ್ರಹ್ಮಪರವಾಗುವುದಿಲ್ಲ. ಅನ್ವಾರ್ಥವನ್ನು ಹೇಳಿದರೆ ಆಗ ಸರ್ವಶಬ್ದವಾಚ್ಯತ್ವಕ್ಕೆ ಭಂಗ ಬರುವುದು.

**ಸಿದ್ಧಾಂತ** :- ಜ್ಯೋತಿರಾದಿ ಶಬ್ದಗಳು ವಿಷ್ಣುವಾಚಕಗಳೇ. ಏಕೆಂದರೆ ಸರ್ವಶಬ್ದ ಮುಖ್ಯಾರ್ಥ ವಿಷ್ಣುವೇ. ಐತರೇಯದಲ್ಲಿ ''ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ ತಸ್ಮಾತ್ ಶತರ್ಚಿನಃ....' ಇತ್ಯಾದಿ ವಾಕ್ಯಗಳಿಂದ 'ಶತರ್ಚಿ' ಮೊದಲಾದ ಶಬ್ದಗಳನ್ನು ಮಹಾಯೋಗ ಹಾಗು ವಿದ್ವತ್ ರೂಢಿಯಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಇದು ಉಪಲಕ್ಷಣ. ಏಕೆಂದರೆ ಕೊನೆಯಲ್ಲಿ ''ತಾ ವಾ ಏತಾಸ್ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ'' ಎಂಬುದಾಗಿ ಸರ್ವ ಶಬ್ದಗಳ ಮುಖ್ಯಾರ್ಥ ವಿಷ್ಣುವೇ ಎಂದು ಪ್ರತಿಪಾದಿಸಲಾಗಿದೆ.

ಹೀಗೆ ಒಪ್ಪಿದರೆ ಕರ್ಮಾದಿಲೋಪಪ್ರಸಂಗ ಉಂಟಾಗುವುದಿಲ್ಲವೇ? ಇಲ್ಲಿ. ಹೇಗೆ 'ಮಧು' ಮೊದಲಾದ ಶಬ್ದಗಳಿಗೆ 'ಜೇನು' ಎಂಬ ಅರ್ಥದಲ್ಲಿ ರೂಢಿಯನ್ನು ಒಪ್ಪಿಯೇ ಮಹಾಯೋಗವೃತ್ತಿಯಿಂದ ''ಅಸೌ ವಾ ಆದಿತ್ಯೋ ದೇವ ಮಧು'' ಎಂಬುದಾಗಿ ಭಗವಂತನಲ್ಲಿ ಸಮನ್ವಯ ಮಾಡಲಾಗಿದೆಯೋ ಅದೇ ರೀತಿ ಜ್ಯೋತಿರಾದಿ ಶಬ್ದಗಳಿಗೂ ರೂಢವಾದ 'ಕರ್ಮ' ಎಂಬ ಅರ್ಥ-ವನ್ನು ಬಿಡದೇ ಮಹಾಯೋಗ ವಿದ್ವದ್ರೂಢಿಯಿಂದ ಭಗವತ್ಪರತ್ವವನ್ನು ಹೇಳಿದಾಗ ಕರ್ಮಾದಿಲೋಪ ಪ್ರಸಂಗವಿಲ್ಲ.

ಜ್ಯೋತಿರಾದಿ ಶಬ್ದಗಳ ಅವಯವಗಳಿಗೆ ಅನ್ವಾರ್ಥವನ್ನು ಒಪ್ಪಿಯೇ ಸಮುದಾಯವು ಈಶ್ವರಪರ ಎಂದು ಹೇಳುತ್ತೇವೆ. ಜಾತಂ ಓತಂ ಯಸ್ಮಿನ್ ಹುಟ್ಟಿದ್ದೆಲ್ಲವೂ ಅವನಲ್ಲಿ ಪ್ರವಿಷ್ಟವಾಗಿದೆ ಎಂದು ಅರ್ಥ. ಹೀಗೆ ಜ್ಯೋತಿರಾದಿ-ಸರ್ವಶಬ್ದ ಮುಖ್ಯಾರ್ಥ ವಿಷ್ಣುವೇ ಎಂದು ಸಿದ್ಧವಾಯಿತು.

ಸಮನ್ವಯ ಸೂತ್ರದ ಮೇಲಿನ ಆಕ್ಷೇಪ ಹಾಗು ಅದರ ಸಮಾಧಾನ ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಪ್ರಯೋಜನ.

## ॥ ಓಂ ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ಓಂ ॥ ೧-೪-೩

ಹಿಂದಿನ ಅಧಿಕರಣದಲ್ಲಿ, ಜ್ಯೋತಿರಾದಿ ಶಬ್ದಗಳ ಪ್ರಸಿದ್ಧವಾದ ಪ್ರವೃತ್ತಿ-ನಿಮಿತ್ತ (ಯಜ್ಞ ಸ್ವರೂಪತ್ವವು ವಿಷ್ಣುವಿನಲ್ಲಿ ಬಾರದೇ ಹೋದರೂ ಅಪ್ರಸಿದ್ಧ-ವಾದ ಪ್ರವೃತ್ತಿ ನಿಮಿತ್ತವು ಯೋಗ ವೃತ್ತಿ ಲಬ್ಧವಾದದ್ದು (ಜಾತಮೋತಂ ಜಗದ್ಯಸ್ಮಾತ್) ವಿಷ್ಣುವಿನಲ್ಲಿ ಇದೆ ಎಂದು ಹೇಳಲಾಗಿತ್ತು. ಈ ಅಧಿಕರಣ-ದಲ್ಲಾದರೋ 'ಪಂಚಜನ' ಮೊದಲಾದ ಶಬ್ದಗಳ ಪ್ರಸಿದ್ಧವಾದ ಪ್ರವೃತ್ತಿ-ನಿಮಿತ್ತವೇ (ಬಹುತ್ವ) ವಿಷ್ಣುವಿನಲ್ಲಿ ಇದೆ ಎಂದು ಸಮರ್ಥನೆ ಮಾಡುವುದರಿಂದ ಪೂರ್ವಸಂಗತಿ ಇಟ್ಟುಕೊಳ್ಳಬೇಕು.

ಬೃಹದಾರಣ್ಯಕದ ಆರನೇ ಅಧ್ಯಾಯದಲ್ಲಿ ''ತದ್ದೇವಾ ಜ್ಯೋತಿಷಾಂ ಜ್ಯೋತಿಃ..... ಯಸ್ಮಿನ್ ಪಂಚಜನಾಃ ಆಕಾಶಶ್ಚ ಪ್ರತಿಷ್ಠಿತಃ ತಮೇವ ಮನ್ಯೇ ಆತ್ಮಾನಂ....'' ಎಂಬ ವಾಕ್ಯವಿದೆ. ಇಲ್ಲಿ ಶ್ರುತವಾದ ಪಂಚತ್ವ ಎಂಬ ಪ್ರವೃತ್ತಿ-ನಿಮಿತ್ತದಿಂದ ಕೂಡಿದ 'ಪಂಚಜನ' ಎಂಬ ಶಬ್ದದ ಮುಖ್ಯಾರ್ಥ, ವಾಕ್ಯಶೇಷ-ದಲ್ಲಿ ಷಷ್ಠೀ ವಿಭಕ್ತ್ಯಂತವಾದ ಪ್ರಾಣಾದಿ ಶಬ್ದಗಳಿಂದ ವಾಚ್ಯರಾದ ಪ್ರಾಣಾದಿ-ಗಳೋ ಅಥವಾ ದ್ವಿತೀಯಾ ವಿಭಕ್ತ್ಯಂತವಾದ ಅದೇ ಪ್ರಾಣಾದಿಶಬ್ದಗಳಿಂದ ವಾಚ್ಯವಾದ ವಿಷ್ಣುವಿನ ರೂಪಗಳೋ ಎಂಬುದೇ ಸಂದೇಹ.

ವಿಷ್ಣುವಿಗಿಂತ ಭಿನ್ನರಾದ ಪ್ರಾಣಾದಿಗಳೇ ಪಂಚಜನ ಶಬ್ದವಾಚ್ಯರು ಎಂದು ಪೂರ್ವಪಕ್ಷ.

ಏಕೆಂದರೆ, 'ಪಂಚಜನ' ಎಂಬ ಶಬ್ದವು ಬಹುತ್ವ ವಿಶಿಷ್ಟವಾದ ವಸ್ತುವನ್ನು ಪ್ರತಿಪಾದಿಸುತ್ತಿದೆ. ವಿಷ್ಣುವಾದರೋ ''ಏಕಮೇವಾದ್ವಿತೀಯಂ ಬ್ರಹ್ಮ'' ಎಂದು ಏಕತ್ವೇನ ಶ್ರುತನಾಗಿದ್ದಾನೆ. ಹಾಗಾಗಿ ಪಂಚಜನ ಶಬ್ದ ವಿಷ್ಣುವಾಚಕನಾಗಲು ಸಾಧ್ಯವಿಲ್ಲ.

**ಪ್ರಶ್ನೆ** :- 'ಪಂಚಜನ' ಶಬ್ದ ವಾಚ್ಯರು ಅನೇಕರಿದ್ದರೂ ಅವರೆಲ್ಲಾ ವಿಷ್ಣುವಿನ ಅಧೀನರೇ ಆದ್ದರಿಂದ, ತದಧೀನತ್ವ ನ್ಯಾಯವನ್ನು ಅನುಸರಿಸಿ 'ಪಂಚಜನ' ಶಬ್ದವನ್ನು ವಿಷ್ಣುಪರ ಎಂದೇಕೆ ಹೇಳಬಾರದು?

**ಪರಿಹಾರ :-** ತದಧೀನತ್ವ ನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ. ಅನೇಕ ಜನರು ರಾಜನ ವಶದಲ್ಲಿದ್ದರೂ ಬಹುತ್ವವಾಚಿ ಶಬ್ದಗಳನ್ನು ರಾಜನಲ್ಲಿ ಹೇಗೆ ಪ್ರಯೋಗಿಸುವುದಿಲ್ಲವೋ ಹಾಗೇ ಇಲ್ಲಿಯೂ ಪಂಚಜನ ಶಬ್ದವನ್ನು ಒಬ್ಬನೇ ಆದ ವಿಷ್ಣುವಿನಲ್ಲಿ ಪ್ರಯೋಗಿಸಬಾರದು.

**ಪ್ರಶ್ನೆ :-** ಗುಹಾಧಿಕರಣದಲ್ಲಿ ಹೇಳಿದಂತೆ ವಿಷ್ಣುವು ಒಬ್ಬನೇ ಆದರೂ ಅವನ ಅನೇಕ ರೂಪಗಳನ್ನು ಇಟ್ಟುಕೊಂಡು 'ಪಂಚಜನ' ಶಬ್ದವನ್ನು ವಿಷ್ಣುವಿ-ನಲ್ಲಿ ಸಮನ್ವಯ ಮಾಡಬಹುದು?

**ಪರಿಹಾರ :-** 'ಏಕಸ್ಯ ಅನೇಕತ್ವಂ ನ' ಎಂಬುದು ಸಾಮಾನ್ಯನಿಯಮ. ಏನಾದರೂ ಬಾಧಕವಿದ್ದರೆ ಈ ನಿಯಮವನ್ನು ಕೈಬಿಡಬಹುದು. ಗುಹಾ-ಧಿಕರಣದಲ್ಲಿ, 'ಗುಹಾನಿವಿಷ್ಟತ್ವ ' ಎಂಬ ಬಾಧಕವಿತ್ತು , ಹಾಗಾಗಿ ನಿಯಮ-ವನ್ನು ಕೈಬಿಡಲಾಯಿತು. ಆದರೆ ಈ ಪ್ರಕರಣದಲ್ಲಿ ಯಾವುದೇ ಬಾಧಕವಿಲ್ಲ ಹಾಗಾಗಿ ನಿಯಮ ಸಂಕೋಚಕ್ಕೆ ಕಾರಣವಿಲ್ಲ.

ಇನ್ನು ಇಲ್ಲಿರುವ 'ಪಂಚಜನ' ಶಬ್ದವನ್ನು ಬ್ರಹ್ಮಪರ ಎಂದರೆ ಬಾಧಕವೂ ಇದೆ. ''ಯಸ್ಮಿನ್ ಪಂಚಜನಾಃ ಆಕಾಶಶ್ಚ ಪ್ರತಿಷ್ಠಿತಃ ತಮೇವ ಮನ್ಯೇ ಆತ್ಮಾನಂ.....'' ಎಂಬುದಾಗಿ ಆತ್ಮ ಶಬ್ದ ಸಾಮಾನಾಧಿಕರಣ್ಯೇನ ಶ್ರುತವಾದ 'ಯಸ್ಮಿನ್' ಎಂಬುದು ಬ್ರಹ್ಮಪರವಾಗಬೇಕು. ಆತ್ಮಶಬ್ದವು ಬ್ರಹ್ಮಪರತ್ವೇನ ಪ್ರಸಿದ್ಧವಾಗಿದೆಯಾದ್ದರಿಂದ. ಹೀಗೆ 'ಯಸ್ಮಿನ್' ಎಂಬ ಆಶ್ರಯ ವಾಚಕವಾದ ಶಬ್ದವು ಬ್ರಹ್ಮಪರವಾದ ಮೇಲೆ ಅಲ್ಲಿ ಆಶ್ರಿತವಾದ ಪಂಚಜನ ಹಾಗು ಆಕಾಶ ಶಬ್ದವಾಚ್ಯವೂ ಬ್ರಹ್ಮವಾಗಲು ಸಾಧ್ಯವಿಲ್ಲ. ಒಂದೇ ವಸ್ತು ಆಧಾರ, ಆಧೇಯ ಎರಡೂ ಆಗಲು ಸಾಧ್ಯವಿಲ್ಲ.

**ಸಿದ್ಧಾಂತ :-** 'ಪಂಚಜನ' ಶಬ್ದ ವಾಚ್ಯನಾದವನು ವಿಷ್ಣುವೇ. ''ಪ್ರಾಣಸ್ಯ ಪ್ರಾಣಂ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನಃ'' ಎಂಬ ವಾಕ್ಯಶೇಷದಲ್ಲಿ ದ್ವಿತೀಯಾವಿಭಕ್ತ್ಯಂತವಾದ ಪ್ರಾಣಾದಿಶಬ್ದಗಳು ವಿಷ್ಣುರೂಪ-ಗಳನ್ನೇ ಹೇಳುತ್ತಿವೆ.

ಷಷ್ಠ್ಯಂತವಾದ ಪ್ರಾಣಾದಿ ಶಬ್ದಗಳಿಗೆ ಹೋಲಿಸಿದರೆ ದ್ವಿತೀಯಾಂತವಾದ ಪ್ರಾಣಾದಿ ಶಬ್ದಗಳು ಶಬ್ದತಃ ಅರ್ಥತಃ ಪ್ರಧಾನವಾಗಿದೆ. (ಷಷ್ಠೀ ವಿಭಕ್ತಿಗಿಂತ ದ್ವಿತೀಯಾವಿಭಕ್ತಿ ಪ್ರಧಾನ ಹಾಗೇ ದೇವತೆಗಳಿಗಿಂತ ವಿಷ್ಣುವು ಪ್ರಧಾನ).

ಆದ್ದರಿಂದ 'ಪಂಚಜನ' ಶಬ್ದವು ಪ್ರಧಾನಪರವಾಗುವುದೇ ಉಚಿತ.

''ನಾಮಾನಿ ಸರ್ವಾಣಿ'' ''ತಾ ವಾ ಏತಾ....'' ಇತ್ಯಾದಿ ಹಿಂದಿನ ಅಧಿಕರಣಗಳಲ್ಲಿ ಹೇಳಿದ 'ಸರ್ವಶಬ್ದವಾಚ್ಯತ್ವ'' 'ಮುಮುಕ್ಷು ಜ್ಞೇಯತ್ವ' ಮೊದಲಾದ ಹೇತುಗಳಿಂದಲೂ ವಿಷ್ಣುವೇ ಪಂಚಜನ ಶಬ್ದ ವಾಚ್ಯನಾಗಬೇಕು.

ವಿಷ್ಣುವು ಒಬ್ಬನೇ ಆಗಿದ್ದರೂ ಅವನ ಅನೇಕ ರೂಪಗಳನ್ನು ಇಟ್ಟುಕೊಂಡು ಭೇದಪ್ರತಿನಿಧಿಯಾದ ವಿಶೇಷದ ಬಲದಿಂದ ಪಂಚತ್ವ ಸಂಖ್ಯೆಯನ್ನು ಕೂಡಿಸಬಹುದು.

'ಯಸ್ಮಿನ್' ಎಂಬಲ್ಲಿ ಹೇಳಿರುವುದು ಶರೀರದಲ್ಲಿರುವ ಭಗವಂತನ ರೂಪ. ಅದು ಆಶ್ರಯ. ಪ್ರಾಣಾದಿರೂಪಗಳು ಅಲ್ಲಿ ಆಶ್ರಿತ. ವಿಶೇಷ ಬಲದಿಂದ ಆಶ್ರಯ ಆಶ್ರಯೀಭಾವವನ್ನೂ ಕೂಡಿಸಬಹುದು.

**ಪ್ರಶ್ನೆ** :- ಕಾಣ್ವಶಾಖೆಯ ವಾಕ್ಯಶೇಷದಲ್ಲಿ 'ಅನ್ನಸ್ಯ ಅನ್ನಂ' ಎಂಬ ಭಾಗವಿಲ್ಲ. ಹಾಗಾಗಿ ಐದು ರೂಪಗಳು ಹೇಗೆ ಆಗುವುದು?

**ಉತ್ತರ** :- 'ಅನ್ನಸ್ಯ ಅನ್ನಂ' ಎಂಬುದು ಮಾಧ್ಯಂದಿನ ಶಾಖೆಯಲ್ಲಿದೆ. ಕಾಣ್ವಶಾಖೆಯಲ್ಲಿಲ್ಲ. ಆದರೂ ಪೂರ್ವದಲ್ಲಿ ಶ್ರುತವಾದ 'ಜ್ಯೋತಿಷಾಂ ಜ್ಯೋತಿಃ' ಎನ್ನುವುದರ ಸಮುಚ್ಚಯ ಮಾಡಿಕೊಳ್ಳಬೇಕು. 'ಜೋತಿ' ಎಂಬ ರೂಪವನ್ನು ಸೇರಿಸಿಕೊಂಡಾಗ ಐದು ರೂಪಗಳು ಸಿದ್ಧವಾಗುತ್ತದೆ.

ಒಟ್ಟಿನಲ್ಲಿ 'ಪಂಚಜನ' ಶಬ್ದವಾಚ್ಯವಾದದ್ದು – ವಾಕ್ಯಶೇಷದ ದ್ವಿತೀಯಾಂತ ಪ್ರಾಣಾದಿ ಶಬ್ದಗಳಿಂದ ಹೇಳಲ್ಪಟ್ಟ ವಿಷ್ಣುವಿನ ರೂಪಗಳೇ.

ಈ ಪಾದದಲ್ಲಿರುವ ಎಲ್ಲಾ ಅಧಿಕರಣಗಳಲ್ಲಿಯೂ, ಸಮನ್ವಯ ಸೂತ್ರದ ಮೇಲಿನ ಆಕ್ಷೇಪ ಹಾಗು ಅದರ ಸಮಾಧಾನವೇ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ ಓಂ ॥ ೧-೪-೪

ಹಿಂದಿನ ಅಧಿಕರಣದಲ್ಲಿ, ಒಬ್ಬನೇ ವಿಷ್ಣುವಿಗೆ ರೂಪವಿಶೇಷದಿಂದ ಆಧಾರಾಧೇಯಭಾವ ಕೂಡುತ್ತದೆ ಎಂದು ಪ್ರತಿಪಾದಿಸಲಾಗಿತ್ತು. ಅದು ಒಪ್ಪಲೂ ಬಹುದು ಏಕೆಂದರೆ 'ಕಾಲಃ ಸದಾ ಅಸ್ತಿ' (ಕಾಲವು ಎಲ್ಲಾ ಕಾಲದಲ್ಲೂ ಇದೆ) ಎಂಬಲ್ಲಿ ಒಂದೇ ಕಾಲಕ್ಕೆ ಆಧಾರಾಧೇಯ ಭಾವ ಕಂಡಿದೆ. ಆದರೆ ಒಂದೇ ವಸ್ತುವಿಗೆ ಕಾರ್ಯಕಾರಣಭಾವ ಒಪ್ಪಲು ಸಾಧ್ಯವಿಲ್ಲ. ಆರೀತಿ ಎಲ್ಲೂ ಕಂಡಿಲ್ಲವಾದ್ದರಿಂದ. ಹೀಗೆ ಹಿಂದಿನ ನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ ಎಂದು ಶಂಕಾ ಮಾಡುತ್ತಿರುವುದರಿಂದ 'ಪ್ರತ್ಯುದಾಹರಣ' ಎಂಬ ಸಂಗತಿ ಇದೆ ಎಂದು ಗ್ರಹಿಸಬೇಕು.

ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲೀಯಲ್ಲಿ ''ಆತ್ಮನಃ ಆಕಾಶಸ್ಸಂಭೂತಃ ಆಕಾಶಾದ್ವಾಯುಃ'' ಎಂಬ ವಾಕ್ಯವಿದೆ. ಆಕಾಶ ವಾಯು ಮೊದಲಾದ ಶಬ್ದಗಳು ಇಲ್ಲಿ ಕಾರ್ಯತ್ವೇನ ಕಾರಣತ್ವೇನ ಶ್ರುತವಾಗಿವೆ. ಹೀಗೆ ಕಾರ್ಯಕಾರಣ-ವಾಚಕಗಳಾಗಿ ಶ್ರುತವಾದ ಆಕಾಶಾದಿಶಬ್ದಗಳು ಮುಖ್ಯವಾಗಿ ವಿಷ್ಣುವಾಚಕ-ಗಳೋ ಅಥವಾ ಭೂತಾಕಾಶಾದಿ ವಾಚಕಗಳೋ ಎಂಬುದೇ ಸಂದೇಹ.

ಇಲ್ಲಿ ಶ್ರುತವಾದ ಆಕಾಶಾದಿ ಶಬ್ದಗಳು ಅನ್ಯವಾಚಕಗಳೇ, ಏಕೆಂದರೆ, ''ನ ಜಾಯತೇ ಮ್ರಿಯತೇ'' ಎಂಬ ಶ್ರುತಿಯಲ್ಲಿ ಬ್ರಹ್ಮನು 'ಅಕಾರ್ಯ' ಎಂದು ಶ್ರುತನಾಗಿದ್ದಾನೆ. ಅವನಲ್ಲಿ ಕಾರ್ಯತ್ವ ವಿರುದ್ಧವಾಗುತ್ತದೆ. ಇನ್ನು ಸ್ವಕಾರ್ಯತ್ವ (ತನ್ನ ಕಾರ್ಯ ತಾನೇ) ಎಂಬುದು ಸುತರಾಂ ಕೂಡುವುದಿಲ್ಲ. ಕಾರ್ಯಕಾರಣಗಳಿಗೆ ಪೂರ್ವಾಪರೀಭಾವ ಆವಶ್ಯವಾಗಿರಬೇಕು. ಸ್ವಕಾರ್ಯತ್ವದಲ್ಲಿ ಅದು ಸಾಧ್ಯವಿಲ್ಲ.

**ಪ್ರಶ್ನೆ** :- ವಿಷ್ಣುವಿನಲ್ಲಿ ಪ್ರಸಿದ್ಧವಾದ ಕಾರ್ಯಕಾರಣಭಾವವನ್ನು ಒಪ್ಪಲು ಸಾಧ್ಯವಾಗದೇ ಹೋದರೂ ವ್ಯಂಗ್ಯವ್ಯಂಜಕರೂಪವಾದ ಕಾರ್ಯಕಾರಣಭಾವ-ವನ್ನು ಒಪ್ಪಬಹುದಲ್ಲವೇ?

**ಪರಿಹಾರ :-** ವ್ಯಕ್ತಿ ಒಬ್ಬನೇ ಆದಾಗ ಅದೂ ಸಾಧ್ಯವಿಲ್ಲ. ವ್ಯಂಗ್ಯ ವ್ಯಂಜಕ-ಭಾವ ರೂಪವಾದ ಕಾರ್ಯಕಾರಣಭಾವಕ್ಕೂ ಪೂರ್ವಾಪರೀಭಾವ ಬೇಕೇ ಬೇಕು. ಅದು ಒಬ್ಬನೇ ವ್ಯಕ್ತಿಯಲ್ಲಿ ಅಸಂಭಾವಿತ.

**ಪ್ರಶ್ನೆ :-** ಮಗನ ಹುಟ್ಟು ತಂದೆಯ ಅಧೀನವಾದಂತೆ ಆಕಾಶಾದಿಗಳ ಹುಟ್ಟು ವಿಷ್ಣುವಿನ ಅಧೀನವಾದ್ದರಿಂದ, ಆಕಾಶಾದಿಗಳೇ ನಿಜವಾಗಿ ಹುಟ್ಟಿದರೂ ತದಧೀನತ್ವ ನ್ಯಾಯದಿಂದ ವಿಷ್ಣುವೇ ಹುಟ್ಟಿದ ಎಂದು ಹೇಳಬಹುದು?

**ಪರಿಹಾರ :-** ಮಗನ ಹುಟ್ಟು ತಂದೆಯ ಅಧೀನವಾದರೂ ಮಗ ಹುಟ್ಟಿದಾಗ, 'ತಂದೆ ಹುಟ್ಟಿದ' ಎಂದು ಯಾರೂ ಹೇಳುವುದಿಲ್ಲ. ಹಾಗಾಗಿ ತದಧೀನತ್ವ ನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ.

**ಪ್ರಶ್ನೆ :-** ಹಾಗಾದರೆ ''ನಾಮಾನಿ ಸರ್ವಾಣಿ.....'' ಎಂಬ ಶ್ರುತಿಗೆ ಏನು ಗತಿ?

**ಪರಿಹಾರ :-** 'ಸರ್ವ' ಶಬ್ದಕ್ಕೆ ಅರ್ಥಸಂಕೋಚ ಮಾಡಬೇಕು. ವಿರುದ್ಧವಾದದ್ದನ್ನು ಬಿಟ್ಟು ಉಳಿದ ಶಬ್ದಗಳಿಂದ ವಾಚ್ಯ ಎಂದು ಹೇಳಬೇಕು.

ಆಕಾಶಾದಿ ಸರ್ವ ಶಬ್ದಗಳಿಂದಲೂ ವಿಷ್ಣು ಒಬ್ಬನೇ ವಾಚ್ಯ ಎನ್ನುವುದಾದರೆ ಭೂತಾಕಾಶಾದಿಗಳ ಜನ್ಮವೇ ಸಿದ್ಧವಾಗುವುದಿಲ್ಲ. ಅದನ್ನು ಹೇಳುವ ವಾಕ್ಯವೇ ಇಲ್ಲವಾಗುವುದರಿಂದ. ಹಾಗಾಗಿ ಆಕಾಶಾದಿಶಬ್ದವಾಚ್ಯ ವಿಷ್ಣುವಲ್ಲ.

**ಸಿದ್ಧಾಂತ :-** ಆಕಾಶಾದಿಶಬ್ದ ಮುಖ್ಯಾರ್ಥ ವಿಷ್ಣುವೇ.

ವಿಷ್ಣುವೇ ಆಕಾಶಾದಿಗಳಲ್ಲಿ ನಿಯಾಮಕತ್ವೇನ ಇದ್ದಾನೆ ಎಂಬುದು ''ಯ ಆಕಾಶೇ ತಿಷ್ಠನ್'' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ. ಈ ನಿಯಾಮಕ-ರೂಪಗಳು ಅನೇಕವಿರುವುದರಿಂದ ಪರಸ್ಪರ ಪೌರ್ವಾಪರ್ಯ ಕೂಡುತ್ತದೆ. ಹೀಗೆ ವ್ಯಂಗ್ಯ ವ್ಯಂಜಕಭಾವ ರೂಪವಾದ ಕಾರ್ಯಕಾರಣಭಾವವನ್ನು ಒಪ್ಪಬಹುದು.

ಯಾವುದೇ ಬಾಧಕವಿಲ್ಲವಾದ್ದರಿಂದ ''ನಾಮಾನಿ ಸರ್ವಾಣಿ'' ಎಂಬ ಶ್ರುತಿಗೆ ಅರ್ಥಸಂಕೋಚ ಮಾಡುವ ಅವಶ್ಯಕತೆಯಿಲ್ಲ. ಹಾಗಾಗಿ ಹಿಂದೆ ಹೇಳಿದ ಎಲ್ಲಾ ಸಾಧಕಗಳು ಇಲ್ಲಿಯೂ ಇವೆ.

ಜ್ಯೋತಿರಧಿಕರಣರಲ್ಲಿ ಹೇಳಿದಂತೆ ಭೂತಾಕಾಶಾದಿಗಳಲ್ಲಿ ಆಕಾಶಾದಿ-ಶಬ್ದಗಳಿಗೆ ರೂಢಿಯನ್ನು ಒಪ್ಪಿಕೊಂಡೇ ವಿಷ್ಣುವಿನಲ್ಲಿ ಮುಖ್ಯ ವಾಚ್ಯತ್ವವನ್ನು ಹೇಳುತ್ತಿರುವುದರಿಂದ, ಆಕಾಶಾದಿಗಳ ಉತ್ಪತ್ತಿಯು ಸಿದ್ಧವಾಗುವುದಿಲ್ಲ, ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

## ॥ ಓಂ ಸಮಾಕರ್ಷಾತ್ ಓಂ ॥ ೧-೪-೫

ಹಿಂದಿನ ಅಧಿಕರಣದಲ್ಲಿ ಆಕಾಶಾದಿಶಬ್ದಗಳಿಗೆ ಭೂತಾಕಾಶಾದಿಗಳಲ್ಲಿಯೂ ರೂಢಿಯಿದೆ ಎಂದು ಹೇಳಲಾಗಿದೆ. ಹಾಗೆ ಒಪ್ಪಿದರೆ 'ಅಕ್ಷ' ಮೊದಲಾದ ಅನೇಕಾರ್ಥಕವಾದ ಶಬ್ದಗಳಂತೆ ಆಕಾಶಾದಿ ಶಬ್ದಗಳಿಗೂ ಭಗವಂತನಲ್ಲಿ ಹಾಗು ಅನ್ಯತ್ರ ಮುಖ್ಯವೃತ್ತಿಯನ್ನೇ ಹೇಳಿದಂತಾಗುತ್ತದೆ ಎಂಬ ಆಕ್ಷೇಪದಿಂದ ಈ ಅಧಿಕರಣ ಪ್ರಾರಂಭವಾಗುತ್ತದೆ. ಈ ರೀತಿ ಪೂರ್ವಾಧಿಕರಣ ಸಂಗತಿಯನ್ನು ಗ್ರಹಿಸಬೇಕು.

ಸರ್ವಶಬ್ದಗಳಿಗೂ ಈಶನಲ್ಲಿ ಹಾಗು ಇತರ ಕಡೆಯಲ್ಲಿ ಹೇಳಿದ ಮುಖ್ಯತ್ವ ಒಂದೇ ರೀತಿಯಾಗಿದೆಯೋ ಅಥವಾ ಈಶನಲ್ಲಿ ಅಧಿಕ ಇತರತ್ರ ನ್ಯೂನ ಎಂದು ಅಭಿಪ್ರಾಯವೋ ಎಂಬುದೇ ಸಂದೇಹ.

**ಪೂರ್ವಪಕ್ಷ** :- ಹೇಗೆ ಅನೇಕಾರ್ಥಕವಾದ ಅಕ್ಷಾದಿಶಬ್ದಗಳಿಗೆ ಎಲ್ಲಾ ಅರ್ಥಗಳಲ್ಲಿಯೂ ರೂಢಿ ಇದ್ದದ್ದರಿಂದ ಸಮಾನವಾದ ಮುಖ್ಯತ್ವ ಇದೆಯೋ ಅದೇ ರೀತಿ ಸರ್ವಶಬ್ದಗಳಿಗೂ ಈಶನಲ್ಲಿ ಇತರಕಡೆಗಳಲ್ಲಿ ಸಮಾನವಾದ ಮುಖ್ಯತ್ವವನ್ನೇ ಒಪ್ಪಬೇಕಾಗುತ್ತದೆ. ಒಂದು ವೇಳೆ ಭಗವದಿತರತ್ರ ಮುಖ್ಯತ್ವವು ಹೀನ ಎಂದು ಹೇಳಿದರೆ ಆಗ ಲಕ್ಷಣಾವನ್ನೇ ಹೇಳಿದಂತಾಗುತ್ತದೆ. ಲಕ್ಷಣಾ-ವೃತ್ತಿಗೇ 'ಮುಖ್ಯವೃತ್ತಿ' ಎಂಬ ಪಾರಿಭಾಷಿಕವಾದ ಹೆಸರಿದೆ ಎಂದಾಗುತ್ತದೆ. ಮತ್ತು ಭಗವಂತನಲ್ಲೇ ಮುಖ್ಯತ್ವವು ಅಧಿಕವಾಗಿದೆ ಎಂದಂತಾಗಿ ಎಲ್ಲಾ ಶಬ್ದಗಳೂ ಭಗವಂತನಲ್ಲೇ ಪ್ರಸಿದ್ಧವಾಗಿವೆ ಎಂದಾಗಿ ಇತರ ವಸ್ತುಗಳಲ್ಲಿನ ಪ್ರಸಿದ್ಧಿ ಇಲ್ಲದೇ ಹೋಗಬೇಕಾಗುತ್ತದೆ.

ಕರ್ಮ, ದೇವತಾ ಮೊದಲಾದ ಇತರ ವಸ್ತುಗಳಲ್ಲಿ ವ್ಯವಹಾರವಾಗಬೇಕು ಎಂಬ ದೃಷ್ಟಿಯಿಂದ ಹೀನವೃತ್ತಿಯನ್ನು ಒಪ್ಪಿಯೂ ಏನೂ ಪ್ರಯೋಜನವಿಲ್ಲ.

ಏಕೆಂದರೆ ಈಶ್ವರನ ಜ್ಞಾನದಿಂದಲೇ ಪುರುಷಾರ್ಥ ಲಭಿಸುತ್ತಿರುವಾಗ ಇತರ ಫಲಾಪೇಕ್ಷೆ ಇಲ್ಲದ ಮುಮುಕ್ಷುವು ಕರ್ಮದೇವತಾ ವಿಷಯಕವಾದ ವ್ಯವಹಾರವನ್ನೇ ಮಾಡುವುದಿಲ್ಲ.

ಶಬ್ದಪ್ರವೃತ್ತಿನಿಮಿತ್ತಗಳು ಎರಡು. ಸ್ವಾತಂತ್ರ್ಯ ಮತ್ತು ತದ್ಗತತ್ವ. ಇವು-ಗಳಲ್ಲಿ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವು ಈಶ್ವರನಲ್ಲೇ ಅಧಿಕವಾಗಿದೆ ಎಂದು ಹೇಳುವುದು ಸರಿಯಲ್ಲ. ಇತರ ಕಡೆಗಳಲ್ಲೂ ಅದು ಇರುವುದರಿಂದ ತದಧೀನತ್ವ ನ್ಯಾಯವನ್ನು (ಸ್ವಾತಂತ್ರ್ಯ ಎಂಬ ನಿಮಿತ್ತವನ್ನು) ಇಟ್ಟುಕೊಂಡು ಈಶ್ವರನಲ್ಲಿ ಆಧಿಕ್ಯವನ್ನು ಹೇಳುವುದೂ ಯುಕ್ತವಲ್ಲ. ಏಕೆಂದರೆ ಈ ಸ್ವಾತಂತ್ರ್ಯ (ತರಧಿನತ್ವ) ಎಂಬುದು ''ಅಸ್ಯ ಯದೇಕಾಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ'' ಎಂಬಲ್ಲಿ ಜೀವನಲ್ಲಿ ಶ್ರುತವಾಗಿದೆ. ಹಾಗೇ ''ವಾಯುನಾ ಹಿ ಸರ್ವೇ ಲೋಕಾ ನೇನೀಯಂತೆ'' ಎಂಬಲ್ಲಿ ವಾಯುವಿನಲ್ಲಿ ಶ್ರುತ-ವಾಗಿದೆ. ಹಾಗಾಗಿ ಈಶ್ವರನಂತೇ ಅವರಿಗೂ ಪರಮ ಮುಖ್ಯವಾಚ್ಯತ್ವವನ್ನು ಒಪ್ಪಬೇಕಾಗುತ್ತದೆ.

**ಸಿದ್ಧಾಂತ :-** ಸರ್ವ ಶಬ್ದಗಳ ಮುಖ್ಯವೃತ್ತಿ ಬ್ರಹ್ಮನಲ್ಲೇ ಅಧಿಕವಾಗಿರುವುದು ಉಳಿದ ಕಡೆಗಳಲ್ಲಿ ಹೀನವಾಗೇ ಇರುವುದು.

'ರೂಢಿ' 'ಯೋಗ' ಈ ಎರಡೂ ಮುಖ್ಯ ವೃತ್ತಿಗಳೇ ಆದರೂ ಹೇಗೆ ತಾರತಮ್ಯವಿದೆಯೋ, ಅಮುಖ್ಯವೃತ್ತಿಗಳಾದ ಗೌಣಲಕ್ಷಣಾಗಳಲ್ಲಿ ಹೇಗೆ ತಾರತಮ್ಯವಿದೆಯೋ ಅದೇ ರೀತಿ ರೂಢಿಯಲ್ಲೂ ತಾರತಮ್ಯವಿದೆ. ಯೋಗ-ದಲ್ಲೂ ಇದೆ. ಅವಿದ್ವದ್ರೂಢಿಗಿಂತ ವಿದ್ವದ್ರೂಢಿ ಶ್ರೇಷ್ಠ. ಹಾಗೇ ಯೋಗಕ್ಕಿಂತ ಮಹಾಯೋಗ ಶ್ರೇಷ್ಠ. ಹೀಗೆ ಎಲ್ಲಾ ಶಬ್ದಗಳೂ ಮಹಾಯೋಗ ವಿದ್ವದ್ರೂಢಿ-ಯಿಂದ ವಿಷ್ಣುವಾಚಕಗಳೇ ಆಗಿವೆ. ಎಲ್ಲಾ ಶಬ್ದಗಳಿಗೂ ವಿಷ್ಣುವಿನಲ್ಲೇ ಪರಮಮುಖ್ಯವೃತ್ತಿ ಇದ್ದರೂ ಉಳಿದ ಕಡೆಗಳಲ್ಲಿ ಸಮಾಕರ್ಷದಿಂದ ಮುಖ್ಯ-ವೃತ್ತಿಯಿಂದಲೇ ವ್ಯವಹಾರ. ಹೀಗೆ ಉಳಿದ ಕಡೆಗಳಲ್ಲಿ ಮುಖ್ಯವೃತ್ತಿಯನ್ನೇ ಒಪ್ಪಿದ್ದರಿಂದ ಲೋಕಪ್ರಸಿದ್ಧಿಗೆ ಭಂಗವಿಲ್ಲ. ಬಾಲಕರು ಹೇಗೆ ಸಿಂಹದ ಚಿತ್ರವನ್ನೇ ನೋಡಿ ಸಿಂಹ ಎಂದು ವ್ಯವಹರಿಸುತ್ತಾರೋ ಹಾಗೇ ಲೌಕಿಕರೂ ಶಬ್ದಗಳನ್ನು ಭಗವದಿತರತ್ರವೇ ಹೆಚ್ಚು ಬಳಸುತ್ತಾರೆ. ಇದು ಅಜ್ಞರೂಢಿ.

ಜ್ಞಾನಿಗಳ ದೃಷ್ಟಿಯಿಂದ ಇತರತ್ರ ಹೀನವೃತ್ತಿಯನ್ನು ಒಪ್ಪಿದ್ದು ವ್ಯರ್ಥ ಎಂಬ ಶಂಕೆಗೂ ಅವಕಾಶವಿಲ್ಲ. ಏಕೆಂದರೂ ಜ್ಞಾನಿಗಳೂ ಕೂಡ ಕರ್ಮ ದೇವತಾ ಮೊದಲಾದ ಅರ್ಥಗಳಲ್ಲಿ ಆ ಶಬ್ದಗಳನ್ನು ಬಳಸುತ್ತಾರೆ. ಕರ್ಮ ದೇವತಾ ಮೊದಲಾದ ಎಲ್ಲದಕ್ಕೂ ಭಗವಂತನೇ ಆಧಾರ ಎಂಬ ಅನು-ಸಂಧಾನದಿಂದ ಅದು ಈಶ್ವರಜ್ಞಾನದಲ್ಲೇ ಪರ್ಯವಸಾನವಾಗುತ್ತದೆ.

ಜೀವಾದಿಗಳಲ್ಲಿ ಶ್ರುತವಾದ ಸ್ವಾತಂತ್ರ್ಯ ಅಂತರ್ಯಾಮಿಪರ ಎಂದು ತಿಳಿಯಬೇಕು. ಇದು ಪಾದಾಂತ್ಯಪ್ರಾಣಾಧಿಕರಣದಲ್ಲಿ ಸಿದ್ಧವಾಗಿದೆ.

'ತತ್ತು ಸಮನ್ವಯಾತ್' ಎಂಬಲ್ಲಿ 'ತು' ಶಬ್ದದಿಂದ ಅವಧಾರಣವು ವಿವಕ್ಷಿತವಾಗಿದೆ. ವಿಷ್ಣುವೇ ಸರ್ವಶಬ್ದ ಮುಖ್ಯಾರ್ಥವಾಗದೇ ಹೋದರೆ ಈ ಅವಧಾರಣ ಕೂಡುವುದಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ।। ಓಂ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ ।।
## ೧-೪-೬

ಎಲ್ಲಾ ಶಬ್ದಗಳಿಗೂ ವಿಷ್ಣುವಿನಲ್ಲಿ ಅಧಿಕವೃತ್ತಿ, ಉಳಿದ ಕಡೆ ಹೀನವೃತ್ತಿ ಎಂದು ಹಿಂದಿನ ಅಧಿಕರಣದಲ್ಲಿ ಹೇಳಿದ್ದು ಸರಿಯಲ್ಲ. ಸ್ತ್ರೀಲಿಂಗಶಬ್ದಗಳಿಗೆ ವಿಷ್ಣುವಿನಲ್ಲಿ ಮುಖ್ಯವೃತ್ತಿಯೇ ಕೂಡುವುದಿಲ್ಲ. ಹೀಗಿರುವಾಗ ಮುಖ್ಯ-ವೃತ್ತಿಯ ಅಧಿಕತ್ವದ ವಿಚಾರ ಸರ್ವಥಾ ಅಸಂಗತವಾಗುತ್ತದೆ ಎಂದು ಹಿಂದಿನ ಅಧಿಕರಣದ ಮೇಲಿನ ಆಕ್ಷೇಪದಿಂದ ಈ ಅಧಿಕರಣ ಪ್ರವೃತ್ತವಾಗುವುದರಿಂದ ಆಕ್ಷೇಪಿಕೀ ಎಂಬ ಸಂಗತಿಯಿದೆ ಎಂದು ಗ್ರಹಿಸಬೇಕು.

''ಏಷಾ ಹ್ಯೇವ ಪ್ರಕೃತಿರವಿಕೃತಿಃ'' ಎಂಬುದೇ ಮೊದಲಾದ ವಾಕ್ಯಗಳಲ್ಲಿ-ರುವ ಪ್ರಕೃತಿ ಮೊದಲಾದ ಸ್ತ್ರೀಲಿಂಗಶಬ್ದಗಳಿಂದ ವಾಚ್ಯನಾದವನು ವಿಷ್ಣುವೋ ಅನ್ಯರೋ ಎಂಬುದೇ ಸಂದೇಹ.

ಈ ಪ್ರಕೃತ್ಯಾದಿಶಬ್ದಗಳು ಅನ್ಯವಾಚಿಗಳು ಎಂದು ಪೂರ್ವಪಕ್ಷ. ಪ್ರಕೃತ್ಯಾದಿಶಬ್ದಗಳು ಅನ್ಯತ್ರವೇ ಪ್ರಸಿದ್ಧವಾಗಿದ್ದಾವೆ ಹಾಗು ಇವು ಸ್ತ್ರೀಲಿಂಗ

ಶಬ್ದಗಳಾಗಿದ್ದಾವೆ. ಪರಮ ಪುರುಷನಾದ ವಿಷ್ಣುವಿನಲ್ಲಿ ಸ್ತ್ರೀತ್ವವಿಲ್ಲ. ವಿಷ್ಣುವಿಗೆ ಸ್ತ್ರೀರೂಪವೂ ಇದೆ ಎಂದು ಹೇಳಬಾರದು ''ನೈನಂ ವಾಚಾ ಸ್ತ್ರಿಯಂ ಬ್ರುವನ್'' ಎಂಬುದಾಗಿ ಪರಮಪುರುಷನಿಗೆ ಸ್ತ್ರೀತ್ವವು ನಿಷೇಧಿಸಲ್ಪಟ್ಟಿದೆ.

**ಪ್ರಶ್ನೆ :-** ಬ್ರಹ್ಮನಲ್ಲಿ ನಪುಂಸಕತ್ವವೂ ಇಲ್ಲವಾದ್ದರಿಂದ ಅವನು ನಪುಂಸಕ ಲಿಂಗವಾದ 'ಬ್ರಹ್ಮ' ಶಬ್ದದಿಂದ ಹೇಗೆ ವಾಚ್ಯನಾಗುತ್ತಾನೆ?

**ಪರಿಹಾರ :-** ಬ್ರಹ್ಮ ಶಬ್ದದಲ್ಲಿ ನಪುಂಸಕಲಿಂಗವು ಶಬ್ದಸಾಧುತ್ವಕ್ಕಾಗಿ ಪ್ರಯುಕ್ತವಾಗಿದೆ. ಹೇಗೆ 'ಕಲತ್ರ' ಎಂಬ ಶಬ್ದವು ಭಾರ್ಯಾಪರ್ಯಾಯವಾದರೂ ನಪುಂಸಕ ಲಿಂಗವಾಗಿದೆಯೋ ಹಾಗೇ.

ಆದರೆ ಪ್ರಕೃತ್ಯಾದಿ ಶಬ್ದಗಳಲ್ಲಿರುವ ಸ್ತ್ರೀಲಿಂಗವು ಶಬ್ದಸಾಧುತ್ವಕ್ಕಾಗಿ ಪ್ರಯುಕ್ತವಾಗಿದೆ ಎಂದು ಹೇಳಬಾರದು ಹಾಗೆ ನಿರ್ಧರಿಸುವುದಕ್ಕೆ ಯಾವುದೇ ಪ್ರಮಾಣವಿಲ್ಲ.

''ನಾಮಾನಿ ಸರ್ವಾಣಿ'' ಎಂಬ ಶ್ರುತಿಗೆ ಅರ್ಥಸಂಕೋಚ ಮಾಡಬೇಕು. ಸರ್ವ ಎಂದರೆ ಸ್ತ್ರೀಲಿಂಗ ಶಬ್ದಗಳನ್ನು ಬಿಟ್ಟು ಎಂದರ್ಥ.

**ಪ್ರಶ್ನೆ :-** ಅನ್ಯಗತ ಸ್ತ್ರೀತ್ವವೂ ವಿಷ್ಣುವಿನವಶವೇ ಆದ್ದರಿಂದ 'ತದಧೀನತ್ವ' ನ್ಯಾಯದಿಂದ ಸ್ತ್ರೀಲಿಂಗಶಬ್ದಗಳನ್ನು ವಿಷ್ಣುಪರ ಎಂದೇಕೆ ಹೇಳಬಾರದು?

**ಪರಿಹಾರ :-** ತದಧೀನತ್ವ ನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ. ಹೆಂಡತಿ-ಯನ್ನು ತನ್ನ ವಶದಲ್ಲಿಟ್ಟುಕೊಂಡಿದ್ದರೂ ಗಂಡನನ್ನು 'ಹೆಂಡತಿ' ಎಂಬ ಶಬ್ದದಿಂದ ಯಾರೂ ಕರೆಯುವುದಿಲ್ಲ. ಹಾಗೇ ಅನ್ಯಗತ ಸ್ತ್ರೀತ್ವವು ವಿಷ್ಣುವಿನ ಅಧೀನವೇ ಆದರೂ ಸ್ತ್ರೀಲಿಂಗ ಶಬ್ದಗಳಿಂದ ವ್ಯವಹಾರ ಕೂಡುವುದಿಲ್ಲ.

**ಸಿದ್ಧಾಂತ :-** ಪ್ರಕೃತ್ಯಾದಿ ಸರ್ವಶಬ್ದ ವಾಚ್ಯ ವಿಷ್ಣುವೇ. ಏಕೆಂದರೆ, ''ಹಂತೇತಮೇವ ಪುರುಷಂ ಸರ್ವಾಣಿ ನಾಮಾನಿ ಅಭಿವದಂತಿ'' ಎಂಬುದಾಗಿ ಶ್ರುತಿಯು ಯಾವುದೇ ಸಂಕೋಚವಿಲ್ಲದೇ ಸರ್ವಶಬ್ದವಾಚ್ಯತ್ವವನ್ನು ಹೇಳಿ ಅದನ್ನೇ ನದೀಸಮುದ್ರ ದೃಷ್ಟಾಂತದಿಂದ ಪ್ರತಿಪಾದನೆ ಮಾಡುತ್ತಿದೆ.

(ನದೀಸಮುದ್ರ ದೃಷ್ಟಾಂತಕ್ಕೆ ಅನುಸಾರವಾಗಿ ದಾರ್ಷ್ಟಾಂತಿಕದಲ್ಲೂ ಯಾವುದೇ ಸಂಕೋಚ ಮಾಡಬಾರದೆಂದು ತಿಳಿಯುತ್ತದೆ.)

ಪ್ರಕೃತಿಶಬ್ದಕ್ಕೆ ಭಗವಂತನ ಇಚ್ಛೆ ಎಂಬ ಅರ್ಥವಿದೆ. ಅದು 'ಮಾಯಾಂ ತು ಪ್ರಕೃತಿಂ ವಿದ್ಯಾತ್'' ''ಪ್ರಕೃತಿರ್ವಾಸ ನೇತ್ಯೇವಂ ತವೇಚ್ಛಾನಂತ ಕಥ್ಯತೇ'' ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಗಿದೆ. ಈ ಇಚ್ಛೆಯಾದರೋ ಭಗವಂತನ ಸ್ವರೂಪವೇ ಎಂದು ''ಸೋಽಭಿಧ್ಯಾ ಸ ಜೂತಿಃ'' ಮೊದಲಾದ ಶ್ರುತಿಗಳಿಂದ ತಿಳಿಯುತ್ತಿದೆ. ಹೇಗೆ ಪ್ರಕೃತಿಶಬ್ದಕ್ಕೆ ವಿಷ್ಣುಪರತ್ವ ಕೂಡುತ್ತದೆ.

ಇನ್ನು ''ಏಷ ಸ್ತ್ರೀ ಏಷ ಪುರುಷಃ ಏಷ ಪ್ರಕೃತಿಃ'' ಎಂಬಲ್ಲಿ ಸಾಕ್ಷಾತ್ತಾಗಿ ಪ್ರಕೃತಿಶಬ್ದವಾಚ್ಯತ್ವವು ಹೇಳಲ್ಪಟ್ಟಿದೆ.

ವಿಷ್ಣುವಿನಲ್ಲಿ ಸ್ತ್ರೀತ್ವವೂ ಕೂಡುತ್ತದೆ. ಅವ್ಯವಧಾನೇನ ಸೂತಿಹೇತುತ್ವವೇ ಸ್ತ್ರೀತ್ವ. ಅದು ವಿಷ್ಣುವಿನಲ್ಲಿದೆ. ''ಯದ್ಭೂತಯೋನಿಂ'' ಎಂಬಲ್ಲಿ ಯೋನಿ ಶಬ್ದವನ್ನು ಪ್ರಯೋಗ ಮಾಡಿರುವುದರಿಂದ ವ್ಯವಧಾನವಿಲ್ಲದ ಸೂತಿಹೇತುತ್ವ ಎಂಬ ಸ್ತ್ರೀತ್ವ ವಿಷ್ಣುವಿನಲ್ಲಿ ಸಿದ್ಧವಾಗುತ್ತದೆ.

ಪ್ರಕೃತಿ ಶಬ್ದದ ಪ್ರವೃತ್ತಿ ನಿಮಿತ್ತ ಪ್ರಕೃಷ್ಟಕೃತಿಮತ್ತ್ವ. (ಪ್ರಕೃಷ್ಟಕಾರ್ಯ-ಮಾಡುವುದು) ಇದು ವಿಷ್ಣುವಿನಲ್ಲಿದೆ. ವಿಷ್ಣುವು ಸೃಷ್ಟಿಕಾಲದಲ್ಲಿ ಪ್ರಕೃತಿಯಲ್ಲಿ ಪ್ರವೇಶ ಮಾಡಿ ಅದನ್ನು ಮಹತ್ತತ್ವವೇ ಮೊದಲಾದ ಪರಿಣಾಮ ಹೊಂದುವಂತೆ ಮಾಡಿ ನಿಯಾಮಕನಾದ ತಾನೂ ಕೂಡ ತದನುಸಾರವಾಗಿ ಅನೇಕ ಆಕಾರಗಳನ್ನು ಹೊಂದುತ್ತಾನೆ. ಹೀಗೆ ಪ್ರಕೃತಿಶಬ್ದವು ಯೋಗವೃತ್ತಿಯಿಂದಲೂ ವಿಷ್ಣುಪರವಾಗಿದೆ. ಹೀಗೆ ಪ್ರಕೃತ್ಯಾದಿ ಸರ್ವ ಸ್ತ್ರೀಲಿಂಗಶಬ್ದ ವಾಚ್ಯ ವಿಷ್ಣುವೇ.

## ॥ ಓಂ ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ ಓಂ ॥
## ೧-೪-೭

ಹಿಂದಿನ ನ್ಯಾಯ ಇಲ್ಲಿ ಅನ್ವಯಿಸುವುದಿಲ್ಲ ಎಂದು ಪೂರ್ವಪಕ್ಷೋತ್ಥಾನವಾಗುತ್ತಿರುವುದರಿಂದ ಈ ಅಧಿಕರಣದಲ್ಲಿ ಪ್ರತ್ಯುದಾಹರಣ ಎಂಬ ಸಂಗತಿಯಿದೆ.

''ಅಸದ್ವಾ ಇದಮಗ್ರ ಆಸೀತ್'' ಮೊದಲಾದ ಶ್ರುತಿಗಳಲ್ಲಿ ಶ್ರುತವಾದ 'ಅಸತ್' 'ಶೂನ್ಯ' ಮೊದಲಾದ ಶಬ್ದಗಳಿಂದ ವಾಚ್ಯನಾದವನು ಈಶ್ವರನೋ ಅಥವಾ ಬೇರೆ ವಸ್ತುಗಳೋ ಎಂದು ಸಂದೇಹ. ಅಸದಾದಿ ಶಬ್ದಗಳು ಅನ್ಯವಾಚಕಗಳೇ ಎಂದು ಪೂರ್ವಪಕ್ಷ.

ಏಕೆಂದರೆ, 'ಅಸತ್' 'ಶೂನ್ಯ' ಮೊದಲಾದ ಶಬ್ದಗಳ ಪ್ರವೃತ್ತಿ ನಿಮಿತ್ತ 'ನಿಷೇಧ್ಯತ್ವ' 'ನಿಸ್ಸ್ವರೂಪತ್ವ' ಮೊದಲಾದುದು. ಇದನ್ನು ಈಶ್ವರನಲ್ಲಿ ಒಪ್ಪಲು ಸಾಧ್ಯವಿಲ್ಲ. ಒಪ್ಪಿದರೆ ಸ್ವರೂಪಹಾನಿಯಾಗುವುದು. ಹಿಂದೆ ಹೇಳಿದ ಸ್ತ್ರೀತ್ವವನ್ನು ಒಪ್ಪಬಹುದು. ಏಕೆಂದರೆ ಅದರಿಂದ ಸ್ವರೂಪಹಾನಿಯಾಗುವುದಿಲ್ಲ. ಆದರೆ ಪ್ರಕೃತದಲ್ಲಿ ಹಾಗಲ್ಲ.

**ಪ್ರಶ್ನೆ :-** 'ನಿಷೇಧ್ಯತ್ವ' ಮೊದಲಾದುದು ಈಶ್ವರನಲ್ಲಿ ಇಲ್ಲದೇ ಹೋದರೂ ಅದು ಈಶ್ವರನ ಅಧೀನ ಎಂದಿಟ್ಟುಕೊಂಡು ತದಧೀನತ್ವನ್ಯಾಯದಿಂದ ಅಸದಾದಿ ಶಬ್ದ ವಾಚ್ಯತ್ವ ಹೇಳಬಹುದಲ್ಲವೇ?

**ಪರಿಹಾರ :-** ಅಸತ್ ಪದಾರ್ಥವು ಸ್ವರೂಪರಹಿತವಾದ್ದರಿಂದ. ಅದನ್ನು ನಿಯಮನ ಮಾಡುವ ಅವಶ್ಯಕತೆ ಇಲ್ಲ. ಹಾಗಾಗಿ ಈಶಾಧೀನತ್ವವೂ ಇಲ್ಲದೇ ಹೋಗಿ ತದಧೀನತ್ವ ನ್ಯಾಯಕ್ಕೆ ಇಲ್ಲಿ ಅವಕಾಶವಿಲ್ಲ.

**ಸಿದ್ಧಾಂತ :-** ಅಸದಾದಿ ಸರ್ವಶಬ್ದವಾಚ್ಯ ವಿಷ್ಣುವೇ. ಹೇಗೆಂದರೆ, ವಿಷ್ಣುವಿನಲ್ಲಿ 'ನಿಸ್ಸ್ವರೂಪತ್ವ' ಮೊದಲಾದ ಪ್ರಸಿದ್ಧವಾದ ಪ್ರವೃತ್ತಿನಿಮಿತ್ತ ಇಲ್ಲದೇ ಹೋದರೂ ಸ್ಮೃತ್ಯುಕ್ತವಾದ ಪ್ರವೃತ್ತಿನಿಮಿತ್ತ ಇದೆ. ''ಶಮೂನಂ ಕುರುತೇ'' ಎಂಬ ಸ್ಮೃತಿಯಲ್ಲಿ ಹೇಳಲ್ಪಟ್ಟ ದುರ್ಜನರಿಗೆ ಸುಖವಿಲ್ಲದಂತೆ ಮಾಡುವವನು ಎಂಬ ನಿಮಿತ್ತದಿಂದ ಶೂನ್ಯಶಬ್ದವಾಚ್ಯನಾಗುತ್ತಾನೆ ಎಂದರ್ಥ.

ಶಶವಿಷಾಣಾದಿ ಅಸತ್‌ಪದಾರ್ಥದಲ್ಲಿರುವ ಅಸತ್ವವೂ ಈಶಾಧೀನವೇ. ಹಾಗಾಗಿ ತದಧೀನತ್ವ ನ್ಯಾಯವನ್ನು ಇಲ್ಲಿ ಆಶ್ರಯಿಸಬಹುದು.

ಪೂರ್ವಪಕ್ಷ ಸಿದ್ಧಾಂತ ಫಲ ಹಿಂದೆ ಹೇಳಿದಂತೆ ಸಮನ್ವಯಸೂತ್ರದ ಮೇಲಿನ ಆಕ್ಷೇಪ ಹಾಗು ಅದರ ಸಮಾಧಾನವೇ ಆಗಿದೆ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಮೊದಲನೆಯ ಅಧ್ಯಾಯದ ನಾಲ್ಕನೆಯ ಪಾದವು ಸಮಾಪ್ತವಾಯಿತು.**

# ಎರಡನೇ ಅಧ್ಯಾಯದ ಮೊದಲನೆಯ ಪಾದ

## ॥ ಓಂ ಸ್ಮೃತ್ಯನವಕಾಶ ದೋಷ ಪ್ರಸಂಗ ಇತಿ ಚೇನ್ನಾನ್ಯ ಸ್ಮೃತ್ಯನವಕಾಶ ದೋಷ ಪ್ರಸಂಗಾತ್ ಓಂ ॥ ೨-೧-೧

ಪ್ರಥಮಾಧ್ಯಾಯದಲ್ಲಿ ಹೇಳಿದ ಸಮನ್ವಯದ ಸ್ಥಿರತೆಗೋಸ್ಕರ ಇಲ್ಲಿ ವಿರೋಧ ಪರಿಹಾರ ಮಾಡುವುದರಿಂದ ಪೂರ್ವಾಧ್ಯಾಯದಿಂದ ಇದಕ್ಕೆ ಹೇತು-ಹೇತುಮದ್‌ಭಾವ ಸಂಗತಿಯಿದೆ. ಅಂದರೆ ವಿರೋಧನಿರಾಸವು ಕಾರಣ. ಇದರಿಂದ ಸಿದ್ಧವಾಗುವ ಕಾರ್ಯ ಸಮನ್ವಯ.

ಯುದ್ಧದಲ್ಲಿ ಅತಿ ದುರ್ಬಲರಾದ ಕಾಲಾಳುಗಳು ಮೊದಲು ಬರುತ್ತಾರೆ ಅವರ ಭಂಗವಾದ ಬಳಿಕ ಅಶ್ವಾದಿಗಳ ಪ್ರವೃತ್ತಿ. ಅದರಂತೆ ದುರ್ಬಲವಾದ ಯುಕ್ತಿ ವಿರೋಧದ ಪ್ರವೃತ್ತಿ ಮೊದಲು ಬಳಿಕ ಸಮಯ, ಶ್ರುತಿ, ಯುಕ್ತಿ ಸಹಿತ ಶ್ರುತಿಗಳ ಪ್ರವೃತ್ತಿ. ಅದೇ ಕ್ರಮದಿಂದ ೪ ಪಾದಗಳಲ್ಲಿ ಅವುಗಳ ನಿರಾಸ ಮಾಡಿದ್ದಾರೆ. (ಚಂದ್ರಿಕಾದಲ್ಲಿ ಮಹಾಮಲ್ಲಭಂಗ ನ್ಯಾಯವನ್ನೂ 'ಯದ್ವಾ' ಎಂದು ಹೇಳಿದ್ದಾರೆ. ಅದನ್ನು ಅಲ್ಲೇ ತಿಳಿಯಬೇಕು.)

ಪಾಶುಪತಾದಿ ಸ್ಮೃತಿಗಳು ಸಮಯ (ಸಿದ್ಧಾಂತ) ರೂಪವೂ ಆಗಿವೆ. ಮತ್ತು ತಾವು ಹೇಳಿದ ವಿಷಯದಲ್ಲಿ ಶ್ರುತಿ ಯುಕ್ತಿಗಳ ಆಧಾರವನ್ನು ತೋರಿಸಿರುವು-ದರಿಂದ ಯುಕ್ತಿ ಹಾಗೂ ಶ್ರುತಿರೂಪವೂ ಆಗಿ ಚತೂರೂಪವಾದ್ದರಿಂದ ಮೊದಲನೇ ಪಾದದ ಆದ್ಯಾಧಿಕರಣದಲ್ಲಿಯೇ ಸ್ಮೃತಿ ವಿರೋಧವನ್ನು ಪರಿಹರಿಸಲಾಗಿದೆ.

ಪೂರ್ವಾಧ್ಯಾಯದಲ್ಲಿ ಶ್ರುತಿ ಸಮನ್ವಯ ಮೂಲಕ ವಿಷ್ಣುವಿಗೆ ಹೇಳಲ್ಪಟ್ಟ ವಿಶ್ವ ಕರ್ತೃತ್ವವು ಯುಕ್ತವೋ ಅಲ್ಲವೋ ಎಂದು ಸಂದೇಹ. ಸರಿಯಲ್ಲ ಎಂದು ಪೂರ್ವಪಕ್ಷ. ಏಕೆಂದರೆ

೧) ಶಿವಾದಿಗಳಿಗೆ ಕರ್ತೃತ್ವ ಬೋಧಕವಾದ ಶೈವ-ಸಾಂಖ್ಯ-ಕಾಪಿಲಾದಿ ಅವೈದಿಕ ಸ್ಮೃತಿ ವಿರೋಧ ಬರುತ್ತದೆ.

೨) ಆ ಸ್ಮೃತಿಗಳಾದರೋ ಸರ್ವಜ್ಞರೆಂದು ಪ್ರಸಿದ್ಧರಾದ ಆಪ್ತರಾದ ಶಿವಾದಿಗಳಿಂದ ರಚಿತವಾದ್ದರಿಂದ ಪ್ರಬಲವಾಗಿವೆ.

೩) ವಿಷ್ಣುವಿಗೆ ಕರ್ತೃತ್ವ ಬೋಧಕ ಶ್ರುತಿಯಾದರೋ ಅಪೌರುಷೇಯ-ವಾದ್ದರಿಂದ ಆಪ್ತೋಕ್ತತ್ವ ಗುಣ ರಹಿತವಾದ್ದರಿಂದ ದುರ್ಬಲ.

೪) ಕಣಾದ ಮತದ ಪ್ರಕಾರ ಶ್ರುತಿಯು ಆಪ್ತೋಕ್ತವಾಗಿದೆ ಎಂದು ಒಪ್ಪಿದರೂ ಶೈವಾದಿ ಸ್ಮೃತಿಗಳು ಸ್ಪಷ್ಟಾರ್ಥ ಪ್ರತಿಪಾದಕವಾದ್ದರಿಂದ ಮತ್ತು ಯುಕ್ತಿ ಸಹಿತವಾದ್ದರಿಂದ ಪ್ರಬಲವಾಗಿವೆ.

೫) ಶ್ರುತಿಗೂ ಮತ್ತು ಸ್ಮೃತಿಗಳಿಗೂ ಸಮಾನ ಬಲವಿಲ್ಲದ್ದರಿಂದ ಮತ್ತು ವಿರುದ್ಧವೂ ಆದ್ದರಿಂದ ವಸ್ತುವಿಕಲ್ಪ (ಅಂದರೆ ಇಬ್ಬರೂ ಕರ್ತೃ ಎಂಬ ಪಕ್ಷ) ಸರಿಯಲ್ಲ.

೬) ಶ್ರುತಿಯು ದುರ್ಬಲವಾದ್ದರಿಂದ ಅದರಿಂದ ಸ್ಮೃತಿಗೆ ಬಾಧ ಹೇಳುವುದೂ ಸರಿಯಲ್ಲ.

೭) ದೇಶಾದಿ ಭೇದದಿಂದ ಎಲ್ಲರಿಗೂ ಕರ್ತೃತ್ವವನ್ನು ಹೇಳುವುದೂ ಸರಿಯಾಗುವುದಿಲ್ಲ. ಏಕೆಂದರೆ ಶ್ರುತಿ ಸ್ಮೃತ್ಯಾದಿಗಳಲ್ಲಿ ಅವರವರಿಗೆ ಸದಾ ಸರ್ವಕರ್ತೃತ್ವವನ್ನೇ ಹೇಳಿದ್ದಾರೆ.

೮) ಪೂರ್ವಮೀಮಾಂಸಾ ಶಾಸ್ತ್ರದ ಅವಿರೋಧಾಧಿಕರಣದಲ್ಲಿ ಶ್ರುತಿ ವಿರೋಧದಿಂದ ಸ್ಮೃತಿಗಳಿಗೆ ಅಪ್ರಾಮಾಣ್ಯವನ್ನು ಹೇಳಿದ್ದರೂ ಅದು ಶ್ರುತಿಮೂಲತ್ವೇನ ಸ್ಮೃತಿಗಳಿಗೆ ಪ್ರಾಮಾಣ್ಯ ಒಪ್ಪುವ ಪಕ್ಷದಲ್ಲಿ ಮಾತ್ರ. ಪ್ರಕೃತದಲ್ಲಿಯಾದರೂ ಶೈವಾದಿ ಸ್ಮೃತಿಗಳಿಗೆ ಶಿವಾದಿ ಪ್ರತ್ಯಕ್ಷ ಮೂಲತ್ವದಿಂದ ಪ್ರಾಮಾಣ್ಯವನ್ನು ಒಪ್ಪಲಾಗಿದೆ.

ಆದ್ದರಿಂದ ಆಯಾ ಸ್ಮೃತ್ಯನುಸಾರವಾಗಿ ಶ್ರುತಿಗಳನ್ನು ಅರ್ಥೈಸಬೇಕು. ಅಥವಾ ಬೌದ್ಧಾರ್ಹತಾದಿಸ್ಮೃತಿ ವಿರೋಧದಿಂದ ಅಪ್ರಾಮಾಣ್ಯವನ್ನೇ ಹೇಳಬೇಕಾಗುವುದು. ಆದ್ದರಿಂದ ವಿಷ್ಣುವಿಗೆ ವಿಶ್ವ ಕರ್ತೃತ್ವ ಸರಿಯಲ್ಲ.

**ಸಿದ್ಧಾಂತ** :- ಶ್ರುತಿ ಸಮನ್ವಯದಿಂದ ವಿಷ್ಣುವಿಗೆ ಹೇಳಲ್ಪಟ್ಟ ವಿಶ್ವಕರ್ತೃತ್ವವು ಸಮಂಜಸವೇ ಆಗಿದೆ. ಏಕೆಂದರೆ

೧) ಪಂಚರಾತ್ರಾದಿ ಸ್ಮೃತಿಗಳು ಶಿವಾದಿಗಳಿಗಿಂತಲೂ ಅಧಿಕವಾಗಿ ಸರ್ವಜ್ಞರಾದ ವಿಷ್ಣು ಮೊದಲಾದವರಿಂದ ರಚಿತವಾದ್ದರಿಂದ, ಶ್ರುತಿ ಸಂವಾದಿಯಾದ್ದರಿಂದ ಮತ್ತು ಶ್ರುತಿ ಸಹಾಯದಿಂದ ಸ್ಪಷ್ಟಾರ್ಥ ಪ್ರತಿಪಾದಕವೂ ಆದ್ದರಿಂದ ಶೈವಾದಿ ಸ್ಮೃತಿಗಳಿಗಿಂತ ಪ್ರಬಲವಾಗಿವೆ. ಅವುಗಳಿಂದ ಶೈವಾದಿ ಸ್ಮೃತಿಗಳೇ ಬಾಧಿತವಾಗುತ್ತವೆ. ಆದ್ದರಿಂದ ಅಪ್ರಮಾಣ

೨) ಶೈವಾದಿ ಸ್ಮೃತಿಗಳಲ್ಲಿ ಹೇಳಿದಂತೆ ಅನುಷ್ಠಾನ ಮಾಡಿದರೂ ಪ್ರತ್ಯಕ್ಷ-ಯೋಗ್ಯವೇ ಆದ ಫಲವೂ ಕೂಡ ಅನುಪಲಬ್ಧವಾದ್ದರಿಂದ ಫಲವಿಸಂವಾದಿ-ಯಾಗಿವೆ. ಆದ್ದರಿಂದಲೂ ಅಪ್ರಮಾಣ.

೩) ಆಪ್ತೋಕ್ತವಾಗಿಲ್ಲ. ಆದ್ದರಿಂದಲೂ ಅಪ್ರಮಾಣ ಈ ಕಾರಣದಿಂದ ವಿಷ್ಣುವೇ ವಿಶ್ವಕರ್ತನೆಂದು ಸಿದ್ಧವಾಯಿತು.

ಯದ್ಯಪಿ ಉಪಕ್ರಮಾದಿಗಳಿಂದಲೇ ವೇದಾರ್ಥವನ್ನು ನಿರ್ಣಯಿಸ-ಬೇಕೆಂದು ಸಮನ್ವಯ ಸೂತ್ರದಲ್ಲಿ ಹೇಳಿದ್ದಾರೆ. ಆದ್ದರಿಂದ ಸ್ಮೃತಿಸಂವಾದ ಪರೀಕ್ಷೆ ಬೇಕಾಗಿಲ್ಲ. ಆದರೂ ಉಪಕ್ರಮಾದಿಗಳನ್ನೂ ಸ್ಮೃತ್ಯನುಸಾರವಾಗಿ ನಿರ್ಧರಿಸಬೇಕು ಎಂದು ಶಂಕಿಸಿದ್ದರಿಂದ ಈ ಅಧಿಕರಣ ಆರಬ್ಧವಾಗಿದೆ.

ಶಾಸ್ತ್ರಯೋನಿತ್ವಾಧಿಕರಣಕ್ಕೂ ಇದಕ್ಕೂ ಏನು ವ್ಯತ್ಯಾಸವೆಂದರೆ - ಶೈವಾಗಮಾದಿಗಳಿಗೆ ದೃಷ್ಟ ಫಲದಲ್ಲಿ ಪ್ರಾಮಾಣ್ಯವನ್ನೊಪ್ಪಿ ಜಗತ್ಕಾರಣತ್ವ ವಿಷಯದಲ್ಲಿ 'ನಾವೇದ ವಿನ್ಮನುತೇ (ವೇದ ತಿಳಿಯದವನು ವಿಶ್ವಕರ್ತನನ್ನರಿ-ಯಲಾರ) ಎಂಬ ವಾಕ್ಯದ ಪ್ರಕಾರ ಪ್ರಾಮಾಣ್ಯವಿಲ್ಲ ಎಂದು ಸಾಧಿಸಲ್ಪಟ್ಟಿದೆ. ಇಲ್ಲಿಯಾದರೂ ಪ್ರತ್ಯಕ್ಷ ಫಲದಲ್ಲಿಯೇ ಶೈವಾಗ ಮಗಳಿಗೆ ಅಪ್ರಾಮಾಣ್ಯವನ್ನು ಹೇಳಲಾಗಿದೆ.

ಈ ಅಧ್ಯಾಯದ ಎಲ್ಲ ಅಧಿಕರಣಗಳಲ್ಲಿಯೂ ಜನ್ಮಾದಿ ಸೂತ್ರದಲ್ಲಿ ಹೇಳಲ್ಪಟ್ಟ ವಿಶ್ವಕರ್ತೃತ್ವದ ಆಕ್ಷೇಪವು ಪೂರ್ವಪಕ್ಷ ಫಲ. ವಿಶ್ವ ಕರ್ತೃತ್ವದ ಸಮರ್ಥನೆಯೇ ಸಿದ್ಧಾಂತದ ಫಲ.

## ॥ ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ ॥ ೨-೧-೨

ಪೂರ್ವಾಧಿಕರಣದಲ್ಲಿ ಅವೈದಿಕ ಸ್ಮೃತಿಗಳಿಗೆ ಫಲವಿಸಂವಾದದಿಂದ ಅಪ್ರಾಮಾಣ್ಯವನ್ನು ಹೇಳಲಾಗಿದೆ. ಅದೇ ಕಾರಣದಿಂದ ವೇದ ಮತ್ತು ವೈದಿಕ ಸ್ಮೃತಿಗಳಿಗೂ ಅಪ್ರಾಮಾಣ್ಯ ಬರಬೇಕಾದೀತು ಎಂದು ಶಂಕಿಸುವುದರಿಂದ ಈ ಅಧಿಕರಣಕ್ಕೆ ಆಪವಾದಿಕೀ ಸಂಗತಿ (ಪೂರ್ವಸಿದ್ಧಾಂತ ನ್ಯಾಯದಿಂದ ಪೂರ್ವಪಕ್ಷ).

ವೇದ ಮತ್ತು ವೈದಿಕ ಸ್ಮೃತಿಗಳು ಪ್ರಮಾಣವೋ ಅಲ್ಲವೋ ಎಂದು ಸಂದೇಹ. 'ವೃಷ್ಟಿಕಾಮಃ ಕಾರೀರ್ಯಾ ಯಜೇತ' ಎಂಬ ವಚನದಂತೆ ಕಾರೀರಿಯಾಗ ಮಾಡಿದರೂ ಮಳೆ ಕಂಡಿಲ್ಲವಾದ್ದರಿಂದ ಫಲ ವಿಸಂವಾದ-ದಿಂದಾಗಿ ಅಪೌರುಷೇಯವಾಗಿದ್ದರೂ ವೇದವು ಅಪ್ರಮಾಣ ಅಥವಾ ಅಪೌರುಷೇಯವೇ ಅಲ್ಲ. ವೈದಿಕ ಸ್ಮೃತಿಗಳೂ ಕೂಡ ಅಪ್ರಮಾಣವೇ. ಎಂದು ಪೂ.ಪ.

**ಸಿದ್ಧಾಂತ :-** 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ವಚನಗಳಿಂದ ಮತ್ತು ದೇವತಾಧಿಕರಣದ ಭಾಷ್ಯದಲ್ಲಿ ಹೇಳಲ್ಪಟ್ಟ ಯುಕ್ತಿಯಿಂದಲೂ ವೇದವು ಅಪೌರುಷೇಯ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಪುರುಷದೋಷ ನಿಮಿತ್ತಕವಾಗಿ ಅದರಲ್ಲಿ ದೋಷದ ಸಂಭವವೇ ಇಲ್ಲ. ಆದ್ದರಿಂದ ಸಾಕ್ಷಿಯಂತೆ ಅದು ಪ್ರಮಾಣವೇ ಆಗಿದೆ. ಮತ್ತು ವೇದದ ಅರ್ಥವು 'ನ ಚಕ್ಷುಃ' ಇತ್ಯಾದಿ ವಚನಾನುಸಾರವಾಗಿ ಚಕ್ಷುರಾದಿಗಳಿಗೆ ಯೋಗ್ಯವೇ ಅಲ್ಲವಾದ್ದರಿಂದ ಪ್ರಾಮಾಣ್ಯವನ್ನು ತಿಳಿಯಲು ಸಂವಾದಾಪೇಕ್ಷೆ ಬೇಕಾಗಿಲ್ಲ.

ವಿಶಿಷ್ಟ ಅಧಿಕಾರಿಗೆ ವೇದೋಕ್ತ ಫಲ ಕಂಡಿದ್ದರಿಂದ ಫಲ ವಿಸಂವಾದವೂ ಇಲ್ಲ. ಕೆಲವು ಕಡೆ ಕಂಡಿರದ್ದರೂ ಅದು ಕರ್ತೃ ಮೊದಲಾದರ ನ್ಯೂನತೆಗಳಿಂದ ಎಂದು ಭಾವಿಸಬೇಕು. ಅವೈದಿಕಸ್ಮೃತಿಗಳಿಗೆ ಪೂರ್ವಪಕ್ಷಿಗಳು ಸಂವಾದ-ದಿಂದಲೇ ಪ್ರಾಮಾಣ್ಯ ನಿಶ್ಚಯವೆಂದು ಒಪ್ಪಿರುವುದರಿಂದ ಅವುಗಳಿಗಿಂತ ಶ್ರುತಿ ಹಾಗೂ ಶ್ರೌತ ಸ್ಮೃತಿಗಳಿಗೆ ವ್ಯತ್ಯಾಸವಿರುವುದರಿಂದ ಅದರಂತೆ ಅಪ್ರಮಾಣ ಎನ್ನುವುದು ಸರಿಯಲ್ಲ.

## ॥ ಓಂ ಅಭಿಮಾನಿ ವ್ಯಪದೇಶಸ್ತು ವಿಶೇಷಾನು ಗತಿಭ್ಯಾಂ ಓಂ ॥ ೨-೧-೩

ಹಿಂದಿನ ಅಧಿಕರಣದಲ್ಲಿ 'ಫಲ ವಿಸಂವಾದ' ಎಂಬ ಯುಕ್ತಿ ವಿರೋಧವನ್ನು ಪರಿಹರಿಸಿದರು. ಅದು ಕೇವಲ ಯುಕ್ತಿ ವಿರೋಧ. ಅಂದರೆ ಅದರಿಂದ ಪ್ರತೀತಾರ್ಥವನ್ನೇನೂ ಕೈ ಬಿಡಲಿಲ್ಲ. ಫಲವಿಸಂವಾದವು ಕರ್ತ್ರ್ವೈಗುಣ್ಯ ನಿಮಿತ್ತಕ ಎಂದು ಉತ್ತರಿಸಲಾಯಿತು. ಈ ಅಧಿಕರಣದಲ್ಲಿ ದೃಢಯುಕ್ತಿ ವಿರೋಧವನ್ನು ಶಂಕಿಸಲಾಗಿದೆ. ಯಾವ ಯುಕ್ತಿ ವಿರೋಧ ಬಂದಾಗ ಪ್ರತೀತಾರ್ಥವನ್ನು ಬಿಡುತ್ತೇವೋ ಅದು ದೃಢ ಯುಕ್ತಿ ವಿರೋಧ. ಇದನ್ನು ಇಲ್ಲಿ ಪರಿಹರಿಸುವುದರಿಂದ ಸಂಗತಿ ಇದೆ. 'ಮೃತ್ ಅಬ್ರವೀತ್' ಇತ್ಯಾದಿ ಶ್ರುತಿಗಳು ಪ್ರಮಾಣವೋ ಅಲ್ಲವೋ ಎಂದು ಸಂದೇಹ.

ಈ ಶ್ರುತಿಗಳು ಪ್ರಮಾಣವಲ್ಲ ಎಂದು ಪೂ.ಪ. ಏಕೆಂದರೆ ಈ ವೇದ ವಾಕ್ಯವು ಆದಿಕಾಲೀನ ಪೃಥಿವ್ಯಾದಿಗಳಿಗೆ ವಕ್ತೃತ್ವವನ್ನು ಹೇಳುತ್ತದೆ. ಈಗಿನ ಪೃಥಿವ್ಯಾದಿಗಳು ಜಡವಾದ್ದರಿಂದ ವಚನ ಶೂನ್ಯ ಎಂಬುದು ಸಿದ್ಧವೇ ಆಗಿದೆ. ಇದರ ದೃಷ್ಟಾಂತದಿಂದ ಆದಿಕಾಲೀನ ಪೃಥಿವ್ಯಾದಿಗಳಿಗೂ ವಕ್ತೃತ್ವ ಇಲ್ಲ ಎಂಬ ಯುಕ್ತಿ ವಿರುದ್ಧವಾದ್ದರಿಂದ ಆ ಶ್ರುತಿಗಳು ಅಪ್ರಮಾಣ.

**ಪ್ರಶ್ನೆ:-** ಆದಿಕಾಲೀನ ಪೃಥಿವ್ಯಾದಿಗಳಿಗೆ ವಕ್ತೃತ್ವವಿಲ್ಲ ಎಂದು ಪೂ.ಪ ಮಾಡಬೇಕಾದರೆ ಆ ವಸ್ತುಗಳು ಸಿದ್ಧವಾಗಬೇಕಷ್ಟೇ ?

ಅವುಗಳನ್ನು ಸಿದ್ಧಪಡಿಸಲು ಶ್ರುತಿಗಳನ್ನೇ ಅವಲಂಬಿಸಬೇಕು. ಆ ಶ್ರುತಿಗಳು ಧರ್ಮಿಗ್ರಾಹಕ ಪ್ರಮಾಣ ಎನಿಸುತ್ತವೆ. ಉಪಜೀವ್ಯವೂ ಆಗಿವೆ. ಅಂತಹ ಶ್ರುತಿಗಳಿಗೆ ಯುಕ್ತಿಯಿಂದ ಬಾಧ ಹೇಳುವುದು ಸರಿಯಲ್ಲ.

**ಪರಿಹಾರ :-** ನಾವು ಶ್ರುತಿಯನ್ನು ಅವಲಂಬಿಸುವುದಿಲ್ಲ. ಈಗಿನ ಪೃಥಿವ್ಯಾದಿಗಳಿಗೆ ಒಂದು ಕಾರಣವಿರಲೇಬೇಕೆಂದು ಅನುಮಾನದಿಂದ ಆದಿಕಾಲೀನ ಪೃಥಿವ್ಯಾದಿ ಜಡವನ್ನು ಸಿದ್ಧಪಡಿಸಿ ಅದಕ್ಕೆ ವಕ್ತೃತ್ವವಿಲ್ಲವೆಂದು ಯುಕ್ತಿಯಿಂದ ಸಾಧಿಸುತ್ತೇವೆ. ಅಥವಾ ಪರರಿಗೆ ಸಿದ್ಧವಾದ ಮೃದಾದಿಗಳನ್ನೇ ಅನುವಾದ ಮಾಡಿ ವಕ್ತೃತ್ವಾಭಾವವನ್ನು ಸಾಧಿಸುತ್ತೇವೆ.

ಈ ಪ್ರಕಾರವಾಗಿ ವೇದೈಕ ದೇಶಕ್ಕೆ ಅಪ್ರಾಮಾಣ್ಯ ಬಂದರೆ 'ತತ್ಸಾಮಾನ್ಯಾತ್ ಇತರೇಷು ತಥಾತ್ವಂ' ಎಂಬ ಪೂರ್ವಮೀಮಾಂಸಾನ್ಯಾಯದಿಂದ ಸಮಸ್ತ ವೇದಕ್ಕೂ ಅಪ್ರಾಮಾಣ್ಯ ಬರುತ್ತದೆ.

**ಸಿದ್ಧಾಂತ :-** ಹಿಂದೆಯೇ ಹೇಳಿದಂತೆ ವೇದವು ನಿತ್ಯ. ಅದರಲ್ಲಿ ದೋಷ ಸಂಶಯಕ್ಕೆ ಆಸ್ಪದವೇ ಇಲ್ಲ. ಅಪ್ರಾಮಾಣ್ಯ ದೂರತೋಪಾಸ್ತ. ಜಡಗಳಿಗೂ ವಕ್ತೃತ್ವವಿರಲು ಸಾಧ್ಯವೇ ಇಲ್ಲ. ವೇದವಾದರೂ ವಕ್ತೃತ್ವ ಹೇಳುತ್ತದೆ. ಇವೆರಡನ್ನು ಸರಿಗೂಡಿಸಲು ಮೃದ್ ಅಬ್ರವೀತ್ ಎಂಬುದು ಅಭಿಮಾನಿ ದೇವತೆಗೆ ವಕ್ತೃತ್ವವನ್ನು ಹೇಳುತ್ತದೆ ಎಂದು ಪೃಥಿವ್ಯಾದಿ ಅಭಿಮಾನಿ ದೇವತೆಗಳನ್ನು ಒಪ್ಪಲೇಬೇಕು. ಇದಕ್ಕೆ 'ಪೃಥಿವ್ಯಾದ್ಯಭಿಮಾನಿನ್ಯಃ' ಎಂಬ ವಚನವೂ ಮಹಾತ್ಮರ ಪ್ರತ್ಯಕ್ಷವೂ ಆಧಾರವಾಗಿದೆ. ಆ ದೇವತೆಗಳಿಗೆ ವಕ್ತೃತ್ವಾದಿಗಳಿಗೆ ಉಪಯೋಗಿಯಾದ ಶರೀರವನ್ನೂ ನಮ್ಮಂಥವರಿಗೆ ಕಾಣದಿರುವುದರಿಂದ ಅವರಿಗೆ ಅಂತರ್ಧಾನ ಶಕ್ತಿಯನ್ನೂ ಒಪ್ಪಬೇಕು. ಮತ್ತು 'ಮೃತ್' ಮೊದಲಾದ ಶಬ್ದಗಳ ಪ್ರವೃತ್ತಿ ನಿಮಿತ್ತ ಮೃತ್ತ್ವವೂ ಮೊದಲಾದದ್ದು. ಅದು ದೇವತೆಗಳ ಅಧೀನ ಆದ್ದರಿಂದ ತದಧೀನತ್ವ ನ್ಯಾಯದಿಂದ ಆ ಶಬ್ದಗಳು ಮುಖ್ಯವಾಗಿ ದೇವತಾ ವಾಚಕಗಳೇ ಆಗಿವೆ.

ಆ ದೇವತೆಗಳಿಗೆ ವಕ್ತೃತ್ವವನ್ನು ಅಂಗೀಕರಿಸಿದರೆ ಯುಕ್ತಿ ವಿರೋಧವೇನೂ ಇಲ್ಲವಾದ್ದರಿಂದ ವೇದವು ಪ್ರಮಾಣವೇ ಆಗಿದೆ.

## ॥ ಓಂ ಅಸದಿತಿ ಚೇನ್ನ ಪ್ರತಿಷೇಧ ಮಾತ್ರತ್ವಾತ್ ಓಂ ॥
## ೨-೧-೪

ಶ್ರುತಿರಹಿತವಾದ ಯುಕ್ತಿ ವಿರೋಧ ಪರಿಹಾರಕ್ಕಾಗಿ ವೇದಗಳಿಗೆ ಅನ್ಯಾರ್ಥ ಮಾಡಬೇಕೆಂದು ಪೂರ್ವಾಧಿಕರಣದ ನ್ಯಾಯ. ಹೀಗಿದ್ದ ಮೇಲೆ ಶ್ರುತಿ ಸಹಿತವಾದ ಆದ್ದರಿಂದಲೇ ಸುದೃಢವಾದ ಯುಕ್ತಿಗಳಿಂದ ಬಂದ ವಿರೋಧ ಪರಿಹಾರಕ್ಕಾಗಿ 'ಸದೇವ ಸೋಮ್ಯ ಇದಮಗ್ರ ಆಸೀತ್' ಇತ್ಯಾದಿ ವಾಕ್ಯಗಳಿಗೆ ವಿಷ್ಣುವನ್ನು ಬಿಟ್ಟು ಬೇರೆ ಅರ್ಥ ಕಲ್ಪಿಸಬೇಕೆಂದು ಕೈಮುತ್ಯ ನ್ಯಾಯದಿಂದ ಸಿದ್ಧವಾಗುತ್ತದೆ ಎಂದು ಪೂರ್ವಸಿದ್ಧಾಂತ ನ್ಯಾಯದಿಂದ ಪೂ.ಪ. ಮಾಡುವ

ಪ್ರಯುಕ್ತ ಆಪವಾದಿಕೀ ಸಂಗತಿ. ವಿಷ್ಣುವಿಗೆ ವಿಶ್ವ ಕರ್ತೃತ್ವವನ್ನು ಹೇಳುವಂತಹ ವೇದವು ಪ್ರಮಾಣವೋ ಅಲ್ಲವೋ? ಎಂದು ಸಂದೇಹ. ಅಲ್ಲವೆಂದು ಪೂರ್ವಪಕ್ಷ. ಏಕೆಂದರೆ ವಿಷ್ಣುವು ಜಗತ್ ಕಾರಣನಲ್ಲ. ವಿಶ್ವ ಪ್ರಾಗಭಾವವೇ ವಿಶ್ವಕ್ಕೆ ಕಾರಣ. ಘಟಕ್ಕೆ ಘಟಪ್ರಾಗಭಾವ ಕಾರಣ ಅದು ಘಟಕ್ಕಿಂತ ನಿಯಮೇನ ಪೂರ್ವಕ್ಷಣ ವೃತ್ತಿಯಾಗಿದೆ. ಮತ್ತು ಅನನ್ಯಥಾ ಸಿದ್ಧವೂ ಆಗಿದೆ. (ಘಟಕ್ಕೆ ಕುಂಬಾರನೂ ಕಾರಣ. ಅನನ್ಯಥಾಸಿದ್ಧ ಮತ್ತು ನಿಯತ ಪೂರ್ವಕ್ಷಣ ವೃತ್ತಿಯಾದ್ದರಿಂದ. ಆದರೆ ಕುಂಬಾರನ ತಂದೆ ನಿಯತ ಪೂರ್ವವೃತ್ತಿಯಾದರೂ ಅನನ್ಯಥಾ ಸಿದ್ಧನಲ್ಲ. ಅನ್ಯಥಾ ಸಿದ್ಧನೇ ಆಗಿದ್ದಾನೆ.) ಆದ್ದರಿಂದ ವಿಶ್ವಪ್ರಾಗ-ಭಾವತೇ ಕಾರಣ. ಈ ಯುಕ್ತಿಗೆ ಅಸದೇವ (ಪ್ರಾಗಭಾವವೇ) ಇದಮಗ್ರ ಆಸೀತ್ ಎಂಬ ಶ್ರುತಿಯ ಸಹಾಯವೂ ಇದೆ. ಹೀಗೆ ವಿಶ್ವಪ್ರಾಗಭಾವಕ್ಕೆ ಕಾರಣತ್ವವು ಸಿದ್ಧವಾಯಿತು. ಇನ್ನು - 'ವಿಮತಾ ಭಾವಾಃ ಅಸಂತಃ ಭಾವತ್ವಾತ್' ಕಾರ್ಯವಸ್ತುವು ಭಾವ ವಸ್ತುವಾಗಿದೆ. ಅದು ಪ್ರಲಯದಲ್ಲಿ-ರುವುದಿಲ್ಲ. ಅದರಂತೆ ಈಶ್ವರ ಅದೃಷ್ಟ ಇತ್ಯಾದಿ ವಸ್ತುಗಳೂ ಕೂಡ ಭಾವ ವಸ್ತುವಾದ್ದರಿಂದ ಪ್ರಲಯದಲ್ಲಿರುವುದಿಲ್ಲ ಎಂದೂ ಸಿದ್ಧವಾಗುತ್ತದೆ. ಆದರೆ ಪ್ರತಿಯೊಂದು ಕಾರ್ಯವು ಕರ್ತೃ ಮತ್ತು ಉಪಾದಾನ ಪೂರ್ವಕವಾಗಿರಬೇಕು ಎಂಬ ನಿಯಮದಿಂದ ಪರಿಶೇಷಾತ್ ವಿಶ್ವಪ್ರಾಗಭಾವವೇ ವಿಶ್ವಕ್ಕೆ ಕರ್ತೃ ಮತ್ತು ಉಪಾದಾನ ಎಂದು ಒಪ್ಪಬೇಕು. ಈ ಯುಕ್ತಿಗೆ ಅಥವಾ ಪರಿಶೇಷಕ್ಕೆ 'ಅಸದೇವ ತನ್ಮನೋಽ ಕುರುತ' ಎಂಬ ಶ್ರುತಿ ಸಹಾಯವೂ ಇದೆ. ಈಶ್ವರನನ್ನೂ ಕಲ್ಪಿಸಿ ಅವನಿಗೆ ಕರ್ತೃತ್ವವನ್ನೂ ಕಲ್ಪಿಸುವುದಕ್ಕಿಂತ ಸಿದ್ಧವಾದ ವಿಶ್ವಪ್ರಾಗಭಾವಕ್ಕೆ ಉಪಾದಾನತ್ವವನ್ನೂ ಕರ್ತೃತ್ವವನ್ನು ಕಲ್ಪಿಸಿದರೆ ಲಾಘವವೂ ಇದೆ. 'ವೃಕ್ಷೇಣ ಸ್ಥೀಯತೇ' ಎಂಬಲ್ಲಿ ವೃಕ್ಷಕ್ಕೆ ತೃತೀಯಾ ಬೋಧಿತ ಕರ್ತೃತ್ವವಿರುವಂತೆ ಅಚೇ-ತನವಾದರೂ ಪ್ರಾಗಭಾವಕ್ಕೆ ಕರ್ತೃತ್ವ ಒಪ್ಪಿದರೆ ಅನುಪಪತ್ತಿ ಏನೂ ಇಲ್ಲ.

ಮತ್ತು ಅಕಸ್ಮಾತ್ ನದೀ ದಡವು ಬೀಳುವಂತೆ ಕರ್ತೃವಿಲ್ಲದೇ ವಿಶ್ವವು ಉತ್ಪನ್ನವಾಯಿತೆಂದು ಹೇಳಬಹುದು. ಅಥವಾ ಘಟವು ಜೀವಕರ್ತೃಕವಾಗಿ-ರುವಂತೆ ವಿಶ್ವವೂ ಕೂಡ ಜೀವ ಕರ್ತೃಕ ಎಂದು ಹೇಳಬಹುದು. ಅಥವಾ ಮೊಸರ ಹಾಲಿನಿಂದ ಆಗುವಂತೆ ವಿಶ್ವವು ಜಡಕರ್ತೃಕವೂ ಆಗಬಹುದು. ಈ ಯುಕ್ತಿ-ಗಳಿಗೆ 'ಅಕಸ್ಮಾದ್ಧಿ ಇದಮಾವಿರಾಸೀತ್' ಇತ್ಯಾದಿ ಶ್ರುತಿಸಹಾಯವೂ ಇದೆ.

ಇವುಗಳಿಂದ ವಿರುದ್ಧವಾದ ಪ್ರಯುಕ್ತ ವಿಷ್ಣುವಿಗೆ ಕರ್ತೃತ್ವ ಸರಿಯಲ್ಲ.

**ಸಿದ್ಧಾಂತ :-** ವಿಷ್ಣುವಿಗೆ ಕರ್ತೃತ್ವವೆಂದರೆ ಜ್ಞಾನ ಇಚ್ಛಾ ಪ್ರಯತ್ನಾಶ್ರಯತ್ವರೂಪವಾದದ್ದೇ ಹೊರತು ಕೇವಲ ತೃತೀಯಾ ಯೋಗಿತ್ವ ರೂಪವಾದುದಲ್ಲ. ಅಂತಹ ಜ್ಞಾನೇಚ್ಛಾದಿ ರೂಪವಾದ ಕರ್ತೃತ್ವವು ಸ್ವರೂಪತಃ ನಿಷೇಧಾತ್ಮಕವಾದ ಪ್ರಾಗಭಾವದಲ್ಲಿರಲು ಶಕ್ಯವಿಲ್ಲ. ಮತ್ತು ಪ್ರಾಗಭಾವವನ್ನು ಉಪಾದಾನ ಕಾರಣ ಎಂದರೆ - ಕಾರ್ಯ ನಾಶವಾದರೆ ಕಾರಣ ಮಾತ್ರ ಉಳಿಯಬೇಕೆಂದು ನಿಯಮ ಇರುವುದರಿಂದ ಪ್ರಲಯದಲ್ಲಿ ಪ್ರಾಗಭಾವ ಮಾತ್ರ ಉಳಿಯುತ್ತದೆಂದು ಒಪ್ಪಬೇಕಾಗುತ್ತದೆ. ಇದು - 'ಘಟಾದಿಗಳ ಉತ್ಪತ್ತಿಯು ಭಾವಾಧೀನವಾಗಿ ಕಂಡಿದೆ. ಸೃಷ್ಟಿಯ ಆದಿಕಾಲೀನ ಉತ್ಪತ್ತಿಯೂ ಕೂಡ ಭಾವಾಧೀನವಾಗಬೇಕು ಉತ್ಪತ್ತಿ ರೂಪವಾದ್ದರಿಂದ' ಎಂಬ ಯುಕ್ತಿಯಿಂದ ಮತ್ತು 'ಘಟಾದಿನಾಶವು ಸಶೇಷವಾಗಿದೆ. ಭಾವರೂಪ ಅವಶೇಷ ಉಳ್ಳದ್ದಾಗಿದೆ. ಅದರಂತೆ ವಿಶ್ವನಾಶವೂ ನಾಶರೂಪವಾದ್ದರಿಂದ ಸಶೇಷವಾಗಬೇಕು ಎಂಬ ಯುಕ್ತಿಯಿಂದ ಪ್ರಲಯದಲ್ಲಿ ಭಾವ ವಸ್ತುಗಳು ಸಿದ್ಧವಾಗುವುದರಿಂದ ಪ್ರಾಗಭಾವಮಾತ್ರಾವಶೇಷವು ವಿರುದ್ಧವಾಗುತ್ತದೆ. ಪೂರ್ವೋಕ್ತವಾದ ಭಾವತ್ವಯುಕ್ತಿಯು 'ವಿಮತೋ ನಾಶಃ ಸಶೇಷಃ ನಾಶತ್ವಾತ್' ಎಂಬುದರಿಂದ 'ಸತ್ಪ್ರತಿಪಕ್ಷ' ಎಂಬ ದೋಷ ಉಳ್ಳದ್ದಾಗಿದೆ ಮತ್ತು ಪ್ರಲಯ ಕಾಲದಲ್ಲಿ ಭಾವತ್ವವಿದೆ. ಆದರೆ ಅಸತ್ತ್ವವಿಲ್ಲವೆಂದು ಭಾವತ್ವವು ವ್ಯಭಿಚಾರಿಯೂ ಆಗಿದೆ. ಆದ್ದರಿಂದ ಪ್ರಾಗಭಾವ ಮಾತ್ರಾವಶೇಷವು ಅಪ್ರಾಣಿಕವೇ ಆದ್ದರಿಂದ ಇಷ್ಟಾಪಾದನ ಎನ್ನಲು ಬರುವುದಿಲ್ಲ. ಯದ್ಯಪಿ ನಾಶತ್ವ ಹೇತು ಮತ್ತು ಉತ್ಪತ್ತಿ ಹೇತುಗಳು ತರ್ಕರೂಪವಾದ್ದರಿಂದ ಅಪ್ರಮಾಣ ಎನಿಸಬಹುದು. ಆದರೆ ಶುಷ್ಕ ತರ್ಕವು ಅಪ್ರಮಾಣವೇ ಹೊರತು ಆಗಮ ಸಹಿತವಾದದ್ದಲ್ಲ. ನಾವು ಹೇಳಿದ ತರ್ಕವಾದರೂ ಯತೋ ವಾ ಇಮಾನಿ ಎಂಬ ಆಗಮ ಸಹಿತ ವಾದ್ದರಿಂದ ಪ್ರಮಾಣವೇ ಆಗಿದೆ. ಇನ್ನು ವಿಶ್ವವು ನಿಷ್ಕಾರಣಕ ಅಥವಾ ಜೀವಕಾರಣಕ ಎಂಬ ವಾದಗಳೂ ಕೂಡ ಉಕ್ತಯುಕ್ತಿ ವಿರುದ್ಧವೇ ಆಗಿವೆ. ಅಂದರೆ ವಿಶ್ವವು ಭಾವವಸ್ತುಕಾರಣಕ ಎಂಬುದಕ್ಕೆ ಘಟಾದಿ ದೃಷ್ಟಾಂತವಿದೆ. ಆದರೆ ನಿಷ್ಕಾರಣಕತ್ವ ವಾದಕ್ಕೆ ದೃಷ್ಟಾಂತ ಇಲ್ಲ. ನದೀ ದಡ ಬೀಳುವುದು ನಿಷ್ಕಾರಣವಲ್ಲ. ಅದು ಈಶಕಾರಣಕ ಎಂದು

'ಪಯೋಂಬುವತ್.....' ಸೂತ್ರದಲ್ಲಿ ಸಮರ್ಥಿಸಲಾಗಿದೆ. ಇನ್ನು ಘಟಾದಿಗಳು ಜೀವ ಕರ್ತೃಕತ್ವವಾದಕ್ಕೆ ದೃಷ್ಟಾಂತ ಎಂದೆನಿಸಬಹುದಾದರೂ ದುಃಖಾದಿಗಳಲ್ಲಿ ಜೀವರಿಗೆ ಸ್ವಾತಂತ್ರ್ಯವಿಲ್ಲ ಆ ದೃಷ್ಟಾಂತದಿಂದ ಯಾವ ಕಾರ್ಯದಲ್ಲಿಯೂ ಜೀವರಿಗೆ ಸ್ವಾತಂತ್ರ್ಯವಿಲ್ಲವಾದ್ದರಿಂದ ವಿಶ್ವವು ಜೀವಕರ್ತೃಕವಲ್ಲ. 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳಲ್ಲಿರುವ 'ಅಸತ್' ಇತ್ಯಾದಿ ಶಬ್ದಗಳು 'ಏತೇನ ಸರ್ವೇ' ಎಂಬ ನ್ಯಾಯದಂತೆ ಈಶಪರವೇ ಆಗಿವೆ. ಆದ್ದರಿಂದ ವಿಷ್ಣುಕರ್ತೃತ್ವ ಶ್ರುತಿಗಳೂ ಪ್ರಮಾಣಗಳೇ ಆಗಿವೆ.

## ॥ ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್ ಓಂ ॥ ೨-೧-೫

ಪೂರ್ವಾಧಿಕರಣದಲ್ಲಿ - ಪ್ರಲಯಕಾಲದಲ್ಲಿ ಬ್ರಹ್ಮನಿಗೆ ಅಸತ್ತ್ವವನ್ನಂಗೀಕರಿಸಿ ವಿಶ್ವಪ್ರಾಗಭಾವಕ್ಕೇ ಕರ್ತೃತ್ವ ಎಂದು ಶಂಕಿಸಲಾಗಿತ್ತು. ಈ ಅಧಿಕರಣದಲ್ಲಿ ಹಿಂದಿನ ಸಿದ್ಧಾಂತದಂತೆ ಬ್ರಹ್ಮನಿಗೆ ಸತ್ತ್ವವನ್ನು ಅಂಗೀಕರಿಸಿ ಜೀವನಿಗೂ ಕರ್ತೃತ್ವವಿದೆ ಎಂದು ಶಂಕೆ ಮಾಡಿದ್ದಾರೆ. ಎಂದು ಸಂಗತಿ. ವಿಷ್ಣುವೇ ಕರ್ತ ಎಂದು ಶ್ರುತಿ ಸಮನ್ವಯದಿಂದ ಹೇಳಿದ್ದು ಯುಕ್ತವೋ ಅಯುಕ್ತವೋ ಎಂದು ಸಂದೇಹ. ಅಯುಕ್ತವೆಂದು **ಪೂರ್ವಪಕ್ಷ**. - 'ಪರೇಽವ್ಯಯೇ ಸರ್ವ ಏಕೀ ಭವಂತಿ' ಎಂಬ ಶ್ರುತಿಯು ಈಶನಿಗೂ ಮುಕ್ತರಿಗೂ ಐಕ್ಯವನ್ನು ಹೇಳುತ್ತದೆ. ಇದರಿಂದ ಮುಕ್ತ ಜೀವರು ಮುಕ್ತಿಗಿಂತಲೂ ಪೂರ್ವದಲ್ಲಿಯೂ ಈಶನ ಐಕ್ಯಉಳ್ಳವರೆಂದೇ ಸಿದ್ಧವಾಗುತ್ತದೆ. ಏಕೆಂದರೆ ಮೊದಲು ಭಿನ್ನರಾದವರು ಯಾವ ಕಾಲಕ್ಕೂ ಮತ್ತೊಬ್ಬರ ಐಕ್ಯ ಹೊಂದಲು ಶಕ್ಯವಿಲ್ಲ. ಆದ್ದರಿಂದ ಮೊದಲೂ ಐಕ್ಯ ಒಪ್ಪಿದರೆ ಈಶನು ಸಂಸಾರಿಜೀವನಿಂದ ಅಭಿನ್ನನಾದ ಪ್ರಯುಕ್ತ ವಿಶ್ವಕರ್ತನಾಗಲು ಶಕ್ಯವಿಲ್ಲ.

ಪ್ರಶ್ನೆ :- ಜೀವನು ಸಂಸಾರಾವಸ್ಥೆಯಲ್ಲೂ ಅಭಿನ್ನ ಎಂದು ಒಪ್ಪಿದರೆ 'ಅನಂತರ ಅಭಿನ್ನನಾಗುವನು' ಎಂಬ ಅರ್ಥದ 'ಚ್ವಿ' ಪ್ರತ್ಯಯಾಂತವಾದ 'ಏಕೀಭವಂತಿ' ಎಂಬ ಪ್ರಯೋಗ ಹೇಗೆ?

**ಪರಿಹಾರ :-** ಸಂಸಾರಾವಸ್ಥೆಯಲ್ಲಿ ಜೀವನಿಗೆ ಈಶನಿಂದ ಭೇದ-ಅಭೇದ ಎರಡೂ ಇತ್ತು ಅನಂತರ ಭೇದ ನಿವೃತ್ತಿಯಾಯಿತು ಎಂದು ಅದರ ಅರ್ಥ. ಏವಂಚ ಜೀವ-ಈಶರ ಐಕ್ಯವು ಯುಕ್ತವಾಗಬೇಕಾದರೆ (೧) ಅವರ ಸರ್ವ-ಕರ್ತೃತ್ವ - ಅಲ್ಪ ಕರ್ತೃತ್ವಗಳನ್ನು ಕೈಬಿಡಬೇಕು. ಅಥವಾ (೨) ಈಶಧರ್ಮ-ಗಳನ್ನು ಕೈಬಿಟ್ಟು ಅವನಿಗೆ ಜೀವನ ಲಕ್ಷಣವನ್ನು ಹೇಳಬೇಕು. ಅಥವಾ (೩) ಜೀವನ ಧರ್ಮಗಳನ್ನು ಕೈಬಿಟ್ಟು ಅವನಿಗೆ ಈಶನ ಲಕ್ಷಣವನ್ನು ಹೇಳಬೇಕು. ಮೊದಲ ಮತ್ತು ಎರಡನೆಯ ಕಲ್ಪದಲ್ಲಿ ಈಶನಲ್ಲಿ ಸರ್ವಕರ್ತೃತ್ವ ಇಲ್ಲದಂತಾಗಿ ಲಕ್ಷಣಕ್ಕೆ ಅಸಂಭವ ದೋಷ ಬರುತ್ತದೆ. ಮೂರನೆಯ ಕಲ್ಪದಲ್ಲಿ ಅತಿ ವ್ಯಾಪ್ತಿ ದೋಷ ಬರುತ್ತದೆ.

**ಸಿದ್ಧಾಂತ :-** 'ಏಕೀಭವಂತಿ' ಎಂಬ ಶ್ರುತಿಯ ಪೂರ್ವವಾಕ್ಯದಲ್ಲಿ 'ನಿರಂಜನಃ ಪರಮಂ ಸಾಮ್ಯಮುಪೈತಿ' ಎಂದು ಸಾಮ್ಯ ಹೇಳಲಾಗಿದೆ.

ಉತ್ತರ ವಾಕ್ಯದಲ್ಲಿ 'ಪುರುಷಮುಪೈತಿ' ಎಂದು ಈಶಪ್ರಾಪ್ತಿಯನ್ನು ಜೀವನಿಗೆ ಹೇಳಲಾಗಿದೆ. ಈ ಸಾಮ್ಯವಾಗಲೀ ಪ್ರಾಪ್ತಿಯಾಗಲೀ ಭೇದವಿದ್ದಲ್ಲಿ ಮಾತ್ರ ಸಂಭಾವಿತ. ಆದ್ದರಿಂದ ಐಕ್ಯಕ್ಕೆ ಅವುಗಳ ವಿರೋಧ ಬರುತ್ತದೆ. ಮತ್ತು 'ಯಥೋದಕಂ' ಎಂಬ ವಾಕ್ಯವು ಮುಕ್ತಿಯಲ್ಲಿ ಜೀವರು ಈಶನಲ್ಲಿ ನೀರಿನಲ್ಲಿ ಬೆರೆತ ನೀರಿನಂತೆ ಸೇರುತ್ತಾರೆ ಎಂದು ಭೇದವನ್ನೇ ಹೇಳಿದ್ದರಿಂದ ಅವರ ವಿರೋಧವೂ ಬರುತ್ತದೆ ಮತ್ತು ಮೊದಲು ಭಿನ್ನಾಭಿನ್ನವಾದ ವಸ್ತುವು ಅನಂತರ ಅಭಿನ್ನವಾದದ್ದು ಎಲ್ಲಿಯೂ ಕಂಡಿಲ್ಲ. ಮತ್ತು ಮುಖ್ಯವಾದ ಐಕ್ಯವೇ ವಿವಕ್ಷಿತವಾಗಿದ್ದರೆ 'ಪರೇಣ ಏಕೀ ಬವಂತಿ' ಎಂದು ಇರಬೇಕಿತ್ತು ಹೊರತು 'ಪರೇ' ಎಂದು ಸಪ್ತಮೀ ಅಲ್ಲ.

ಆದ್ದರಿಂದ 'ಗೋಷ್ಠೇ ಗಾವಃ ಏಕೀಭವಂತಿ' ಎಂಬಲ್ಲಿ ಹೇಳುವಂತೆ ಸ್ಥಾನೈಕ್ಯ ಮತ್ಯೈಕ್ಯಾದಿಗಳನ್ನೇ ಹೇಳಬೇಕೇ ಹೊರತು ಅಭೇದವಲ್ಲ ಆದ್ದರಿಂದ ವಿಷ್ಣುವಿಗೆ ಹೇಳಲ್ಪಟ್ಟ ವಿಶ್ವ ಕರ್ತೃತ್ವವು ಯುಕ್ತವೇ ಆಗಿದೆ.

## ॥ ಓಂ ತದನನ್ಯತ್ವಮಾರಂಭಣ ಶಬ್ದಾದಿಭ್ಯಃ ಓಂ ॥
## ೨-೧-೬

ಹಿಂದಿನ ಅಧಿಕರಣದಲ್ಲಿ ವಿಷ್ಣುವಿಗೆ ವಿಶ್ವಕರ್ತೃತ್ವವೇ ಇಲ್ಲ ಎಂಬ ಶಂಕೆಯನ್ನು ಪರಿಹರಿಸಲಾಯಿತು. ಇಲ್ಲಿ ಶ್ರುತಿಸಿದ್ಧವಾದ ವಿಶ್ವಕರ್ತೃತ್ವವನ್ನು ಒಪ್ಪಿ ಆ ಕರ್ತೃತ್ವವು ಈಶಾಧೀನ ವಲ್ಲದ ಸ್ವತಂತ್ರ ಸಾಧನಾಂತರಗಳ ಅಪೇಕ್ಷೆ ಉಳ್ಳದ್ದು (ಜಗತ್ ಸೃಷ್ಟಿಗೆ ಈಶನಲ್ಲದೆ ಬೇರೆ ಸ್ವತಂತ್ರ ಸಾಧನಗಳ ಆವಶ್ಯಕತೆ ಇದೆ) ಎಂಬ ಶಂಕೆಯನ್ನು ಪರಿಹರಿಸಲಾಗುವುದು. ಆದ್ದರಿಂದ ಅನಂತರ ಸಂಗತಿ. ಜನ್ಮಾದಿ ಸೂತ್ರದಲ್ಲಿ ವಿಷ್ಣುವೇ ಸ್ವತಂತ್ರ ಕರ್ತಾ ಎಂದು ಹೇಳಿದ್ದು ಸರಿಯೋ ಅಲ್ಲವೋ ಎಂದು ಸಂದೇಹ. ಅಲ್ಲ ಎಂದು ಪೂರ್ವಪಕ್ಷ. ಲೋಕದಲ್ಲಿ ಪಟಾದಿ ಉತ್ಪತ್ತಿಯು ನೇಕಾರ ಮಾತ್ರ ಅಲ್ಲದೆ ಬೇರೆ ಸ್ವತಂತ್ರ ಸಾಧನದಿಂದಾದದ್ದು ಕಂಡಿದೆ. ಅದರಂತೆ ಮಹದಾದಿ ವಿಶ್ವ ಸೃಷ್ಟಿಯು ಸೃಷ್ಟಿಯೇ ಎನಿಸಿದ್ದರಿಂದ ವಿಷ್ಣು ಮಾತ್ರವಲ್ಲದೇ ಇತರ ಸ್ವತಂತ್ರ ಸಾಧನದಿಂದಾಗಿದೆ. ಇತ್ಯಾದಿ ಬಹುಯುಕ್ತಿ ವಿರುದ್ಧವಾದ್ದರಿಂದ, ಮತ್ತು 'ಅದ್ಭ್ಯಃ ಸಂಭೂತಃ' ಇತ್ಯಾದಿ ಶ್ರುತಿಯು ನೀರೇ ಮೊದಲಾದ ಸ್ವತಂತ್ರ ಸಾಧನಗಳಿಂದ ವಿಶ್ವದ ಉತ್ಪತ್ತಿಯನ್ನು ಹೇಳಿದ್ದರಿಂದ ಆಯುಕ್ತಿ ಶ್ರುತಿಗಳಿಂದ ವಿಷ್ಣುವಿಗೆ ಮಾತ್ರ ಸ್ವಾತಂತ್ರ್ಯೇಣ ಕರ್ತೃತ್ವ, ಬೇರೆ ಸ್ವತಂತ್ರ ಸಾಧನ ಇಲ್ಲ ಎಂಬುದು ವಿರುದ್ಧವಾಗುತ್ತದೆ.

**ಸಿದ್ಧಾಂತ** :- ಬೇರೆ ಯಾವ ಸ್ವತಂತ್ರ ಸಾಧನದ ಅಪೇಕ್ಷೆ ಇಲ್ಲದೆ ವಿಷ್ಣು ಕರ್ತನಾಗಿದ್ದಾನೆ 'ಕಿಂಸ್ವಿದಾಸೀತ್' ಎಂಬ ಶ್ರುತಿಯು ಪ್ರಲಯದಲ್ಲಿ ಯಾವ ಸಾಧನವೂ ಇದ್ದಿಲ್ಲ ಎಂದು ಹೇಳಿದೆ. 'ನಾಸದಾಸೀತ್' ಎಂಬ ಶ್ರುತಿಯೂ ಕೂಡ ಆಗ ಆಕಾಶಾದಿ ಭೂತಗಳಿದ್ದಿಲ್ಲ ಎಂದು ಹೇಳುತ್ತಿದೆ. ಆದರೆ ಪ್ರಲಯ-ದಲ್ಲಿ ಸಾಧನಗಳಿದ್ದವು ಎಂದು ಹೇಳುವ ಶ್ರುತಿಗಳೂ ಇವೆ. 'ನಾಸದಾಸೀತ್' ಎಂಬ ವಾಕ್ಯದಲ್ಲಿಯೇ ಮುಂದೆ 'ತಮಸ್ಸು ಇತ್ತು' ಎಂದೂ ಹೇಳಲಾಗಿದೆ. ಇದರ ವಿರೋಧ ಪರಿಹಾರಕ್ಕಾಗಿ 'ಪ್ರಲಯದಲ್ಲಿ ಸಾಧನಗಳಿದ್ದವು ಆದರೆ ಸ್ವತಂತ್ರವಾಗಿ ಇದ್ದಿಲ್ಲ ಎಂದು ಅರ್ಥ ಮಾಡಬೇಕು. ಆದ್ದರಿಂದ ಪೂ.ಪ ಹೇಳಿದ ಸೃಷ್ಟಿತ್ವ ಯುಕ್ತಿಯು 'ಕಿಂಸ್ವಿದಾಸೀತ್' ಎಂಬ ಶ್ರುತಿಯಿಂದ

ಬಾಧಿತವಾಗಿದೆ. ಮತ್ತು ಲೋಕದಲ್ಲಿ ಪಟಾದಿಸೃಷ್ಟಿಯು ಪರತಂತ್ರನಾದ ನೇಕಾರನಿಂದಾಗಿದ್ದು. ಅದಕ್ಕೆ ಬೇರೆ ಸ್ವತಂತ್ರ ಸಾಧನಗಳು (ಅಂದರೆ ನೇಕಾರನ ಅಧೀನವಲ್ಲದ ನೂಲು ಮುಂತಾದವುಗಳು) ಬೇಕು. ಆದರೆ ಮಹದಾದಿ ವಿಶ್ವ ಸೃಷ್ಟಿಯು ಸ್ವತಂತ್ರ ಈಶನಿಂದಾದುದರಿಂದ ಇದಕ್ಕೆ ಬೇರೆ ಸ್ವತಂತ್ರ ಸಾಧನಗಳು ಬೇಕಾಗಿಲ್ಲ ಎಂಬ ಯುಕ್ತಿಯಿಂದಲೂ ಬಾಧಿತ. ಪ್ರಾಣಾದಿ ಜೀವರಲ್ಲಿ ವಿಷ್ಣುವಿನ ಪ್ರವೇಶದಿಂದ ಕ್ರಿಯೆ ಉಂಟಾಗುವುದರಿಂದ ಅವರು ಅಸ್ವಂತ್ರ-ರಾಗಿದ್ದಾರೆ ಅದರಂತೆ 'ಪ್ರಕೃತಿಂ ಪುರುಷಂ ಚೈವ' ಎಂಬ ಸ್ಮೃತಿಯ ಪ್ರಕಾರ ಎಲ್ಲ ಸಾಧನಗಳಲ್ಲಿಯೂ ಈಶ ಪ್ರವೇಶದಿಂದಾಗಿ ಅಸ್ವಾತಂತ್ರ್ಯ ನಿಶ್ಚಯವಾದ ಪ್ರಯುಕ್ತ 'ಸಾಧನಗಳು ಸ್ವತಂತ್ರ' ಎಂಬುದು ಬಾಧಿತವಾಗುತ್ತದೆ. ಈಶಭಿನ್ನ-ವಾದ ಸ್ವತಂತ್ರ ಸಾಧನಗಳೂ ಯಾವ ಪ್ರಮಾಣದಿಂದಲೂ ಉಪಲಬ್ಧವಾಗಿಲ್ಲ. 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯಿಂದ ನೀರು ಎಂಬ ಸಾಧನ ಕಂಡಿದೆ ಎಂಬ ಶಂಕೆಯೂ ಸರಿಯಲ್ಲ - 'ದ್ರವ್ಯಂ ಕರ್ಮಚ' ಎಂಬ ಶ್ರುತಿಯಿಂದ ಅದು ಈಶಾಧೀನ ಸಾಧನವೇ ಹೊರತು ಸ್ವತಂತ್ರವಲ್ಲ. ವಿಷ್ಣುವು ಸಮರ್ಥ-ನಾದ್ದರಿಂದ ಅವನಿಗೆ ಅಸ್ವತಂತ್ರವಾದ ಸಾಧನವಾದರೂ ಏಕೆ ಬೇಕು? ಎಂದರೆ ಲೀಲಾರ್ಥವಾಗಿ ಅವುಗಳನ್ನು ಉಪಯೋಗಿಸುತ್ತಾನೆ ಎಂಬುದೇ ಸಮಾಧಾನ.

## ॥ ಓಂ ಇತರ ವ್ಯಪದೇಶಾದ್ಧಿತಾಕರಣಾದಿ ದೋಷಪ್ರಸಕ್ತಿಃ ಓಂ ॥ ೨-೧-೭

ಪ್ರಾಣಾದಿ ಜೀವರಿಗೆ ಸ್ವತಂತ್ರ ಕರ್ತೃತ್ವದ ಅನುಭವವಿರುವುದರಿಂದ ಪೂರ್ವಾಧಿಕರಣೋಕ್ತವಾದ ಅಸ್ವಾತಂತ್ರ್ಯವು ಸರಿಯಲ್ಲ ಎಂದು ಇಲ್ಲಿ ಆಕ್ಷೇಪ ಮಾಡಿದ್ದರಿಂದ ಆಕ್ಷೇಪಿಕೀ ಸಂಗತಿ ಇದೆ.

ಜನ್ಮಾದಿ ಸೂತ್ರದಲ್ಲಿ ಹೇಳಲ್ಪಟ್ಟ 'ವಿಷ್ಣುವೇ ಸ್ವತಂತ್ರಕರ್ತ' ಎಂಬ ವಿಷಯವು ಯುಕ್ತವೋ ಅಯುಕ್ತವೋ ಎಂದು ಸಂದೇಹ.

**ಪೂರ್ವಪಕ್ಷ** :- ಈಶನು ಚೇತನ ಹಾಗೂ ಕರ್ತನೂ ಆಗಿದ್ದಾನೆ ಅದರಂತೆ ಜೀವನೂ ಚೇತನನಾದ್ದರಿಂದ ಕರ್ತನಾಗಬೇಕು ಎಂದು ಚೇತನತ್ವಯುಕ್ತಿ ಇದೆ. ಇದಕ್ಕೆ 'ಜೀವಾತ್ ಭವಂತಿ ಭೂತಾನಿ' ಎಂಬ ಶ್ರುತಿ ಹಾಗೂ 'ಅಹಂ ಕರ್ತಾ'

ಎಂಬ ಅನುಭವದ ಸಂವಾದವೂ ಇದೆ. ಇಂತಹ ಯುಕ್ತಿಯಿಂದ ವಿಷ್ಣುವೇ ಕರ್ತಾ ಎನ್ನುವುದು ವಿರುದ್ಧವಾದ್ದರಿಂದ ಘಟಾದಿಗಳಿಗೆ ಜೀವನೇ ಕರ್ತಾ ಎಂದು ಸಿದ್ಧವಾದ ಮೇಲೆ ಮಹದಾದಿಗಳಿಗೂ ಅವನೇ ಕರ್ತನೆಂದರೆ ಲಾಘವವೂ ಇದೆ. ವಿಷ್ಣು ಕರ್ತನೆಂದರೆ ಗೌರವದೋಷ ಬರುತ್ತದೆ - ಹೇಗೆಂದರೆ, ವಿಷ್ಣುವು ಪ್ರತ್ಯಕ್ಷಕ್ಕೆ ಯೋಗ್ಯನೋ? ಅಯೋಗ್ಯನೋ? ಅಯೋಗ್ಯನೆಂದರೆ ಯಾವಾಗಲೂ ಅವನು ಪ್ರತ್ಯಕ್ಷನಾಗುವುದಿಲ್ಲವಾದ್ದರಿಂದ ಶ್ರವಣಾದಿಗಳು ವ್ಯರ್ಥ. ಯೋಗ್ಯನೆಂದರೆ ಯಾವಾಗಲೂ ಎಲ್ಲ ಕಡೆಯಲ್ಲೂ ಇರುವ ಅವನು ಈಗ ಕಾಣಬೇಕು. ಕಾಣುವುದಿಲ್ಲವಾದ್ದರಿಂದ ಇಲ್ಲ ಎಂದೇ ನಿಶ್ಚಯವಾಗುವುದು. ಅಂಥವನಿಗೆ ಕರ್ತೃತ್ವ ಕಲ್ಪಿಸಿದರೆ ಗೌರವ ದೋಷ. ಆದ್ದರಿಂದ ವಿಷ್ಣುವು ಕರ್ತನಲ್ಲ ಎಂದು ಒಂದು ಪೂ. ಪ.

**ಇನ್ನೊಂದು ಪೂರ್ವಪಕ್ಷ :-** ಮಹದಾದಿ ಕರ್ತೃತ್ವದ ಅನುಭವ ಜೀವನಿಗೆ ಇಲ್ಲವಾದ್ದರಿಂದ ಅಲ್ಲಿ ಈಶನು ಕರ್ತನಾಗಲಿ. ಘಟಾದಿ ಕರ್ತೃತ್ವದ ಅನುಭವ ಜೀವನಿಗೆ ಇದೆಯಾದ್ದರಿಂದ ಲಾಘವಾತ್ ಅವನು ಮಾತ್ರ ಕರ್ತನಾಗಲಿ ಎಂದು.

**ಸಿದ್ಧಾಂತ :-** ಜೀವನೇ ಸ್ವತಂತ್ರಕರ್ತನಾದರೆ ಅಹಿತ ಕರಣ ಹಿತಾಕರಣಗಳು ಅಯುಕ್ತವಾದವು ಎಂಬ ಬಾಧಕವಿದೆ. ಮತ್ತು ಜೀವನು ಒಂದು ಹುಲ್ಲುಕಡ್ಡಿ ಎತ್ತಲಿಕ್ಕೆ ಪೂರ್ಣಶಕ್ತಿಯನ್ನು ಉಪಯೋಗಿಸುತ್ತಾನೋ ಅಥವಾ ಏಕದೇಶ-ವನ್ನೋ? ಪೂರ್ಣಶಕ್ತಿಯನ್ನು ಬಳಸುತ್ತಾನೆನ್ನುವುದು ಅನುಭವವಿರುದ್ಧ. ಏಕದೇಶವನ್ನು ಉಪಯೋಗಿಸುತ್ತಾನೆನ್ನುವುದು ನಿರವಯವತ್ವ ಶ್ರುತಿ ವಿರುದ್ಧ. ಆದ್ದರಿಂದ ಪ್ರವೃತ್ತಿಯೇ ಕೂಡುವುದಿಲ್ಲ ಎಂಬ ಬಾಧಕವಿದೆ.

ಇನ್ನು ಜೀವ ಸ್ವತಂತ್ರ ಕರ್ತ ಎನ್ನುವುದಕ್ಕೆ ಸಾಧಕವೂ ಇಲ್ಲ. 'ಜೀವಾತ್ ಭವಂತಿ ಭೂತಾನಿ' ಎಂಬ ಶ್ರುತಿಯು 'ಅಪೂರ್ವತಾ' ಲಿಂಗದಿಂದ ಈಶಪರ-ವಾಗಿದೆ. ಉಪಲಬ್ಧಿ ಇಲ್ಲವಾದ್ದರಿಂದ ಈಶನೇ ಇಲ್ಲ ಎಂಬ ಶಂಕೆ ಸರಿಯಲ್ಲ. ದೇವತೆಗಳಂತೆ, ಪಿಶಾಚಾದಿಗಳಂತೆಯೂ ಅಂತರ್ಧಾನ ಶಕ್ತಿ ಉಳ್ಳವನಾಗಿದ್ದಾನೆ.

'ಅಹಂ ಕರ್ತಾ' ಎಂಬ ಅನುಭವವೇ ಜೀವನ ಸ್ವತಂತ್ರಕರ್ತೃತ್ವಕ್ಕೆ ಸಾಧಕ ಎಂಬುದೂ ಸರಿಯಲ್ಲ. ಚಾರ್ವಾಕನಿಗೆ ಜಡದೇಹದಲ್ಲಿ ಸ್ವಾತಂತ್ರ್ಯ ಬುದ್ಧಿಯು

ಭ್ರಮವಾದಂತೆ ಇದೂ ಭ್ರಮವಾಗಿದೆ. ಜೀವ ಈಶಾಧೀನನಾದ್ದರಿಂದ. ಇನ್ನು ಚೇತನತ್ವ ಯುಕ್ತಿಯೂ 'ಅಸ್ವತಂತ್ರವಾದ ಕಲ್ಲು ಸ್ವತಂತ್ರ ಕರ್ತೃವಲ್ಲ ಅದರಂತೆ ಅಸ್ವತಂತ್ರನಾದ್ದರಿಂದ ಜೀವನೂ ಸ್ವತಂತ್ರ ಕರ್ತೃವಲ್ಲ' ಎಂಬ ಪ್ರತಿಪಕ್ಷಾನುಮಾನದಿಂದ ಅಪ್ರಯೋಜಕವಾಗಿದೆ.

ಎರಡನೇ ಪೂ.ಪಕ್ಷವೂ ಅಯುಕ್ತ. ಈಶನು ಪ್ರಮಾಣಸಿದ್ಧನಾದ್ದರಿಂದ, ಅವನು ಮಹದಾದಿಗಳಿಗೂ ಘಟಾದಿಗಳಿಗೂ ಕರ್ತನೆಂದು ಒಪ್ಪಿದಾಗ ಬರುವ ಗೌರವವು ಪ್ರಾಮಾಣಿಕ ಗೌರವವಾದ್ದರಿಂದ ದೋಷವಲ್ಲ.

ಇಲ್ಲಿ ಲಕ್ಷಣದ ಅಸಂಭವ ಅತಿವ್ಯಾಪ್ತಿಗಳು ಪೂರ್ವಪಕ್ಷದ ಫಲ. ಅದರ ಪರಿಹಾರವೇ ಸಿದ್ಧಾಂತ ಫಲ.

## ll ಓಂ ಶ್ರುತೇಸ್ತು ಶಬ್ದ ಮೂಲತ್ವಾತ್ ಓಂ ll ೨-೧-೮

ಜೀವನೇ ಸ್ವತಂತ್ರ ಕರ್ತಾ ಎಂಬ ಪಕ್ಷದಲ್ಲಿ - ಜೀವನು ಅಲ್ಪ ಕಾರ್ಯಕ್ಕೆ ಪೂರ್ಣಶಕ್ತಿಯನ್ನುಪಯೋಗಿಸುವುದು ಅನುಭವ ವಿರುದ್ಧ. 'ಏಕದೇಶವನ್ನು-ಪಯೋಗಿಸುವುದು ನಿರವಯತ್ವ ಶ್ರುತಿ ವಿರುದ್ಧ' ಎಂಬ ದೋಷವನ್ನು ಹಿಂದಿನ ಅಧಿಕರಣದಲ್ಲಿ ಹೇಳಲಾಯಿತು. ಅದು ಈಶಕರ್ತೃತ್ವದಲ್ಲೂ ಸಮಾನ ಎಂದು ಶಂಕಿಸಿದ್ದರಿಂದ ಈ ಅಧಿಕರಣವು ಸಂಗತ. ವಿಷ್ಣುವಿಗೆ ಸರ್ವಕರ್ತೃತ್ವವು ಯುಕ್ತವೋ ಅಯುಕ್ತವೋ ಎಂದು ಸಂದೇಹ.

**ಪೂರ್ವಪಕ್ಷ** :- ವಿಷ್ಣುವು ಅಲ್ಪಕಾರ್ಯಕ್ಕೆ ತನ್ನ ಪೂರ್ಣಶಕ್ತಿಯನ್ನು ಉಪಯೋಗಿಸುತ್ತಾನೆಂದರೆ ಪ್ರೇಕ್ಷಾವಂತನಲ್ಲವೆಂದಾಗುತ್ತದೆ. ಏಕದೇಶ-ವನ್ನುಪಯೋಗಿಸುತ್ತಾನೆಂದರೆ ನೇಹ ನಾನಾ ಎಂಬ ನಿರವಯವತ್ವ ಶ್ರುತಿ ವಿರೋಧ. ಹೀಗಾಗಿ ಜೀವನಿಗಿಂತ ಈಶನಲ್ಲಿ ಏನೂ ವಿಶೇಷವಿಲ್ಲವೆಂದಾಯಿತು. ಇದರಿಂದ ಇದು ಜೀವನಲ್ಲಿ ಮಾತ್ರ ದೋಷ ಈಶನಲ್ಲಿ ಅಲ್ಲ ಎನ್ನುವುದಕ್ಕೆ ಯಾವ ಪ್ರಮಾಣವೂ ಇಲ್ಲ. ಮತ್ತು 'ಅಚಕ್ಷುಃಶ್ರೋತ್ರಂ' ಎಂಬ ಶ್ರುತಿಯ ಪ್ರಕಾರ ಈಶನಿಗೆ ಹಸ್ತಾದಿಕರಣಗಳಿಲ್ಲ ಆದ್ದರಿಂದ ವಿಷ್ಣುವಿಗೆ ಕರ್ತೃತ್ವ ಸರಿಯಲ್ಲ.

**ಸಿದ್ಧಾಂತ** :- ಈಶನಿಗೆ ಕರ್ತೃತ್ವವು ಯುಕ್ತವೇ ಆಗಿದೆ. ಜೀವನಲ್ಲಿ ಬಂದ ದೋಷಗಳಿಗೆ ಈಶನಲ್ಲಿ ಅವಕಾಶವಿಲ್ಲ. ಜೀವನಿಗೂ ಈಶನಿಗೂ ಬಹಳ ವ್ಯತ್ಯಾಸವಿದೆ. 'ಯೋಸೌ ವಿರುದ್ಧೋ ವಿರುದ್ಧಃ' ಎಂಬ ಶ್ರುತಿಯ ಪ್ರಕಾರ ಲೋಕವಿರುದ್ಧವಾದದ್ದು ಈಶನಲ್ಲಿ ಅವಿರುದ್ಧವಾಗಿರುತ್ತದೆ. ಈಶನು ಶಾಸ್ತ್ರೈಕ ಗಮ್ಯನಾದ್ದರಿಂದ ಶುಷ್ಕತರ್ಕ ಗೋಚರನಲ್ಲವಾದ್ದರಿಂಗ - ಪೂರ್ಣ ಶಕ್ತ್ಯುಪ-ಯೋಗ ಇತ್ಯಾದಿಯಾಗಿ ಹೇಳಲ್ಪಟ್ಟ ತರ್ಕದಿಂದ ಬಾಧ್ಯನಲ್ಲ.

'ವಿಚಿತ್ರಶಕ್ತಿಃ' ಇತ್ಯಾದಿ ಶ್ರುತಿಯಂತೆ ಯುಕ್ತಿ ವಿರೋಧ ನಾರಾಸಕವಾದ, ನಿತ್ಯವಾದ, ಸರ್ವವಿಷಯಕವಾದ, ಅನೇಕ ಅಘಟಿತ ಘಟನಾ ಸಾಮರ್ಥ್ಯ ಉಳ್ಳವನು. ಜೀವನಲ್ಲಿ ಇದಾವುದೂ ಇಲ್ಲ. ಈಶನಿಗೆ ಹಸ್ತಾದಿ ಕರಣಗಳಿಲ್ಲ ಎಂದು ಹೇಳುವ 'ನತಸ್ಯ ಕಾರ್ಯಂಕರಣಂ ಚ ವಿದ್ಯತೇ' ಇತ್ಯಾದಿ ಶ್ರುತಿ-ಯಾದರೂ ಪ್ರಾಕೃತಕರಣ ನಿಷೇಧ ಪರ. ಜ್ಞಾನಾನಂದಾದಿರೂಪ ಶರೀರ ಇದ್ದೇ ಇದೆ. ಶಾಸ್ತ್ರಯೋನಿತ್ವಾಧಿಕರಣದಲ್ಲಿ ಶುಷ್ಕ ತರ್ಕಕ್ಕೆ ಸಾಧಕತ್ವವನ್ನು ನಿರಾಸ ಮಾಡಲಾಗಿತ್ತು . ಇಲ್ಲಿ ಬಾಧಕತ್ವ ನಿರಾಸ. ಆದ್ದರಿಂದ ಪುನರುಕ್ತಿ ಇಲ್ಲ.

## ॥ ಓಂ ನ ಪ್ರಯೋಜನವತ್ತ್ವಾತ್ ಓಂ ॥ ೨-೧-೬

ಪೂರ್ವಾಧಿಕರಣದಲ್ಲಿ ಈಶಕರ್ತೃತ್ವಕ್ಕೆ ಹೇತುವಾದ ಅವನ ಶಕ್ತಿಯ ವಿಷಯದಲ್ಲಿ ದೃಢಯುಕ್ತಿ ವಿರೋಧವನ್ನು ಪರಿಹರಿಸಲಾಯಿತು. ಇಲ್ಲಿ ಕರ್ತೃತ್ವದ ಪ್ರಯೋಜನ (ಫಲ)ವೇನು ಎಂಬ ವಿಷಯದಲ್ಲಿ ದೃಢಯುಕ್ತಿ ವಿರೋಧವನ್ನು ಪರಿಹರಿಸಲಾಗುವುದು. ವಿಷ್ಣುವಿಗೆ ಸೃಷ್ಟಿ ಕರ್ತೃತ್ವ ಅಯುಕ್ತವೋ ಯುಕ್ತವೋ ಎಂದು ಸಂದೇಹ. ಅಯುಕ್ತ ಎಂದು ಪೂರ್ವಪಕ್ಷ. ಏಕೆಂದರೆ, ಈಶನಿಗೆ ಸೃಷ್ಟಿಯಿಂದ ಫಲೋದ್ದೇಶ ಇದೆಯೆಂದರೆ ಅಪೂರ್ಣತ್ವ ಪ್ರಸಂಗ. ಫಲೋದ್ದೇಶದಿಂದ ಪ್ರವೃತ್ತಿ ಮಾಡುವ ಅದರಿಂದಲೇ ಅಪೂರ್ಣ-ರಾದ ಚೈತ್ರಾದಿಗಳಿಗೆ ಸರ್ವಕರ್ತೃತ್ವ ಇಲ್ಲ. ಅದರಂತೆ ಈಶನಿಗೂ ಸರ್ವಕರ್ತೃತ್ವ ಯುಕ್ತವಾಗಲಾರದು. ಪ್ರಯೋಜನೋದ್ದೇಶ್ಯ ಇಲ್ಲವೆಂದರೆ ಪ್ರವೃತ್ತಿಯೇ ಕೂಡುವುದಿಲ್ಲ. ದಯೆಯಿಂದ ಸೃಷ್ಟಿ ಮಾಡುತ್ತಾನೆಂದರೆ ದಯೆಗಾದರೂ ಏನು ಫಲ ಎಂಬ ಶಂಕೆ ಬರುವುದರಿಂದ ಅದೂ ಸರಿಯಲ್ಲ.

**ಸಿದ್ಧಾಂತ** :- 'ದೇವಸ್ಯೈಷ ಸ್ವಭಾವೋಯಂ' ಎಂದು ಶ್ರುತಿ ಹಳುವಂತೆ ಸೃಷ್ಟಿ ಮಾಡುವುದು ಸ್ವಭಾವವೇ ಹೊರತು ಪ್ರಯೋಜನೋದ್ದೇಶ್ಯ ಮೂಲಕವಲ್ಲ. ಪ್ರಯೋಜನೋದ್ದೇಶ್ಯವಿಲ್ಲದಿದ್ದರೂ ಸ್ವಾಭಾವಿಕವಾದ ಕಣ್ಣು ರೆಪ್ಪೆ ಹಾಕುವುದು ಮುಂತಾದ ಪ್ರವೃತ್ತಿ ಕಂಡಿದೆ. ಪ್ರೇಕ್ಷಾವಂತರಿಗೂ ಪ್ರಯೋಜನೋದ್ದೇಶ್ಯವಿಲ್ಲದ ಶಿರೋಹಸ್ತ ಚಾಲನಾದಿಗಳು ಪ್ರವಚನಾದಿ ಸಮಯದಲ್ಲಿ ಕಂಡಿದೆ. ಮತ್ತು ಸೃಷ್ಟ್ಯಾದಿಗಳು ಅವನಿಗೆ ಬೆರಳಲ್ಲಾಡಿಸಿದಂತೆ ಅನಾಯಾಸ ಸಾಧ್ಯವಾದ್ದರಿಂದಲೂ ಪ್ರಯೋಜನೋದ್ದೇಶ್ಯವಿಲ್ಲದಿದ್ದರೂ ಲೀಲಾರೂಪವಾಗಿ ಉಪಪನ್ನವಾಗುತ್ತದೆ. ಅವನು ದಯೆಯಿಂದ ಸೃಷ್ಟಿ ಮಾಡುತ್ತಾನೆ ದಯೆಯಿಂದ ತನಗಾಗುವ ಪ್ರಯೋಜನವೇನೂ ಇಲ್ಲದಿದ್ದರೂ ಪರ ಪ್ರಯೋಜನಕ್ಕಾಗಿ ದಯೆ ತೋರುತ್ತಾನೆ.

## ॥ ಓಂ ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷಾತ್ತಥಾಹಿ ದರ್ಶಯತಿ ಓಂ ॥ ೨-೧-೧೦

ಹಿಂದಿನ ಅಧಿಕರಣದಲ್ಲಿ ಹೇಳಿದ ಪರ ಪ್ರಯೋಜನ ರೂಪವಾದ ಫಲದ ವಿಷಯದಲ್ಲಿ ಬಂದ ಯುಕ್ತಿ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸಲಾಗಿದೆ. ವಿಷ್ಣುವಿಗೆ ಸರ್ವಕರ್ತೃತ್ವ ಸರಿಯೋ ಅಲ್ಲವೋ ಎಂದು ಸಂದೇಹ. ಅಲ್ಲ ಎಂದು **ಪೂರ್ವಪಕ್ಷ**. ವಿಷ್ಣುವು ಪರರ ಸುಖ ದುಃಖಕ್ಕಾಗಿ ಸೃಷ್ಟಿ ಮಾಡುತ್ತಾನೆಂದು ಒಪ್ಪಿದರೂ ಅವರವರ ಕರ್ಮವನ್ನು ನಿಮಿತ್ತವಾಗಿಟ್ಟುಕೊಳ್ಳದೇ ಸುಖ ದುಃಖ ಕೊಡುತ್ತಾನೆಂದರೆ. ವೈಷಮ್ಯ (ಪಕ್ಷಪಾತ) ದೋಷ ಮತ್ತು ನೈರ್ಘೃಣ್ಯ (ಸುಮ್ಮನೇ ದುಃಖ ಕೊಟ್ಟದ್ದರಿಂದ ನಿಷ್ಕಾರುಣ್ಯ) ಎಂಬ ದೋಷ ಬರುತ್ತದೆ. ಕರ್ಮಗಳನ್ನು ನಿಮಿತ್ತ ಮಾಡಿಕೊಂಡೇ ಫಲ ಕೊಡುತ್ತಾನೆಂದರೆ ಆ ಕರ್ಮಗಳೂ ಅವನ ಅಧೀನವೇ ಆದ್ದರಿಂದ ನಿರ್ನಿಮಿತ್ತವಾಗಿ ಪುಣ್ಯ ಪಾಪಗಳನ್ನು ಮಾಡಿಸಿದನೆಂದು ಅದೇ ದೋಷ ಬರುತ್ತದೆ. ಕರ್ಮಗಳು ಅವನ ಅಧೀನವಲ್ಲವೆಂದರೆ ಸ್ವಾತಂತ್ರ್ಯಕ್ಕೆ ಭಂಗ ಬರುತ್ತದೆ. ಆದ್ದರಿಂದ ಪರ ಪ್ರಯೋಜನಕ್ಕಾಗಿಯೂ ಸೃಷ್ಟಿ ಕೂಡುವುದಿಲ್ಲ.

**ಸಿದ್ಧಾಂತ** :- ಈಶನು ಕರ್ಮಗಳನ್ನು ಗಮನಿಸಿಯೇ ಸುಖ ದುಃಖ ಕೊಡುತ್ತಾನೆ. ಆ ಕರ್ಮಗಳನ್ನು ಮಾಡಿಸುವವನೂ ಅವನೇ ಆದರೆ

ನಿರ್ನಿಮಿತ್ತವಾಗಿ ವಿಭಾಗದಿಂದ (ಅಂದರೆ ಒಬ್ಬೊಬ್ಬರಿಗೆ ಒಂದೊಂದು ರೀತಿಯಲ್ಲಿ) ಪುಣ್ಯಪಾಪಕರ್ಮಗಳನ್ನು ಮಾಡಿಸುವುದಿಲ್ಲ ಕಿಂತು, ಕರ್ಮ-ಪ್ರವಾಹವು ಅನಾದಿಯಾದ್ದರಿಂದ ಪೂರ್ವಪೂರ್ವಕರ್ಮಕ್ಕನುಸಾರವಾಗಿ ಉತ್ತರೋತ್ತರ ಕರ್ಮಗಳನ್ನು ಮಾಡಿಸಿ ಅದಕ್ಕನುಗುಣವಾಗಿ ಫಲ ಕೊಡುತ್ತಾನೆ. ಇದನ್ನೆಲ್ಲವನ್ನೂ ವೇದವೇ ಹೇಳಿದೆ. ಅನಾದಿ ಕರ್ಮಗಳೂ ಅವನ ಅಧೀನವೇ. ಆದ್ದರಿಂದ ಅದನ್ನು ಗಮನಿಸದೇ ಎಲ್ಲರಿಂದಲೂ ಪುಣ್ಯವನ್ನೇ ಮಾಡಿಸ-ಬಹುದಿತ್ತು ಆದರೆ ಮಾಡಿಸುವುದಿಲ್ಲ - ಈ ನಿಮಿತ್ತ ಬರುವ ವೈಷಮ್ಯ-ನೈರ್ಘೃಣ್ಯಗಳು ವೇದದ ಅಪ್ರಾಮಾಣ್ಯಕ್ಕೆ ಕಾರಣವಾಗುವುದಿಲ್ಲ. ಅಂದರೆ ವೇದವು ಹೇಳಿದ್ದೊಂದು ತಾನು ಮಾಡಿದ್ದೊಂದು. ಆದ್ದರಿಂದ ವೇದ ಅಪ್ರಮಾಣ ಎಂಬ ಆಪತ್ತಿ ಇಲ್ಲ. ಏಕೆಂದರೆ ಅನಾದಿ ಕರ್ಮವೇ ಫಲಕ್ಕೆ ನಿಮಿತ್ತ ಎಂಬುದಾಗಿಯೇ ವೇದ ಹೇಳಿದ್ದು. ಇನ್ನು ವೈಷಮ್ಯ ನೈರ್ಘೃಣ್ಯಗಳು ವೇದಾಪ್ರಾಮಾಣ್ಯ ಕಾರಣವಲ್ಲದಿದ್ದರೂ ಪಾಪಹೇತುವಾಗುತ್ತದೆ ಎಂಬ ಶಂಕೆಯೂ ಸರಿಯಲ್ಲ. ಜೀವರು ವಿಧಿ ನಿಷೇಧ ಬದ್ಧರಾದ್ದರಿಂದ ಇಂತಹ ದೋಷಗಳು ಅವರ ಪ್ರತ್ಯವಾಯಕ್ಕೆ ಕಾರಣವಾಗಬಹುದೇ ಹೊರತು ವಿಧಿ ನಿಷೇಧಾತೀತನಾದ ಈಶನಿಗೆ ಇದು ಪ್ರತ್ಯವಾಯಾಪಾದಕವಲ್ಲ.

ಸಮೋಹಂ ಸರ್ವಭೂತೇಷು ಎಂಬಲ್ಲಿ ಹೇಳಿದ ಸಮತ್ವರೂಪ ಸದ್ಗುಣಕ್ಕೂ ವಿರೋಧಿಯಲ್ಲ. ಏಕೆಂದರೆ ಅನಾದಿ ಯೋಗ್ಯತಾನುಸಾರವಾಗಿ ಕರ್ಮ ಮಾಡಿಸುವುದೇ ಸಮತ್ವವೆನಿಸಿದೆ. ಮತ್ತು 'ಸಕಾರಯೇತ್ ಪುಣ್ಯ ಮಥಾಪಿ ಪಾಪಂ ನ ತಾವತಾ ದೋಷವಾನ್' ಎಂಬ ಸ್ಮೃತಿಯು ಇದನ್ನು ದೋಷವಲ್ಲ-ವೆಂದೇ ಹೇಳಿದೆ. ಏ ವಂ ಚ ಸರ್ವಕರ್ತೃತ್ವವು ಯುಕ್ತವೇ ಆಗಿದೆ.

## ॥ ಓಂ ಸರ್ವಧರ್ಮೋಪಪತ್ತೇಶ್ಚ ಓಂ ॥ ೨-೧-೧೧

ಇದುವರೆಗಿನ ಅಧಿಕರಣಗಳಲ್ಲಿ ಪರಮಾತ್ಮನ ಸೃಷ್ಟಿಕರ್ತೃತ್ವಾದಿ ಒಂದೊಂದು ಗುಣದ ವಿಷಯದಲ್ಲಿ ಹಾಗೂ ಒಂದೊಂದು ದೋಷಾಭಾವದ ವಿಷಯದಲ್ಲಿ ಯುಕ್ತಿ ವಿರೋಧವನ್ನು ಪರಿಹರಿಸಲಾಯಿತು. ಈ ಅಧಿಕರಣವು ಉಪಸಂಹಾರ ರೂಪವಾದ್ದರಿಂದ ಇಲ್ಲಿ ಸರ್ವಗುಣ ಪೂರ್ಣತ್ವ ವಿಷಯದಲ್ಲಿ ಹಾಗೂ ಯಾವ ದೋಷವೂ ಇಲ್ಲ ಎನ್ನುವ ವಿಷಯದಲ್ಲಿ ಬರಬಹುದಾದ ಯುಕ್ತಿ

ವಿರೋಧವನ್ನು ಪರಿಹರಿಸಲಾಗುವುದು. ಆದ್ದರಿಂದ ಅನಂತರ ಸಂಗತಿ ಇದೆ. ವಿಷ್ಣುವಿಗೆ ಹೇಳಲ್ಪಟ್ಟ ನಿರ್ದೋಷತ್ವ ಹಾಗೂ ಗುಣಪೂರ್ಣತ್ವವು ಯುಕ್ತವೋ ಅಲ್ಲವೋ ಎಂದು ಸಂದೇಹ. ಸರಿಯಲ್ಲ ಎಂದು ಪೂರ್ವಪಕ್ಷ. – ಚೈತ್ರಾದಿಗಳು ಚೇತನರಾಗಿದ್ದಾರೆ. ಹಾಗೆಯೇ ದೋಷಿಗಳೂ ಮತ್ತು ಅಪೂರ್ಣರೂ ಆಗಿದ್ದಾರೆ. ಅದರಂತೆ ವಿಷ್ಣುವೂ ಚೇತನನಾದ್ದರಿಂದ ದೋಷಿಯೂ ಅಪೂರ್ಣನೂ ಆಗಬೇಕು. ದೋಷಿಯಲ್ಲ ಎಂದರೆ ಗುಣಿಯೂ ಅಲ್ಲ ಎಂದಾಗುತ್ತದೆ. ಏಕೆಂದರೆ ಚೈತ್ರಾದಿಗಳಲ್ಲಿ ದೋಷ ಮತ್ತು ಗುಣಗಳು ಜೊತೆಯಾಗಿರುವುದೇ ಕಂಡಿದೆ.

**ಸಿದ್ಧಾಂತ :-** 'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ' ಇತ್ಯಾದಿ ಶ್ರುತಿಯು ಭಗವಂತನನ್ನು ನಿರ್ದೋಷ ಮತ್ತು ಗುಣಪೂರ್ಣ ಎಂದು ಹೇಳುತ್ತಿದೆ. ಮತ್ತು ಇದಕ್ಕೆ, ಯುಕ್ತಿಯ ಬೆಂಬಲವೂ ಇದೆ. ಹೇಗೆಂದರೆ – ಚೈತ್ರಾದಿಗಳು ಧನಿಕರಾಗಲು ಸಮರ್ಥರೂ ಮತ್ತು ಆ ಇಚ್ಛೆ ಉಳ್ಳವರಾದ್ದರಿಂದ ಧನಿಕರಾದದ್ದು ಕಂಡಿದೆ. ಅದರಂತೆ ವಿಷ್ಣುವೂ ಗುಣಪೂರ್ಣನಾಗಲು ಸಮರ್ಥನೂ ಮತ್ತು ಅಂತಹ ಇಚ್ಛೆ ಉಳ್ಳವನೂ ಆದ್ದರಿಂದ ಗುಣಪೂರ್ಣನಾಗಿದ್ದಾನೆ ಹಾಗೆಯೇ ಚೈತ್ರಾದಿಗಳು ರೋಗ ಪರಿಹಾರ ಮಾಡಿಕೊಳ್ಳುವ ಇಚ್ಛೆಯನ್ನು ಪಡೆದವರೂ ಮತ್ತು ಅದಕ್ಕೆ ಸಮರ್ಥರೂ ಆಗಿ ರೋಗರಹಿತರಾದದ್ದು ಕಂಡಿದೆ. ಅದರಂತೆ ವಿಷ್ಣುವೂ ನಿರ್ದೋಷನಾಗಲು ಶಕ್ತನೂ ಮತ್ತು ಆ ಇಚ್ಛೆಯುಳ್ಳವನೂ ಆದ್ದರಿಂದ ನಿರ್ದೋಷನಾಗಿದ್ದಾನೆ ಎಂಬುದೇ ಯುಕ್ತಿ . ವಿಷ್ಣುವು ಪ್ರೇಕ್ಷಾವಂತ–ನಾದ್ದರಿಂದ ನಿರ್ದೋಷನಾಗುವ ಇಚ್ಛೆ ಹಾಗೂ ಗುಣಪೂರ್ಣನಾಗುವ ಇಚ್ಛೆಯುಳ್ಳವನೆಂದು ಸಿದ್ಧವಾಗುತ್ತದೆ. ಹಾಗಾಗಲು ಬೇಕಾದ ಸಾಮರ್ಥ್ಯವೂ ಅವನಲ್ಲಿದೆ ಎಂಬುದು 'ಶ್ರುತೇಸ್ತು' ಎಂಬ ಅಧಿಕರಣದಲ್ಲಿ ಸಿದ್ಧವಾಗಿದೆ. ಸಮನ್ವಯಾಧ್ಯಾಯದ ಪ್ರಮೇಯದ ಆಕ್ಷೇಪ ಹಾಗೂ ಸಮಾಧಾನಗಳೇ ಇದರ ಫಲ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಎರಡನೆಯ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.**

# ಎರಡನೇ ಅಧ್ಯಾಯದ ಎರಡನೆಯ ಪಾದ

## ॥ ಓಂ ರಚನಾನುಪಪತ್ತೇಶ್ಚ ನಾನುಮಾನಂ ಓಂ ॥ ೨-೨-೧

ಈ ಪಾದದಲ್ಲಿ ಸಮಯ ವಿರೋಧವನ್ನು ನಿರಾಕರಿಸಲಾಗಿದೆ (ಸಮಯ = ಸಿದ್ಧಾಂತ) ಈ ಪಾದಕ್ಕೆ ಹಿಂದಿನ ಪಾದದೊಂದಿಗೆ ಹೇಗೆ ಸಂಗತಿ ಎಂದರೆ? ಹಿಂದಿನ ಪಾದದ ಮೊದಲನೆ ಅಧಿಕರಣ ಸ್ಮೃತ್ಯಧಿಕರಣ. ಅದರಲ್ಲಿ ''ಇತರೇಷಾಂ ಚಾನುಪಲಬ್ಧೇಃ' ಎಂಬ ಗುಣಸೂತ್ರವಿದೆ. ಅದರಲ್ಲಿ ಹೇಳಲ್ಪಟ್ಟ ಹೇತುವಿನ ವಿಸ್ತಾರವನ್ನೇ ಈ ಪಾದದಲ್ಲಿ ಮಾಡಲಾಗಿದೆ. ಹೀಗೆ ಸಂಗತಿಯನ್ನು ತಿಳಿಯಬೇಕು ಅಥವಾ ಹಿಂದೆ ಹೇಳಿದಂತೆ ಪಾದಸಂಗತಿಯನ್ನು ತಿಳಿಯಬೇಕು. (ಯುಕ್ತಿ, ಸಮಯ, ಶ್ರುತಿ, ಯುಕ್ತಿಸಹಿತಶ್ರುತಿ. ಇವು ಒಂದಕ್ಕಿಂತ ಒಂದು ಪ್ರಬಲ. ಮೊದಲು ದುರ್ಬಲವಾದ ಯುಕ್ತಿವಿರೋಧವನ್ನು ಪರಿಹಾರ ಮಾಡಿ ಅದಕ್ಕಿಂತ ಪ್ರಬಲವಾದ ಸಮಯ ವಿರೋಧವನ್ನು ಇಲ್ಲಿ ಪರಿಹರಿಸಲಾಗಿದೆ).

ಈ ಸಮಯಗಳು ಎರಡು ವಿಧವಾಗಿವೆ. ಹೈತುಕ ಪಾಷಂಡ ಎಂಬುದಾಗಿ. ಇದು 'ಅಕ್ಷಪಾದಕಣಾದೌ ಚ' ಎಂಬ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ. ಇವೆರಡರಲ್ಲಿ ಹೇತು (ಯುಕ್ತಿ)ವುಳ್ಳದ್ದರಿಂದ ಹೈತುಕಮತ ಪ್ರಬಲ. ಅದರ ನಿರಾಕರಣೆಯನ್ನೇ ಮೊದಲು ಮಾಡುತ್ತಾರೆ.

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ 'ವಿಷ್ಣುವೇ ಸರ್ವಕರ್ತಾ' ಎಂಬುದು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂಬುದೇ ಪೂರ್ವಪಕ್ಷ.

ಘಟಾದಿಗಳು ಕಾರ್ಯವಾದ್ದರಿಂದ ಹೇಗೆ ಸ್ವತಂತ್ರಕಾರಣವುಳ್ಳವುಗಳಾಗಿವೆಯೋ ಅದೇ ರೀತಿ ಮಹದಾದಿಗಳೂ ಕಾರ್ಯವಾದ್ದರಿಂದ ಸ್ವತಂತ್ರಕಾರಣವುಳ್ಳವು-ಗಳಾಗಬೇಕು. ಇದು ಒಂದು ಅನುಮಾನ. ಘಟಾದಿಗಳಂತೆ ಮಹದಾದಿಗಳೂ ಕಾರ್ಯವಾದ್ದರಿಂದ ಸಜಾತೀಯ ಕಾರಣವುಳ್ಳವುಗಳಾಗಬೇಕು. ಇದು ಇನ್ನೊಂದು ಅನುಮಾನ. ಹೀಗೆ ಇನ್ನೂ ಅನೇಕ ಅನುಮಾನಗಳಿಂದ ಮಹದಾದಿ ಪ್ರಪಂಚಕ್ಕೆ ಕಾರಣವಾದ ಪ್ರಧಾನವು ಸಿದ್ಧವಾಗುವುದು. ಹೇಗೆ ಜಲಾದಿಗಳಿಗೆ ಸ್ವತಂತ್ರಪ್ರವೃತ್ತಿ ಎಂಬ ಕರ್ತೃತ್ವ ಇದೆಯೋ ಹಾಗೇ

ಪ್ರಧಾನವೂ ಜಲಾದಿಯಂತೆ ವಸ್ತುವಾದ್ದರಿಂದ ಅದಕ್ಕೂ ಸ್ವತಂತ್ರಪ್ರವೃತಿ-ರೂಪವಾದ ಕರ್ತೃತ್ವವನ್ನು ಒಪ್ಪಬೇಕು.

ಅಥವಾ, ಹಾಲು ಹೇಗೆ ಸ್ವತಃ ಪರಿಣಾಮವುಳ್ಳದ್ದಾಗಿದೆಯೋ ಹಾಗೇ ಪ್ರಧಾನವೂ ಅದರಂತೆ ದ್ರವ್ಯವಾದ್ದರಿಂದ ಅದೂ ಸ್ವತಃ ಪರಿಣಾಮ-ವುಳ್ಳದ್ದಾಗಬೇಕು.

ಹೀಗೆ ಅನುಮಾನದಿಂದ, 'ಪ್ರಧಾನ' ಮತ್ತು ಅದಕ್ಕೆ 'ಅನ್ಯ ಅನಪೇಕ್ಷವಾದ ಕರ್ತೃತ್ವ' ಸಿದ್ಧವಾಗುತ್ತದೆ ಎಂದು ನಿರೀಶ್ವರ ಸಾಂಖ್ಯವಾದಿಯು ಹೇಳುತ್ತಾನೆ. ವಿಷ್ಣುವೇ ಸರ್ವಕರ್ತಾ ಎಂದರೆ ಈ ಮತದ ವಿರೋಧ ಬರುತ್ತದೆ.

**ಸಿದ್ಧಾಂತ :-** ವಿಷ್ಣುವೇ ಸರ್ವಕರ್ತಾ. ಏಕೆಂದರೆ, ಸ್ವತಂತ್ರಕಾರಣಜನ್ಯತ್ವ ಮತ್ತು ಸಜಾತೀಯ ಕಾರಣಜನ್ಯತ್ವವನ್ನು ನಾವೂ ಒಪ್ಪಿರುವುದರಿಂದ ಮೊದಲೆರಡು ಅನುಮಾನಗಳಿಗೆ 'ಸಿದ್ಧಸಾಧನತಾ' ಎಂಬ ದೋಷ ಬರುತ್ತದೆ. ಹೀಗಾಗಿ ಈ ಅನುಮಾನಗಳಿಂದ ಪ್ರಧಾನವನ್ನು ಸಾಧನೆ ಮಾಡಲು ಆಗುವುದಿಲ್ಲ. ಇನ್ನು, ಪ್ರಧಾನವು ಅಚೇತನವಾದ್ದರಿಂದ ಸ್ವತಂತ್ರ ಪ್ರವೃತ್ತಿ-ವುಳ್ಳದ್ದಲ್ಲ. ಮಹದಾದಿಗಳು ಕಾರ್ಯವಾದ್ದರಿಂದ ಘಟಾದಿಗಳಂತೆ ಅವೂ ಕೂಡ ಚೇತನನಿಂದ ಸೃಷ್ಟವಾಗಬೇಕು. ಎಂದು ಅನುಮಾನ ಮಾಡಲು ಸಾಧ್ಯ-ವಿರುವುದರಿಂದ ಪೂರ್ವಪಕ್ಷಿಯು ಹೇಳಿದ ಕೊನೆಯ ಎರಡು ಅನುಮಾನ-ಗಳಿಗೆ ಸತ್ಪ್ರತಿಪಕ್ಷ' ಎಂಬ ದೋಷ ಬರುತ್ತದೆ.

ನೀರಿನಲ್ಲಿ ಸ್ವತಂತ್ರಪ್ರವೃತ್ತಿ ಕಂಡಿದೆ. ಹಾಲು ಸ್ವತಃ ಪರಿಣಾಮವನ್ನು ಹೊಂದುತ್ತದೆ ಎಂಬುದೂ ಸರಿಯಲ್ಲ. ಏಕೆಂದರೆ, ''ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋ ನದ್ಯಃ ಸ್ಯಂದಂತೇ'' ''ಏತೇನ ಹ ವಾ ವ ಪಯೋ ಮಂಡಂ ಭವತಿ'' ''ನ ಋತೇ ತ್ವತ್ಕ್ರಿಯತೇ'' ಮೊದಲಾದ ಶ್ರುತಿಗಳಿಂದ ಇಲ್ಲೆಲ್ಲಾ ಭಗವತ್ ಚೇತನ ಪ್ರವೃತ್ತಿ ಇದೆ ಎಂದು ತಿಳಿಯುತ್ತಿದೆ. ಹಾಗಾಗಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಎಂಬ ದೋಷ ಬರುತ್ತದೆ. ಹೀಗೆ ಕೇವಲ ಅಚೇತನ ಕರ್ತೃತ್ವ ಎಂಬುದಕ್ಕೆ ಯಾವುದೇ ಪ್ರಮಾಣವಿಲ್ಲ ಹಾಗು ಅದಕ್ಕೆ ಅನೇಕ ಪ್ರಮಾಣಗಳ ವಿರೋಧವೂ ಇದೆ. ಇಂತಹ ಸ್ವತಂತ್ರ ಅಚೇತನ ಕರ್ತೃತ್ವವನ್ನು ಪ್ರತಿಪಾದನೆ ಮಾಡುವ ಮತ ದುಷ್ಟವಾದ್ದರಿಂದ ಅದರ

# ಎರಡನೇ ಅಧ್ಯಾಯದ ಎರಡನೆಯ ಪಾದ

## ॥ ಓಂ ರಚನಾನುಪಪತ್ತೇಶ್ಚ ನಾನುಮಾನಂ ಓಂ ॥ ೨-೨-೧

ಈ ಪಾದದಲ್ಲಿ ಸಮಯ ವಿರೋಧವನ್ನು ನಿರಾಕರಿಸಲಾಗಿದೆ (ಸಮಯ = ಸಿದ್ಧಾಂತ) ಈ ಪಾದಕ್ಕೆ ಹಿಂದಿನ ಪಾದದೊಂದಿಗೆ ಹೇಗೆ ಸಂಗತಿ ಎಂದರೆ? ಹಿಂದಿನ ಪಾದದ ಮೊದಲನೆ ಅಧಿಕರಣ ಸ್ಮೃತ್ಯಧಿಕರಣ. ಅದರಲ್ಲಿ ''ಇತರೇಷಾಂ ಚಾನುಪಲಬ್ಧೇಃ' ಎಂಬ ಗುಣಸೂತ್ರವಿದೆ. ಅದರಲ್ಲಿ ಹೇಳಲ್ಪಟ್ಟ ಹೇತುವಿನ ವಿಸ್ತಾರವನ್ನೇ ಈ ಪಾದದಲ್ಲಿ ಮಾಡಲಾಗಿದೆ. ಹೀಗೆ ಸಂಗತಿಯನ್ನು ತಿಳಿಯಬೇಕು ಅಥವಾ ಹಿಂದೆ ಹೇಳಿದಂತೆ ಪಾದಸಂಗತಿಯನ್ನು ತಿಳಿಯಬೇಕು. (ಯುಕ್ತಿ , ಸಮಯ, ಶ್ರುತಿ, ಯುಕ್ತಿಸಹಿತಶ್ರುತಿ. ಇವು ಒಂದಕ್ಕಿಂತ ಒಂದು ಪ್ರಬಲ. ಮೊದಲು ದುರ್ಬಲವಾದ ಯುಕ್ತಿವಿರೋಧವನ್ನು ಪರಿಹಾರ ಮಾಡಿ ಅದಕ್ಕಿಂತ ಪ್ರಬಲವಾದ ಸಮಯ ವಿರೋಧವನ್ನು ಇಲ್ಲಿ ಪರಿಹರಿಸಲಾಗಿದೆ).

ಈ ಸಮಯಗಳು ಎರಡು ವಿಧವಾಗಿವೆ. ಹೈತುಕ ಪಾಷಂಢ ಎಂಬುದಾಗಿ. ಇದು 'ಅಕ್ಷಪಾದಕಣಾದೌ ಚ' ಎಂಬ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ. ಇವೆರಡರಲ್ಲಿ ಹೇತು (ಯುಕ್ತಿ)ವುಳ್ಳದ್ದರಿಂದ ಹೈತುಕಮತ ಪ್ರಬಲ. ಅದರ ನಿರಾಕರಣೆಯನ್ನೇ ಮೊದಲು ಮಾಡುತ್ತಾರೆ.

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ 'ವಿಷ್ಣುವೇ ಸರ್ವಕರ್ತಾ' ಎಂಬುದು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂಬುದೇ ಪೂರ್ವಪಕ್ಷ.

ಘಟಾದಿಗಳು ಕಾರ್ಯವಾದ್ದರಿಂದ ಹೇಗೆ ಸ್ವತಂತ್ರಕಾರಣವುಳ್ಳವುಗಳಾಗಿವೆಯೋ ಅದೇ ರೀತಿ ಮಹದಾದಿಗಳೂ ಕಾರ್ಯವಾದ್ದರಿಂದ ಸ್ವತಂತ್ರಕಾರಣವುಳ್ಳವು-ಗಳಾಗಬೇಕು. ಇದು ಒಂದು ಅನುಮಾನ. ಘಟಾದಿಗಳಂತೆ ಮಹದಾದಿಗಳೂ ಕಾರ್ಯವಾದ್ದರಿಂದ ಸಜಾತೀಯ ಕಾರಣವುಳ್ಳವುಗಳಾಗಬೇಕು. ಇದು ಇನ್ನೊಂದು ಅನುಮಾನ. ಹೀಗೆ ಇನ್ನೂ ಅನೇಕ ಅನುಮಾನಗಳಿಂದ ಮಹದಾದಿ ಪ್ರಪಂಚಕ್ಕೆ ಕಾರಣವಾದ ಪ್ರಧಾನವು ಸಿದ್ಧವಾಗುವುದು. ಹೇಗೆ ಜಲಾದಿಗಳಿಗೆ ಸ್ವತಂತ್ರಪ್ರವೃತ್ತಿ ಎಂಬ ಕರ್ತೃತ್ವ ಇದೆಯೋ ಹಾಗೇ

ಪ್ರಧಾನವೂ ಜಲಾದಿಯಂತೆ ವಸ್ತುವಾದ್ದರಿಂದ ಅದಕ್ಕೂ ಸ್ವತಂತ್ರಪ್ರವೃತಿ-ರೂಪವಾದ ಕರ್ತೃತ್ವವನ್ನು ಒಪ್ಪಬೇಕು.

ಅಥವಾ, ಹಾಲು ಹೇಗೆ ಸ್ವತಃ ಪರಿಣಾಮವುಳ್ಳದ್ದಾಗಿದೆಯೋ ಹಾಗೇ ಪ್ರಧಾನವೂ ಅದರಂತೆ ದ್ರವ್ಯವಾದ್ದರಿಂದ ಅದೂ ಸ್ವತಃ ಪರಿಣಾಮ-ವುಳ್ಳದ್ದಾಗಬೇಕು.

ಹೀಗೆ ಅನುಮಾನದಿಂದ, 'ಪ್ರಧಾನ' ಮತ್ತು ಅದಕ್ಕೆ 'ಅನ್ಯ ಅನಪೇಕ್ಷವಾದ ಕರ್ತೃತ್ವ' ಸಿದ್ಧವಾಗುತ್ತದೆ ಎಂದು ನಿರೀಶ್ವರ ಸಾಂಖ್ಯವಾದಿಯು ಹೇಳುತ್ತಾನೆ. ವಿಷ್ಣುವೇ ಸರ್ವಕರ್ತಾ ಎಂದರೆ ಈ ಮತದ ವಿರೋಧ ಬರುತ್ತದೆ.

**ಸಿದ್ಧಾಂತ :-** ವಿಷ್ಣುವೇ ಸರ್ವಕರ್ತಾ. ಏಕೆಂದರೆ, ಸ್ವತಂತ್ರಕಾರಣಜನ್ಯತ್ವ ಮತ್ತು ಸಜಾತೀಯ ಕಾರಣಜನ್ಯತ್ವವನ್ನು ನಾವೂ ಒಪ್ಪಿರುವುದರಿಂದ ಮೊದಲೆರಡು ಅನುಮಾನಗಳಿಗೆ 'ಸಿದ್ಧಸಾಧನತಾ' ಎಂಬ ದೋಷ ಬರುತ್ತದೆ. ಹೀಗಾಗಿ ಈ ಅನುಮಾನಗಳಿಂದ ಪ್ರಧಾನವನ್ನು ಸಾಧನೆ ಮಾಡಲು ಆಗುವುದಿಲ್ಲ. ಇನ್ನು, ಪ್ರಧಾನವು ಅಚೇತನವಾದ್ದರಿಂದ ಸ್ವತಂತ್ರ ಪ್ರವೃತ್ತಿ-ವುಳ್ಳದ್ದಲ್ಲ. ಮಹದಾದಿಗಳು ಕಾರ್ಯವಾದ್ದರಿಂದ ಘಟಾದಿಗಳಂತೆ ಅವೂ ಕೂಡ ಚೇತನನಿಂದ ಸೃಷ್ಟವಾಗಬೇಕು. ಎಂದು ಅನುಮಾನ ಮಾಡಲು ಸಾಧ್ಯ-ವಿರುವುದರಿಂದ ಪೂರ್ವಪಕ್ಷಿಯು ಹೇಳಿದ ಕೊನೆಯ ಎರಡು ಅನುಮಾನ-ಗಳಿಗೆ ಸತ್ಪ್ರತಿಪಕ್ಷ' ಎಂಬ ದೋಷ ಬರುತ್ತದೆ.

ನೀರಿನಲ್ಲಿ ಸ್ವತಂತ್ರಪ್ರವೃತ್ತಿ ಕಂಡಿದೆ. ಹಾಲು ಸ್ವತಃ ಪರಿಣಾಮವನ್ನು ಹೊಂದುತ್ತದೆ ಎಂಬುದೂ ಸರಿಯಲ್ಲ. ಏಕೆಂದರೆ, ''ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋ ನದ್ಯಃ ಸ್ಯಂದಂತೇ'' ''ಏತೇನ ಹ ವಾ ವ ಪಯೋ ಮಂಡಂ ಭವತಿ'' ''ನ ಋತೇ ತ್ವತ್ಕ್ರಿಯತೇ'' ಮೊದಲಾದ ಶ್ರುತಿಗಳಿಂದ ಇಲ್ಲೆಲ್ಲಾ ಭಗವತ್ ಚೇತನ ಪ್ರವೃತ್ತಿ ಇದೆ ಎಂದು ತಿಳಿಯುತ್ತಿದೆ. ಹಾಗಾಗಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಎಂಬ ದೋಷ ಬರುತ್ತದೆ. ಹೀಗೆ ಕೇವಲ ಅಚೇತನ ಕರ್ತೃತ್ವ ಎಂಬುದಕ್ಕೆ ಯಾವುದೇ ಪ್ರಮಾಣವಿಲ್ಲ ಹಾಗು ಅದಕ್ಕೆ ಅನೇಕ ಪ್ರಮಾಣಗಳ ವಿರೋಧವೂ ಇದೆ. ಇಂತಹ ಸ್ವತಂತ್ರ ಅಚೇತನ ಕರ್ತೃತ್ವವನ್ನು ಪ್ರತಿಪಾದನೆ ಮಾಡುವ ಮತ ದುಷ್ಟವಾದ್ದರಿಂದ ಅದರ

ವಿರೋಧ ಯಾವುದೇ ಹಾನಿ ಮಾಡಲು ಸಾಧ್ಯವಿಲ್ಲ. ಹಾಗಾಗಿ ಶ್ರುತಿ-ಸಮನ್ವಯದಿಂದ ಹಿಂದೆ ಹೇಳಿದ 'ವಿಷ್ಣುವೇ ವಿಶ್ವಕರ್ತಾ' ಎಂಬುದು ಸಿದ್ಧವಾಗುವುದು.

ಈ ಪಾದದ ಎಲ್ಲಾ ಅಧಿಕರಣದಗಳಲ್ಲಿಯೂ, ಜನ್ಮಾದಿ ಸೂತ್ರದಲ್ಲಿ ಹೇಳಲ್ಪಟ್ಟ ಸರ್ವಕರ್ತೃತ್ವದ ಮೇಲಿನ ಆಕ್ಷೇಪ ಹಾಗು ಅದರ ಸಮಾಧಾನ ಇದೇ ಪೂರ್ವಪಕ್ಷ ಸಿದ್ಧಾಂತ ಫಲ ಎಂದು ತಿಳಿಯಬೇಕು.

## ॥ ಓಂ ಅನ್ಯತ್ರಾಭಾವಾಚ್ಚ ನ ತೃಣಾದಿವತ್ ಓಂ ॥ ೨-೨-೨

ಅನೀಶ್ವರ ಸಾಂಖ್ಯಮತವು ವೈದಿಕಮತಕ್ಕೆ ಅತ್ಯಂತವಿರೋಧಿಯಾದ್ದರಿಂದ ಅದನ್ನು ಮೊದಲು ನಿರಾಕರಣೆ ಮಾಡಿ ಈಗ ಈ ಅಧಿಕರಣದಲ್ಲಿ ಈಶ-ಗುಣಕಪಧಾನಕರ್ತೃತ್ವ (ಈಶ್ವರ ಅಪ್ರಧಾನ, ಪ್ರಧಾನವೇ ಮುಖ್ಯ ಜಗತ್ಕರ್ತೃ) ಎಂಬ ಇನ್ನೊಂದು ಬಗೆಯ ಸಾಂಖ್ಯಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಹೀಗೆ ಹಿಂದಿನ ಅಧಿಕರಣಕ್ಕೂ ಈ ಅಧಿಕರಣಕ್ಕೂ ಆನಂತರ್ಯ ಎಂಬ ಸಂಗತಿಯನ್ನು ತಿಳಿಯಬೇಕು.

ವಿಷ್ಣುವು ಸ್ವತಂತ್ರಕರ್ತಾ ಎಂಬುದು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂಬುದೇ ಪೂರ್ವಪಕ್ಷ. ಏಕೆಂದರೆ, ಅಚೇತನ-ವಾದ್ದರಿಂದ ಕೇವಲ ಪ್ರಕೃತಿಗೆ ಕರ್ತೃತ್ವ ಕೂಡದೇ ಹೋದರೂ ಈಶ್ವರನ ಅನುಗ್ರಹದಿಂದ ಸಹಿತವಾದ ಪ್ರಕೃತಿಗೆ ಕರ್ತೃತ್ವ ಒಪ್ಪಬಹುದು. ಹೇಗೆ ಮಳೆಯ ಸಹಾಯದಿಂದ ಪೃಥಿವಿಯೇ ತೃಣಾದಿರೂಪಾಗಿ ಪರಿಣಾಮ ಹೊಂದುತ್ತದೆಯೋ ಹಾಗೇ ಈಶ್ವರನ ಅನುಗ್ರಹದಿಂದ ಪ್ರಧಾನವೇ ಮಹದಾದಿ ಜಗದಾತ್ಮನಾ ಪರಿಣಾಮ ಹೊಂದುತ್ತದೆ. ವಿಷ್ಣುವೇ ಸರ್ವಕರ್ತಾ ಎಂದು ಹೇಳುವ ಶ್ರುತಿಗಳೂ ಕೂಡ ಈ ಅಪ್ರಧಾನನಾದ ಈಶ್ವರನನ್ನೇ ಕುರಿತಾದದ್ದು. ಆದ್ದರಿಂದ ಶ್ರುತಿವಿರೋಧವೂ ಇಲ್ಲ.

**ಸಿದ್ಧಾಂತ** :- ವಿಷ್ಣುವೇ ಸ್ವತಂತ್ರ ಜಗತ್ಕಾರ್ತಾ. ಏಕೆಂದರೆ, ''ಯಚ್ಚ ಕಿಂಚಿತ್ ಜಗತ್ಸರ್ವಂ'' ಎಂಬ ಶ್ರುತಿಯು, ಈಶ್ವರನು ಸರ್ವವಸ್ತುಗಳಿಗೂ ಸತ್ತಾಪ್ರದ-ನಾಗಿ ಸರ್ವಗತನಾಗಿದ್ದಾನೆ ಎಂದು ಹೇಳುತ್ತಿದೆ. ಈಶ್ವರನ ಪ್ರೇರಣೆ ಇಲ್ಲದೇ

ಯಾವ ವಸ್ತುವೂ ಅಸ್ತಿತ್ವವನ್ನೇ ಹೊಂದಲು ಸಾಧ್ಯವಿಲ್ಲ. ತೃಣಾದಿ ಕಾರ್ಯ ವಸ್ತುಗಳೂ ಈಶ್ವರನ ಅಧೀನ.

''ಸ ಏವ ಭೂಯೋ ನಿಜವೀರ್ಯಚೋದಿತಾಂ'' ಎಂಬ ಸ್ಮೃತಿಯು ಜಗತ್ಕಾರಣವಾದ ಪ್ರಕೃತಿಯ ಅಸ್ತಿತ್ವವೂ ಈಶ್ವರನ ಅಧೀನ ಎಂದು ಹೇಳುತ್ತಿದೆ. ಹೀಗೆ ಈಶ್ವರನು ಕಾರ್ಯಕಾರಣರೂಪವಾದ ಸರ್ವವಸ್ತುಗಳ ಸತ್ತಾ-ಪ್ರದನಾದ್ದರಿಂದ ಅವನು ಪರ್ಜನ್ಯದಂತೆ ಕೇವಲ ಅನುಗ್ರಾಹಕ ಎಂದು ಹೇಳುವುದು ಸರಿಯಲ್ಲ. ಯಾವ ವ್ಯಕ್ತಿಯು ಒಂದು ವಸ್ತುವಿನ ಸತ್ತಾ-ಪ್ರದನಾಗಿದ್ದಾನೋ ಅವನು ಕೇವಲ ಅನುಗ್ರಾಹಕನಾಗಲು ಸಾಧ್ಯವಿಲ್ಲ ಎಂದು ವ್ಯಾಪ್ತಿಯಿದೆ.

ಹೀಗೆ ಈಶ್ವರನಿಗೆ ಸ್ವಾತಂತ್ರ್ಯಸಿದ್ಧವಾಗುವುದರಿಂದ ಸಾಂಖ್ಯಮತವು ದುರ್ಮತ ಎಂದಾಗಿ ಅದರ ವಿರೋಧ ಅಕಿಂಚಿತ್ಕರವಾಗುತ್ತದೆ. ಆದ್ದರಿಂದ ವಿಷ್ಣುವೇ ಸ್ವತಂತ್ರ ಜಗತ್ಕರ್ತಾ ಎಂಬುದಕ್ಕೆ ಯಾವುದೇ ವಿರೋಧವಿಲ್ಲ.

## ॥ ಓಂ ಅಭ್ಯುಪಗಮೇಪ್ಯರ್ಥಾಭಾವಾತ್ ಓಂ ॥ ೨-೨-೩

ಹಿಂದಿನ ಎರಡು ಅಧಿಕರಣಗಳಲ್ಲಿ, ಶ್ರುತಿ ಮತ್ತು ಅನುಮಾನ ಇವುಗಳಿಂದ, ಕೇವಲ ಜಡಕ್ಕೆ ಅಥವಾ ಈಶ್ವರಗುಣಕವಾದ ಜಡಕ್ಕೆ ಕರ್ತೃತ್ವ ಕೂಡುವುದಿಲ್ಲ ಎಂದು ಹೇಳಿಯಾಯಿತು. ಈ ಅಧಿಕರಣದಲ್ಲಿ, ಶ್ರುತ್ಯನು-ಮಾನಗಳು ಅಪ್ರಮಾಣ. ದೇಹವೇ ಕರ್ತೃ ಹಾಗಾಗಿ ಈಶ್ವರ ಕರ್ತೃವಾಗಲು ಸಾಧ್ಯವಿಲ್ಲಎಂದು ಹೇಳುವ ಚಾರ್ವಾಕ ಮತವನ್ನು ನಿರಾಕರಣೆ ಮಾಡುವುದ-ರಿಂದ ಸಂಗತಿಯಿದೆ ಎಂದು ತಿಳಿಯಬೇಕು.

ವಿಷ್ಣುವು ಜಗತ್ಕರ್ತಾ ಎಂಬುದು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂಬುದೇ ಪೂರ್ವಪಕ್ಷ. ಏಕೆಂದರೆ, ಪೂರ್ವಪೂರ್ವ ಕಾರ್ಯಗಳಿಂದಲೇ ಉತ್ತರೋತ್ತರ ಕಾರ್ಯಗಳ ಉತ್ಪತ್ತಿಯಾಗುತ್ತದೆ (ಮಹೀ-ಮಹೀಧರಾದಿಗಳಲ್ಲಿ). ಕೆಲವು ಕಡೆ, ಧಾನ್ಯದಿಂದ ಮದಿರೆ ಹುಟ್ಟುವಂತೆ ವಸ್ತು ಸ್ವಭಾವದಿಂದಲೇ ಜೀವ (ಜ್ಞಾನ)ನ ಉತ್ಪತ್ತಿಯಾಗುತ್ತದೆ. ಈಶ್ವರನ ಅಪೇಕ್ಷೆ ಇಲ್ಲಿ.

ಶ್ರುತಿ, ಅನುಮಾನ ಇವುಗಳ ವಿರೋಧವಿಲ್ಲ. ಏಕೆಂದರೆ ಪ್ರತ್ಯಕ್ಷ ಒಂದೇ ಪ್ರಮಾಣ ಉಳಿದದ್ದು ಅಪ್ರಮಾಣ.

**ಪ್ರಶ್ನೆ** :- ಶ್ರುತಿಯನ್ನು ಪ್ರಮಾಣ ಎಂದು ಒಪ್ಪದಿದ್ದರೆ ಧರ್ಮ ಅಧರ್ಮ ಇದೇ ಮೊದಲಾದ ಅತೀಂದ್ರಿಯ ವಸ್ತುಗಳ ಸಿದ್ಧಿ ಹೇಗೆ?

**ಪರಿಹಾರ** :- ಧರ್ಮಾದಿ ಯಾವ ಅತೀಂದ್ರಿಯ ವಸ್ತುವನ್ನೂ ಒಪ್ಪುವುದೇ ಇಲ್ಲ. ಹಾಗಾಗಿ ಶ್ರುತಿ ಅಪ್ರಮಾಣ ಎಂದರೆ ಅದು ನಮಗೆ ಇಷ್ಟವೇ.

ಹೀಗಿರುವಾಗ ಈಶ್ವರನ ಅವಶ್ಯಕತೆ ಎಲ್ಲಿದೆ? ಈಶ್ವರನೇ ಇಲ್ಲ ಎಂದಮೇಲೆ ಅವನಿಗೆ ಕರ್ತೃತ್ವ ಎಲ್ಲಿಂದ ಬರಬೇಕು. ಇನ್ನು ಅವನು ಸ್ವತಂತ್ರ ಎಂಬುದು ದೂರ ಉಳಿಯಿತು. ಹೀಗೆ ಚಾರ್ವಾಕ ಮತದ ವಿರೋಧ ಬರುವುದರಿಂದ ವಿಷ್ಣುವು ಜಗತ್ಕರ್ತಾ ಅಲ್ಲ ಎಂದು ಭಾವ.

**ಸಿದ್ಧಾಂತ** :- ವಿಷ್ಣುವೇ ಜಗತ್ಕರ್ತಾ ಎಂಬುದಕ್ಕೆ ಚಾರ್ವಾಕ ಮತದ ವಿರೋಧವಿಲ್ಲ. ಏಕೆಂದರೆ ಚಾರ್ವಾಕ ಮತವು ಅತ್ಯಂತ ಹೇಯವಾಗಿದೆ. ಏಕೆಂದರೆ ಈ ಮತಕ್ಕೆ ವಿಷಯ ಪ್ರಯೋಜನಗಳೇ ಇಲ್ಲ. ಹೇಗೆಂದರೆ, ಚಾರ್ವಾಕ ಮತಕ್ಕೆ ಅದೃಷ್ಟವಾದ ವಸ್ತು ವಿಷಯವಾಗಲು ಸಾಧ್ಯವಿಲ್ಲ. ಅವರು ಪ್ರತ್ಯಕ್ಷ ಒಂದೇ ಪ್ರಮಾಣ ಎಂದು ಹೇಳುವುದರಿಂದ ಅವರ ಪ್ರಕಾರ ಅದೃಷ್ಟವಾದ ವಸ್ತುವೇ ಇಲ್ಲ. ಆದ್ದರಿಂದ ದೃಷ್ಟವಾದದ್ದೇ ವಿಷಯ ಎಂದು ಒಪ್ಪಬೇಕು. ಆದರೆ ''ಅಪ್ರಾಪ್ತೇ ಶಾಸ್ತ್ರಮರ್ಥವತ್'' ಎಂಬ ನಿಯಮದಿಂದ ಪ್ರತ್ಯಕ್ಷ ಸಿದ್ಧವಾದ ವಸ್ತುವು ಶಾಸ್ತ್ರಕ್ಕೆ ವಿಷಯವಾಗಲು ಸಾಧ್ಯವಿಲ್ಲ.

**ಪ್ರಶ್ನೆ** :- ಧರ್ಮಾದಿಗಳು ಶಾಸ್ತ್ರಕ್ಕೆ ವಿಷಯವಾಗದೇ ಹೋದರೂ ಧರ್ಮಾದ್ಯಭಾವ ಶಾಸ್ತ್ರಕ್ಕೆ ವಿಷಯವಾಗುತ್ತದೆ?

**ಉತ್ತರ** :- ಅದೂ ಸಾಧ್ಯವಿಲ್ಲ. ಧರ್ಮಾದಿಗಳ ಅಭಾವ ಪ್ರತ್ಯಕ್ಷ-ಗೋಚರವಲ್ಲ. ಇನ್ನು ಅನುಮಾನದಿಂದ ಧರ್ಮಾದಿಗಳ ಅಭಾವವನ್ನು ಸಾಧನೆ ಮಾಡಬೇಕು. ಧರ್ಮಾದಿಗಳು ಯಾವುದೂ ಇಲ್ಲ ಪ್ರತ್ಯಕ್ಷಕ್ಕೆ ಗೋಚರ-ವಾಗುತ್ತಿಲ್ಲವಾದ್ದರಿಂದ ಎಂಬುದೇ ಅನುಮಾನ. ಆದರೆ ಅನುಮಾನಕ್ಕೂ ಪ್ರಾಮಾಣ್ಯವನ್ನು ಒಪ್ಪಿಲ್ಲ. ಹಾಗಾಗಿ ಅನುಮಾನದಿಂದಲೂ ಧರ್ಮಾದಿಗಳ

ಅಭಾವ ಸಿದ್ಧಿಸುವುದಿಲ್ಲ. ಹೀಗಾಗಿ ಧರ್ಮಾದಿಗಳ ಅಭಾವವನ್ನು ತಿಳಿಸುವ ಯಾವುದೇ ಪ್ರಮಾಣವಿಲ್ಲವಾದ್ದರಿಂದ ಅದು ಶಾಸ್ತ್ರಕ್ಕೆ ವಿಷಯ-ವಾಗಲು ಸಾಧ್ಯವಿಲ್ಲ.

ಇನ್ನು ಚಾರ್ವಾಕಶಾಸ್ತ್ರಕ್ಕೆ ಪ್ರಯೋಜನವೂ ಇಲ್ಲ. ಆ ಪ್ರಯೋಜನ ಇರುವುದಾದರೂ ದೃಷ್ಟವೋ ಅದೃಷ್ಟವೋ ಆಗಬೇಕು. ಅದೃಷ್ಟವಾದ ಧರ್ಮ, ಸ್ವರ್ಗ ಮೊದಲಾದದು ಪ್ರಯೋಜನವಾಗಲು ಸಾಧ್ಯವಿಲ್ಲ. ಅದೃಷ್ಟವಾದ ಯಾವುದನ್ನೂ ಒಪ್ಪಿಲ್ಲವಾದ್ದರಿಂದ. ದೃಷ್ಟವಾದ ಧನಾದಿಗಳನ್ನು ಪ್ರಯೋಜನ ಎಂದು ಹೇಳಬೇಕು. ಆದರೆ ಧನಾದಿಗಳು ವ್ಯಾಪಾರಾದಿಗಳಿಂದಲೇ ಲಭಿಸುವುದರಿಂದ ಅದು ಶಾಸ್ತ್ರದ ಪ್ರಯೋಜನವಾಗಲು ಸಾಧ್ಯವಿಲ್ಲ. ಇನ್ನು ಧರ್ಮಾದಿಗಳು ಇಲ್ಲ ಎಂಬ ಜ್ಞಾನವೇ ಪ್ರಯೋಜನ ಎಂದರೆ ಅದೂ ಸರಿಯಲ್ಲ. ಧರ್ಮಾದಿಗಳು ಇಲ್ಲ ಎಂದು ತಿಳಿಸಿದರೆ ಅದರಿಂದ ಪರಧನ ಪರಸ್ತ್ರೀಯರಿಗಾಗಿ ಜನರು ಪರಸ್ಪರ ಹಿಂಸೆಯಲ್ಲಿ ತೊಡಗಿ ಅಪಕಾರವೇ ಮಾಡಿದಂತಾಗುವುದು. ಯಾವ ಲೋಕೋಪಕಾರವೂ ಆಗುವುದಿಲ್ಲ.

ಹೀಗೆ ವಿಷಯ ಪ್ರಯೋಜಗಳಿಲ್ಲವಾದ್ದರಿಂದ ಚಾರ್ವಾಕ ಮತ ಅತ್ಯಂತ ದುಷ್ಟವಾಗಿದೆ.

ವಿಷಯ ಪ್ರಯೋಜನಗಳಿಲ್ಲದೇ ಹೋದರೂ ನಮ್ಮದು ಶಾಸ್ತ್ರವಾಗಲಿ ಎಂದರೆ ಅದು ವಿರುದ್ಧವಾಗುತ್ತದೆ. ಏಕೆಂದರೆ ಶಾಸ್ತ್ರ ಎಂದಾಗ ಬೇಕಾದರೆ ನಿಯಮೇನ ವಿಷಯ ಪ್ರಯೋಜನಗಳಿರಲೇಬೇಕು.

ಆದ್ದರಿಂದ ಚಾರ್ವಾಕ ಮತವು ದುರ್ಮತವಾದ್ದರಿಂದ ಅವರ ವಿರೋಧ ಯಾವುದೇ ಹಾನಿ ಮಾಡಲು ಸಾಧ್ಯವಿಲ್ಲ. ಹಾಗಾಗಿ ವಿಷ್ಣುವೇ ಜಗತ್ಕರ್ತಾ ಎಂಬುದು ಯುಕ್ತವೇ ಆಗುತ್ತದೆ.

## ।। ಓಂ ಪುರುಷಾಶ್ಮವದಿತಿ ಚೇತ್ತಥಾಪಿ ಓಂ ।। ೨-೨-೪

ಹಿಂದಿನ ಅಧಿಕರಣದಲ್ಲಿ, ವಿಷಯ ಪ್ರಯೋಜನಾದಿಗಳು ಯಾವುದೂ ಇಲ್ಲವಾದ್ದರಿಂದ ಚಾರ್ವಾಕ ಮತ ದುರ್ಮತ ಹಾಗಾಗಿ ಅದರ ವಿರೋಧ ಹೇಳಲು ಸಾಧ್ಯವಿಲ್ಲ. ವಿಷ್ಣುವೇ ಜಗತ್ಕರ್ತಾ ಎಂಬುದು ಅಬಾಧಿತ. ಎಂದು

ಹೇಳಿದ್ದು ಸರಿಯಲ್ಲ. ಏಕೆಂದರೆ ವಿಷಯಾದಿಗಳುಳ್ಳ, ಪುರುಷೋಪ-ಸರ್ಜನಕವಾದ ಸಾಂಖ್ಯಮತದ ವಿರೋಧ ಬರುತ್ತದೆ. ಎಂದು ಆಕ್ಷೇಪ ಮಾಡುವುದರಿಂದ ಈ ಅಧಿಕರಣಕ್ಕೂ ಹಿಂದಿನ ಅಧಿಕರಣಕ್ಕೂ 'ಆಕ್ಷೇಪಿಕೀ' ಎಂಬ ಸಂಗತಿ ಇದೆ ಎಂದು ತಿಳಿಯಬೇಕು.

ವಿಷ್ಣುವೇ ವಿಶ್ವಕರ್ತಾ ಎಂಬುದು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂದು ಪೂರ್ವಪಕ್ಷ. ಏಕೆಂದರೆ, ಕೇವಲ ಜಡಕ್ಕೆ ಪ್ರವೃತ್ತಿಮತ್ತ್ವ ಎಂಬ ಕರ್ತೃತ್ವ ಕೂಡದೇ ಹೋದರೂ ಜೀವಗುಣಕಪ್ರಧಾನಕ್ಕೆ ಕರ್ತೃತ್ವವನ್ನು ಒಪ್ಪಿದರೆ ಯಾವುದೇ ವಿರೋಧವಿಲ್ಲ ಇದು ಲೋಕದಲ್ಲೂ ಕಂಡಿದೆ. ಮೃತ ಶರೀರಕ್ಕೆ ಕಲ್ಲು ಮೊದಲಾದುದನ್ನು ತರಲು ಸಾಧ್ಯವಿಲ್ಲದೇ ಹೋದರೂ ಜೀವ ಸಂಬಂಧ ಇರುವ ದೇಹಕ್ಕೆ ಅದು ಸಾಧ್ಯವಾಗುತ್ತದೆ. ಹಾಗಾಗಿ, ಅಶ್ಮಾನಯನಾದಿ ಪ್ರವೃತ್ತಿಯಲ್ಲಿ ಪ್ರವೃತ್ತಿತ್ವ, ಜೀವೋಪಸರ್ಜನಕ ಅಚೇತನ ನಿರ್ವರ್ತ್ಯತ್ವ ಎರಡೂ ಕಂಡಿದೆ. ಅದರಂತೆ ಜಗತ್ಸೃಷ್ಟ್ಯಾದಿ ಪ್ರವೃತ್ತಿಯಲ್ಲಿಯೂ ಪ್ರವೃತ್ತಿತ್ವ ಇರುವುದರಿಂದ ಜೀವೋಪಸರ್ಜನ ಅಚೇತನ ನಿರ್ವರ್ತ್ಯತ್ವವನ್ನು ಒಪ್ಪಬೇಕು. ಈ ಅನುಮಾನದಿಂದ ಜೀವನನ್ನು ಅಪ್ರಧಾನ-ವಾಗಿ ಹೊಂದಿರುವ ಜಡವಾದ ಪ್ರಕೃತಿಗೇ ಕರ್ತೃತ್ವ ಸಿದ್ಧವಾಗುತ್ತದೆ. ಈ ಮತದ ವಿರೋಧ ವಿಷ್ಣುವೇ ಜಗತ್ಕರ್ತಾ ಎಂಬುದಕ್ಕೆ ಬರುತ್ತದೆ.

**ಸಿದ್ಧಾಂತ** :- ವಿಷ್ಣುವೇ ಜಗತ್ಕರ್ತಾ. ಸಾಂಖ್ಯಮತದ ವಿರೋಧವಿಲ್ಲ. ಏಕೆಂದರೆ,

''ನ ಋತೇ ತ್ವತ್ಕ್ರಿಯತೇ ಕಿಂಚನಾರೇ'' ಎಂಬ ಶ್ರುತಿಯು, ಶರೀರ ಪ್ರವೃತ್ತಿಯೂ ಭಗವಂತನ ಅಧೀನ ಎಂದು ಹೇಳುತ್ತಿದೆ. ಹಾಗಾಗಿ ಶರೀರಕ್ಕೆ ಸ್ವತಂತ್ರಪ್ರವೃತ್ತಿ ಒಪ್ಪುವುದು ಸರಿಯಲ್ಲ. ಲೌಕಿಕರು, ಪರೀಕ್ಷಕರು ಎಲ್ಲರೂ ಕೂಡ ದೇಹವನ್ನು 'ಅಂಗ' ಎಂದು ಜೀವವನ್ನು 'ಅಂಗೀ' ಎಂದೂ ವ್ಯವಹರಿಸುತ್ತಿದ್ದಾರೆ. ಜೀವನನ್ನು ಉಪಸರ್ಜನ, ಜಡವನ್ನು ಪ್ರಧಾನ ಎಂದು ಒಪ್ಪಿದರೆ, ಪ್ರಸಿದ್ಧವಾದ ಈ ವ್ಯವಹಾರ ಕೂಡುವುದಿಲ್ಲ. ಹಾಗಾಗಿ ಜೀವ-ಗುಣಕದೇಹಮಾತ್ರ ಕರ್ತೃತ್ವ ಎಂಬುದು ಇಲ್ಲವಾದ್ದರಿಂದ ದೃಷ್ಟಾಂತದಲ್ಲಿ

ಸಾಧ್ಯವೈಕಲ್ಯ ಬಂದು ಅನುಮಾನವು ದುಷ್ಟ ಎಂದಾಗುತ್ತದೆ. ಆದ್ದರಿಂದ ಜೀವಗುಣಕ ಪ್ರಧಾನ ಕರ್ತೃತ್ವ ಎಂಬುದು ಪ್ರಮಾಣರಹಿತ ಎಂದಾಗುತ್ತದೆ.

ಇಂತಹ ಅಪ್ರಾಮಾಣಿಕವಾದ ವಿಷಯವನ್ನು ಪ್ರತಿಪಾದಿಸುವ ಮತವು ದುರ್ಮತ ಎಂದಾಗಿ ಅದರ ವಿರೋಧ ಹೇಳಲು ಸಾಧ್ಯವಿಲ್ಲ. ಹಾಗಾಗಿ ವಿಷ್ಣುವೇ ಜಗತ್ಕರ್ತಾ ಎಂದು ಸಿದ್ಧವಾಗುತ್ತದೆ.

## ।। ಓಂ ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್ ಓಂ ।।
## ೨-೨-೫

ಹಿಂದೆ, ಜೀವನಿಗೆ ಅಂಗತ್ವವನ್ನೂ ಪ್ರಧಾನಕ್ಕೆ ಅಂಗಿತ್ವವನ್ನೂ ಒಪ್ಪಿದರೆ, ಅದು ಪ್ರಸಿದ್ಧ ವ್ಯವಹಾರಕ್ಕೆ ವಿರುದ್ಧವಾಗುವುದರಿಂದ ಸರಿಯಲ್ಲ ಎಂದು ಹೇಳಲಾಗಿದೆ. ಆದರೆ ಆ ದೋಷ ನಮ್ಮ ಮತದಲ್ಲಿ ಬರುವುದಿಲ್ಲ. ಜೀವನಿಗೇ ಅಂಗಿತ್ವವನ್ನು ಒಪ್ಪುವುದರಿಂದ. ಹೀಗೆ ಶಂಕಾ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣಕ್ಕೂ ಈ ಅಧಿಕರಣಕ್ಕೂ ಸಂಗತಿಯಿದೆ.

ವಿಷ್ಣುವು ಜಗತ್ಕರ್ತಾ ಎಂಬುದು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂದು ಪೂರ್ವಪಕ್ಷ. ಏಕೆಂದರೆ, ಪುರುಷನನ್ನು ಮುಖ್ಯವಾಗಿ ಹೊಂದಿರುವ ಪ್ರಕೃತಿಯಿಂದಲೇ ಜಗತ್ಸೃಷ್ಟಿ ಆಗುತ್ತಿರುವಾಗ ಈಶ್ವರನನ್ನು ಒಪ್ಪಿ ಪ್ರಯೋಜನವಿಲ್ಲ. ಇನ್ನು ಅವನ ಕರ್ತೃತ್ವವು ದೂರ ಉಳಿಯಿತು. ಲೋಕದಲ್ಲಿಯೂ ಕೂಡ ಹೀಗೆ ಕಂಡಿದೆ. ಕಲ್ಲನ್ನು ತರುವುದೇ ಮೊದಲಾದ ಕಾರ್ಯಗಳಲ್ಲಿ ದೇಹೋಪಸರ್ಜನಕ ಜೀವ ಕರ್ತೃತ್ವವೇ ಕಂಡಿದೆ. ಅದನ್ನು ದೃಷ್ಟಾಂತವಾಗಿ ಇಟ್ಟುಕೊಂಡು ಜಗತ್ಸೃಷ್ಟ್ಯಾದಿ ಪ್ರವೃತ್ತಿಯೂ ಕೂಡ ಪ್ರವೃತ್ತಿಯಾದ್ದರಿಂದ ಅದೂ ದೇಹೋಪಸರ್ಜನಕ ಜೀವಕರ್ತೃಕವೇ ಆಗಿದೆ ಎಂದು ಒಪ್ಪಬೇಕು. ಹೀಗೆ ಅನುಮಾನದಿಂದ ಜೀವನನ್ನು ಮುಖ್ಯವಾಗಿ ಹೊಂದಿದ ಪ್ರಧಾನಕ್ಕೇ ಸ್ವತಃ ಪ್ರವೃತ್ತಿ ಸಿದ್ಧವಾಗುವುದು. ಇದೇ ಪುರುಷ ಪ್ರಧಾನಕ ಸಾಂಖ್ಯಮತ.

ಹಿಂದೆ, ವಿಷ್ಣುವು ಜಗತ್ಕರ್ತಾ ಎಂಬುದಕ್ಕೆ ಉದಾಹರಿಸಿದ ಶ್ರುತಿಗಳಿಗೆ ಈಗ ಹೇಳಿದ ಯುಕ್ತಿಯ ವಿರೋಧ ಬರುವುದರಿಂದ ಆ ಶ್ರುತಿಗಳು ಅಪ್ರಮಾಣ ಎಂದು ಒಪ್ಪಬೇಕು.

**ಸಿದ್ಧಾಂತ :-** ವಿಷ್ಣುವೇ ಕರ್ತಾ. ಪುರುಷಪ್ರಧಾನಕವಾದ ಸಾಂಖ್ಯಮತದ ವಿರೋಧವಿಲ್ಲ. ಹೇಗೆಂದರೆ,

ಪ್ರಕೃತಿಗೆ ಅಂಗಿತ್ವವನ್ನು ಹೇಳುವ ಹಿಂದಿನ ಅನುಮಾನಕ್ಕಿಂತ ಭಿನ್ನವಾಗಿ ಜೀವನಿಗೆ ಅಂಗಿತ್ವವನ್ನು ಹೇಳುವ ಅನುಮಾನವನ್ನು ಪ್ರಯೋಗಿಸಿದರೂ ಅದರಿಂದ ಜೀವನಿಗೆ ಅಂಗಿತ್ವ ಸಿದ್ಧವಾಗುವುದಿಲ್ಲ. ಏಕೆಂದರೆ, ಜೀವನಿಗೆ ದೇಹವಿಲ್ಲದೇ ಪ್ರವೃತ್ತಿ ಮಾಡಲು ಶಕ್ತಿ ಇದೆಯೋ, ಇಲ್ಲವೋ? ಶಕ್ತಿಯಿದೆ ಎಂದರೆ ದೇಹ ವ್ಯರ್ಥವಾಯಿತು. ದೇಹವಿಲ್ಲದೇ ಪ್ರವೃತ್ತಿ ಮಾಡಲು ಶಕ್ತಿಯಿಲ್ಲ ಎಂದರೆ ದೇಹದ ಜೊತೆಗೆ ಸಂಬಂಧ ಏರ್ಪಡುವ ಪ್ರವೃತ್ತಿಗೂ ಶಕ್ತಿಯಿಲ್ಲ ಎಂದಾಯಿತು. ಪ್ರಕೃತಿಯ ಸಂಬಂಧವುಳ್ಳ ಜೀವನಿಗೆ ಆ ಶಕ್ತಿ (ದೇಹಸಂಬಂಧಹೊಂದುವ) ಬರುತ್ತದೆ ಎಂದರೆ ಆ ಪ್ರಕೃತಿ ಸಂಬಂಧ ಹೊಂದುವಲ್ಲಿಯೂ ಹೀಗೇ ವಿಕಲ್ಪ ಮಾಡುತ್ತೇವೆ. (ಪ್ರಕೃತಿಯಿಲ್ಲದೇ ಪ್ರವೃತ್ತಿ ಮಾಡಲು ಜೀವನಿಗೆ ಶಕ್ತಿ ಇದೆಯೋ ಇಲ್ಲವೋ? ಇದೆ ಎಂದರೆ ಪ್ರಕೃತಿಯು ವ್ಯರ್ಥ. ಇಲ್ಲ ಎಂದರೆ ಪ್ರಕೃತಿಯ ಸಂಬಂಧ ಏರ್ಪಡುವ ಪ್ರವೃತಿಯಲ್ಲಿಯೂ ಶಕ್ತಿಯಿಲ್ಲ ಎಂದಾಯಿತು). ಪುನಃ ಹೀಗೆ ಹೇಳುತ್ತಾ ಹೋದರೆ ಅನವಸ್ಥಾ ಎಂಬ ದೋಷ ಬರುತ್ತದೆ.

ಜೀವನಿಗೆ ಪ್ರಕೃತಿ ಸಂಬಂಧ ಅನಾದಿಕಾಲದಿಂದ ಇದೆ ಎಂದರೆ ಮುಕ್ತರ ಪ್ರವೃತ್ತಿ ಸರ್ವಥಾ ಕೂಡುವುದಿಲ್ಲ. ಮುಕ್ತರಿಗೆ ಪ್ರಕೃತಿಯ ಸಂಬಂಧ-ವಿಲ್ಲವಾದ್ದರಿಂದ. ಆದ್ದರಿಂದ ಸ್ವತಂತ್ರನಾದ ಈಶ್ವರನಿಂದಲೇ ಜೀವನಿಗೆ ದೇಹ-ಸಂಬಂಧವಾಗುತ್ತದೆ ಎಂದು ಹೇಳಬೇಕು. ಹೀಗಾಗಿಯೇ ಅಶ್ಮಾನಯನಾದಿ ಪ್ರವೃತ್ತಿಯಲ್ಲಿಯೂ ಜೀವನಿಗೆ ಸ್ವಾತಂತ್ರ್ಯವಿಲ್ಲ ಎಂದಾಗಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಬರುವುದು. ಹಾಗಾಗಿ ಅನುಮಾನವು ದುಷ್ಟವಾದ್ದರಿಂದ ಅದು ಸಾಧ್ಯಸಾಧಕವಾಗುವುದಿಲ್ಲ. ಹೀಗೆ ಪುರುಷ ಪ್ರಧಾನಕ ಪ್ರಕೃತಿ ಕರ್ತೃತ್ವ ಎಂಬುದಕ್ಕೆ ಯಾವುದೇ ಪ್ರಮಾಣವಿಲ್ಲ ಎಂದಾಗಿ ಇಂತಹ ವಿಷಯವನ್ನು ಪ್ರತಿಪಾದನೆ ಮಾಡುವ ಮತವೂ ದುಷ್ಟ ಎಂದಾಗುವುದು. ಅದರ ವಿರೋಧ ವಿಷ್ಣುವೇ ಜಗತ್ಕರ್ತಾ ಎಂಬ ಮತಕ್ಕೆ ಹೇಳಲು ಸಾಧ್ಯವಿಲ್ಲ.

ಹೀಗೆ ಸ್ವತಂತ್ರನಾದ ಈಶ್ವರನನ್ನು ಒಪ್ಪಿದರೆ ಯಾವ ವಿರೋಧವೂ ಬರುವುದಿಲ್ಲವಾದ್ದರಿಂದ ವಿಷ್ಣುವು ಜಗತ್ಕರ್ತಾ ಎಂಬುದು ಯುಕ್ತವಾಗುತ್ತದೆ.

**ಪ್ರಶ್ನೆ** :- ಓಂ ಇತರವ್ಯಪದೇಶಾದ್ಧಿತಾಕರಣಾದಿ ದೋಷ ಪ್ರಸಕ್ತಿಃ ಓಂ ಎಂಬ ಸೂತ್ರದಲ್ಲೂ ಜೀವಕರ್ತೃತ್ವದ ನಿರಾಕರಣೆ ಮಾಡಲಾಗಿದೆ. ಇಲ್ಲೂ ಅದನ್ನೇ ಮಾಡುತ್ತಿರುವುದರಿಂದ ಪುನರುಕ್ತಿ ಎಂಬ ದೋಷ ಬರುವುದಿಲ್ಲವೇ?

**ಉತ್ತರ** :- ಇಲ್ಲ, ಆ ಸೂತ್ರದಲ್ಲಿ ಶ್ರುತಿ ಮತ್ತು ಯುಕ್ತಿ ಇದರಿಂದ ಪ್ರಾಪ್ತವಾದ ಜೀವಕರ್ತೃತ್ವವನ್ನು ನಿರಾಕರಿಸಲಾಗಿದೆ. ಇಲ್ಲಿಯಾದರೋ ಸಮಯ ಪ್ರಾಪ್ತವಾದ ಜೀವಕರ್ತೃತ್ವವವನ್ನು ನಿರಾಕರಿಸಲಾಗಿದೆ. ಹೀಗೆ ವ್ಯತ್ಯಾಸವಿರುವುದರಿಂದ ಪುನರುಕ್ತಿ ಇಲ್ಲ.

## ॥ಓಂ ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ ಓಂ॥ ೨-೨-೬

ನೀರೀಶ್ವರ ಪಕ್ಷದಲ್ಲಿ ಹೇಳಲ್ಪಟ್ಟ ದೋಷಗಳು ಈಶ್ವರನನ್ನು ಒಪ್ಪುವವರ ಮತದಲ್ಲಿ ಇಲ್ಲ ಎಂದು ಶಂಕಾ ಮಾಡುತ್ತಿರುವುದರಿಂದ ಈ ಅಧಿಕರಣದಲ್ಲಿ ಪತ್ಯುದಾಹರಣ ಎಂಬ ಸಂಗತಿಯಿದೆ.

ಹಿಂದೆ ಹೇಳಲ್ಪಟ್ಟ ಅನಂತಗುಣತ್ವ ವಿಷ್ಣುವಿಗೆ ಕೂಡುತ್ತದೊ ಇಲ್ಲವೋ ಎಂಬುದೇ ಸಂದೇಹ. ಕೂಡುವುದಿಲ್ಲ ಎಂದು ಪೂರ್ವಪಕ್ಷ. ಏಕಂದರೆ,

ಈಶ್ವರ ಹಾಗು ಜೀವಾತ್ಮಾ ಇಬ್ಬರೂ ದ್ರವ್ಯದಲ್ಲೇ ಸೇರುವುದರಿಂದ ಅವರಲ್ಲಿ ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ ಎಂಬ ಐದು ಸಾಮಾನ್ಯಗುಣಗಳೂ, ಹಾಗೇ ಕರ್ತೃತ್ವಕ್ಕೆ ಉಪಯೋಗಿಯಾದ ಜ್ಞಾನ, ಇಚ್ಛೆ, ಪ್ರಯತ್ನ ಎಂಬ ಮೂರು ವಿಶೇಷಗುಣಗಳು ಒಟ್ಟು ಎಂಟು ಗುಣಗಳು ಇವೆ. ಈಶ್ವರನಲ್ಲಿ ಈ ಎಂಟು ಗುಣಗಳು ಮಾತ್ರ ಇವೆ. ಜೀವನಿಲ್ಲಿಯಾದರೋ ಇನ್ನೂ ಆರು ಸೇರಿ ಒಟ್ಟು ಹದಿನಾಲ್ಕು ಗುಣಗಳಿವೆ. ಹೀಗೆ ಈಶ್ವರನಲ್ಲಿ ಜೀವನಲ್ಲಿರುವ ಹದಿನಾಲ್ಕು ಗುಣಗಳೇ ಇಲ್ಲ ಎಂದ ಮೇಲೆ ಅನಂತಗುಣತ್ವ

ಹೇಗೆ ಬರುವುದು? ಈ ರೀತಿ ಹೇಳುವ ವೈಶೇಷಿಕಮತದ ವಿರೋಧ ವಿಷ್ಣುವು ಅನಂತಗುಣ ಎಂಬ ಮತಕ್ಕೆ ಬರುತ್ತದೆ.

**ಸಿದ್ಧಾಂತ** :- ವಿಷ್ಣುವು ಅನಂತಗುಣವುಳ್ಳವನು ಎಂಬುದು ಯುಕ್ತವೇ ಆಗಿದೆ. ವೈಶೇಷಿಕರು ಅಯುಕ್ತಭಾಷಿಗಳು. ಅವರು ಪ್ರತಿಪಾದಿಸುವ ಪ್ರಕ್ರಿಯೆಗಳಿಗೆ ಪ್ರಮಾಣವಿಲ್ಲ ಹಾಗೂ ಪ್ರಮಾಣಗಳ ವಿರೋಧವೂ ಬರುತ್ತದೆ. ಹಾಗಾಗಿ ಇಂತಹ ದುಷ್ಟಮತದ ವಿರೋಧ ಹೇಳಲು ಸಾಧ್ಯವಿಲ್ಲವಾದ್ದರಿಂದ ವಿಷ್ಣುವಿನ ಅನಂತಗುಣತ್ವ ಯುಕ್ತವೇ ಆಗುತ್ತದೆ. ಅವರ ಪ್ರಕ್ರಿಯೆಗಳು ಅಪ್ರಾಮಾಣಿಕ ಹೇಗೆಂದರೆ,

೧) ಅವರ ಪ್ರಕಾರ ತ್ರ್ಯಣುಕಾದಿಪರಿಮಾಣವು ಚತುರಣುಕಾದಿ ಪರಿಮಾಣಕ್ಕೆ ಅಸಮವಾಯಿ ಕಾರಣ. ಆದರೆ ಪರಮಾಣು ಪರಿಮಾಣ ದ್ವ್ಯಣುಕ ಪರಿಮಾಣಕ್ಕೆ ಹಾಗು ದ್ವ್ಯಣುಕ ಪರಿಮಾಣ ತ್ರ್ಯಣುಕಪರಿಮಾಣಕ್ಕೆ ಅಸಮವಾಯಿಕಾರಣವಾಗುವುದಿಲ್ಲ. ಅದರ ಬದಲಾಗಿ ಪರಮಾಣುಗಳಲ್ಲಿ-ರುವ ದ್ವಿತ್ವಸಂಖ್ಯೆ ಹಾಗು ದ್ವ್ಯಣುಕಗಳಲ್ಲಿರುವ ತ್ರಿತ್ವಸಂಖ್ಯೆಯೇ ಕ್ರಮವಾಗಿ ದ್ವ್ಯಣುಕ ಹಾಗು ತ್ರ್ಯಣುಕಪರಿಮಾಣಕ್ಕೆ ಅಸಮವಾಯಿ ಕಾರಣವಾಗುತ್ತದೆ. ಇದು ಸರಿಯಲ್ಲ. ಏಕೆಂದರೆ,

ತ್ರ್ಯಣುಕಾದಿ ಪರಿಮಾಣವು ಹೇಗೆ ಚತುರಣುಕಾದಿ ಪರಿಮಾಣಕ್ಕೆ ಅಸಮ-ವಾಯಿಕಾರಣವಾಗಿದೆಯೋ ಅದೇ ರೀತಿ ಪರಮಾಣು ಹಾಗು ದ್ವ್ಯಣುಕ ಪರಿಮಾಣವೂ ಕ್ರಮವಾಗಿ ದ್ವ್ಯಣುಕ ಹಾಗು ತ್ರ್ಯಣುಕ ಪರಿಮಾಣಕ್ಕೆ ಅಸಮವಾಯಿ ಕಾರಣವಾಗಬಹುದು. ಯಾವುದೇ ಅನುಪಪತ್ತಿ ಇಲ್ಲ.

**ಪ್ರಶ್ನೆ** :- ಅನುಪಪತ್ತಿ ಇದೆ. ಪರಿಮಾಣವು ಸ್ವಸಜಾತೀಯೋತ್ಕೃಷ್ಟ ಪರಿಮಾಣ ಜನಕವಾಗಿರುತ್ತದೆ. ಆದರೆ ಪರಮಾಣುವಿನಲ್ಲಿರುವ ಪರಿಮಾಣ 'ಅಣು': ದ್ವ್ಯಣುಕದಲ್ಲಿರುವ ಪರಿಮಾಣ 'ಹ್ರಸ್ವ'. ತ್ರ್ಯಣುಕಾದಿಗಳಲ್ಲಿರುವ ಪರಿಮಾಣ ಮಹತ್. ಹೀಗೆ ವಿಜಾತೀಯವಾದ್ದರಿಂದ ಒಂದಕ್ಕೊಂದು ಕಾರಣವಾಗಲು ಸಾಧ್ಯವಿಲ್ಲ.

**ಉತ್ತರ** :- ವಿಜಾತೀಯವಾದರೂ, ಪರಮಾಣು ಹಾಗು ದ್ವ್ಯಣುಕದಲ್ಲಿರುವ ಸಂಖ್ಯೆಗೆ ಅಸಮಾಯಿಕರಣತ್ವವನ್ನು ಹೇಳುವುದರ ಬದಲು ಎಲ್ಲ ಕಡೆ ಇರುವ 'ಪ್ರಚಯ'ಕ್ಕೆ ಕಾರಣತ್ವವನ್ನು ಹೇಳಬಹುದು.

೨) ಪರಿಮಾಣದಲ್ಲಿ ಅಣು, ಮಹತ್, ಹ್ರಸ್ವ, ದೀರ್ಘ ಎಂಬ ಅವಾಂತರ ಜಾತಿಯಿದೆ ಎನ್ನುವುದಕ್ಕೆ ಯಾವುದೇ ಪ್ರಮಾಣವಿಲ್ಲ. 'ಪರಿಮಾಣ' ಎಂಬುದು ಸಾಪೇಕ್ಷವಾದ್ದರಿಂದ ಎಲ್ಲಾ ವಸ್ತುಗಳೂ ಅಣು ಮೊದಲಾದ ಎಲ್ಲವೂ ಆಗಬಹುದು. ಯಾವುದೇ ಅವ್ಯವಸ್ಥೆ ಇಲ್ಲ. ಪುರುಷನ ಪ್ರತ್ಯಕ್ಷ ಹಾಗು ಅಪ್ರತ್ಯಕ್ಷವನ್ನು ಆಧರಿಸಿ ಅಣು, ಮಹತ್ ಎಂಬ ವ್ಯವಸ್ಥೆ ಮಾಡಬಹುದು.

೩) ವೈಶೇಷಿಕರು ಹೇಳುವ ಅಸಮವಾಯಿಕಾರಣ ಪ್ರಕ್ರಿಯೆಯೂ ಸರಿಯಲ್ಲ. ಏಕೆಂದರೆ ವಿವಕ್ಷಿತತಂತು ಸಂಯೋಗಕ್ಕಿಂತ ಅತಿರಿಕ್ತವಾದ 'ಪಟ' ಎಂಬುದಿಲ್ಲ. ವಿವಕ್ಷಿತತಂತುಸಂಯೋಗವೇ 'ಪಟ'. ಹಾಗಾಗಿ ತಂತುಸಂಯೋಗವು ಪಟವನ್ನು ಕುರಿತು ಅಸಮವಾಯಿಕಾರಣ ಎಂದು ಹೇಳುವುದು ಸರಿಯಲ್ಲ.

೪) ಅವರು ಹೇಳುವ ನಿಮಿತ್ತಕಾರಣಪ್ರಕ್ರಿಯೆಯಾ ಸರಿಯಲ್ಲ. ಅವರ ಪ್ರಕಾರ ಈಶ್ವರನ ಇಚ್ಛೆಯು ನಿಮಿತ್ತ ಕಾರಣ. ಆ ಈಶ್ವರೇಚ್ಛೆಯು ನಿತ್ಯವೋ ಅನಿತ್ಯವೋ? ನಿತ್ಯ ಎಂದರೆ ಪ್ರಳಯಕಾಲದಲ್ಲಿಯೂ ಈಶ್ವರೇಚ್ಛೆ ಇದೆ ಎಂದಾಯಿತು. ಪ್ರಳಯಕಾಲದಲ್ಲಿ ಈಶ್ವರೇಚ್ಛೆ ಇದ್ದರೂ ಪರಮಾಣುಗಳಲ್ಲಿ ಯಾವುದೇ ಕ್ರಿಯೆ ಉಂಟಾಗುವುದಿಲ್ಲ. ಹಾಗಾದರೆ ಪರಮಾಣುಕ್ರಿಯೆಗೂ ಈಶ್ವರೇಚ್ಛೆಗೂ ಸಂಬಂಧವಿಲ್ಲ ಎಂದಾಗಿ ಸೃಷ್ಟಿಕಾಲದಲ್ಲಿಯೂ ಈಶ್ವರೇಚ್ಛೆ ಇದ್ದರೂ ಪರಮಾಣು ಚೇಷ್ಟಾ ಆಗಬಾರದು. ಆಗ ತ್ರ್ಯಣುಕಾದಿ ಯಾವ ಕಾರ್ಯದ ಉತ್ಪತ್ತಿಯೂ ಆಗಲು ಸಾಧ್ಯವಿಲ್ಲ. ಇಚ್ಛೆಯು ಅನಿತ್ಯ ಎಂದರೆ ಅದಕ್ಕೆ ಉತ್ಪತ್ತಿ ಇದೆ ಎಂದಾಯಿತು. ಒಂದು ಇಚ್ಛೆಯ ಉತ್ಪತ್ತಿಗೆ ಇನ್ನೊಂದು ಇಚ್ಛೆಯ ಅವಶ್ಯಕತೆ. ಅದೂ ಅನಿತ್ಯವಾದ್ದರಿಂದ ಅದರ ಉತ್ಪತ್ತಿಗೆ ಇನ್ನೊಂದು ಹೀಗೆ ಪ್ರಮಾಣವಿಲ್ಲದೇ ಇಚ್ಛಾ ವ್ಯಕ್ತಿಪರಂಪರೆಯನ್ನು ಒಪ್ಪಿದರೆ ಅನವಸ್ಥಾ ಎಂಬ ದೋಷ ಬರುತ್ತದೆ.

ಒಂದು ಇಚ್ಛೆ ಹುಟ್ಟಲು ಇನ್ನೊಂದು ಇಚ್ಛೆಯ ಅಪೇಕ್ಷೆ ಇಲ್ಲ ಎಂದರೆ ಈ ಒಂದು ಇಚ್ಛೆಯು ಹೇಗೆ ಇನ್ನೊಂದು ಇಚ್ಛೆಯ ಅಪೇಕ್ಷೆ ಇಲ್ಲದೇ ಹುಟ್ಟಿತೋ

ಅದೇ ರೀತಿ ಉಳಿದ ವಸ್ತುಗಳೂ ಈಶ್ವರೇಚ್ಛೆಯ ಅಪೇಕ್ಷೆ ಇಲ್ಲದೇ ಹುಟ್ಟಲಿ ಎಂದು ಹೇಳಬಹುದು. ಹಾಗಾಗಿ ಅವರು ಒಪ್ಪಿರುವ ನಿಮಿತ್ತಕಾರಣ ಸಮಂಜಸವಾದದ್ದಲ್ಲ.

ಅವರು ಒಪ್ಪಿರುವ ಸಮಾವಾಯಿಕಾರಣವೂ ಯುಕ್ತವಲ್ಲ. ಏಕೆಂದರೆ 'ಸಮವಾಯ' ಎಂಬುದೇ ಅಪ್ರಾಮಾಣಿಕ. ಅವರು ಗುಣ ಮತ್ತು ಗುಣಿ (ದ್ರವ್ಯ) ಇವುಗಳಿಗೆ ಭೇದವನ್ನು ಒಪ್ಪಿ ವಿಶಿಷ್ಟಪ್ರತ್ಯಯವನ್ನು ಕೂಡಿಸುವುದಕ್ಕೋಸ್ಕರ ಅವರೆಡಕ್ಕೆ ಸಮವಾಯ ಎಂಬ ಸಂಬಂಧವನ್ನು ಒಪ್ಪುತ್ತಾರೆ. ಆದರೆ ಈ ಪ್ರಕ್ರಿಯೆ ಸರಿಯಲ್ಲ. ಏಕೆಂದರೆ, ಈ ಸಮವಾಯಕ್ಕೂ ಸಮವಾಯಿಗಳಿಗೂ (ಗುಣ ಮತ್ತು ದ್ರವ್ಯ) ಭೇದವೋ ಅಭೇಧವೋ ಎಂದರೆ, ಅವರು ಭೇದವನ್ನೇ ಒಪ್ಪುತ್ತಾರೆ. ಹಾಗೆ ಹೇಳಿದರೆ ಆಗ ಈ ಸಮವಾಯಕ್ಕೂ ಸಮವಾಯಿಗಳಿಗೂ ನಡುವೆ ಇನ್ನೊಂದು ಸಮವಾಯ ಸಂಬಂಧವನ್ನು ಒಪ್ಪಬೇಕು. ಇಲ್ಲದೇ ಹೊದರೆ ವಿಶಿಷ್ಟ ಪ್ರತೀತಿ ಕೂಡುವುದಿಲ್ಲ. ಹೀಗೆ ಒಪ್ಪುತ್ತಾ ಹೋದರೆ ಅನವಸ್ಥಾ ಉಂಟಾಗುತ್ತದೆ. ಹಾಗಾಗಿ 'ಸಮವಾಯ' ಎಂಬ ಸಂಬಂಧವೇ ಕೂಡುವುದಿಲ್ಲವಾದ್ದರಿಂದ ಸಮವಾಯ ಸಂಬಂಧವುಳ್ಳದ್ದಾಗಿ ಯಾವುದು (ಪಟ) ಎಲ್ಲಿ (ತಂತುಗಳಲ್ಲಿ) ಹುಟ್ಟುತ್ತದೋ ಅದು (ತಂತು) ಅದಕ್ಕೆ (ಪಟಕ್ಕೆ) ಸಮವಾಯಿ ಕಾರಣ ಎನ್ನುವುದೂ ಯುಕ್ತವಲ್ಲ. ಹಾಗಾಗಿ ಅವರು ಹೇಳುವ ಪ್ರಪಂಚ ಸೃಷ್ಟಿಪ್ರಕ್ರಿಯೆಯೇ ಸರಿಯಲ್ಲ ಎಂದಾಗುತ್ತದೆ.

೫) ಹೀಗೆ ಅವರ ಮತದಲ್ಲಿ ಲಯಪ್ರಕ್ರಿಯೆಯೂ ಕೂಡುವುದಿಲ್ಲ. ಅವರ ಮತದಲ್ಲಿ ಸೃಷ್ಟಿಗೆ ಸಮವಾಯಿ ಕಾರಣವಾದ ಪರಮಾಣಗಳು ನಿತ್ಯ. ಹಾಗೇ ನಿಮಿತ್ತಕಾರಣವಾದ ಈಶ್ವರೇಚ್ಛೆಯೂ ನಿತ್ಯ. ಹೀಗಿರುವಾಗ ಸದಾ ಕಾರ್ಯೋತ್ಪತ್ತಿ ಆಗುತ್ತಿರಬೇಕು ಪ್ರಳಯವೇ ಉಂಟಾಗುವಂತಿಲ್ಲ.

೬) ಇನ್ನು ಪರಮಾಣುಗಳು ನಿತ್ಯ ಎಂಬುದೂ ಸರಿಯಲ್ಲ. ಪರಮಾಣುಗಳಿಗೂ ರೂಪವಿರುವುದರಿಂದ ರೂಪವುಳ್ಳ ಘಟಾದಿಗಳಂತೆ ಅವೂ ಅನಿತ್ಯವೇ ಆಗಬೇಕು. ಈ ಅನುಮಾನದ ವಿರೋಧ ಎದುರಾಗುತ್ತದೆ. ಪರಮಾಣುಗಳಿಗೆ ರೂಪವಿದ್ದರೂ ಅವು ನಿತ್ಯವಾಗುವುದಾದರೆ ಘಟಾದಿಗಳೂ ನಿತ್ಯವಾದವುಗಳಾಗಲಿ ಎಂದು ಹೇಳಬೇಕಾಗುತ್ತದೆ.

**ಪ್ರಶ್ನೆ :-** ಸಿದ್ಧಾಂತಿಗಳಿಗೂ ಈ ಸಮಸ್ಯೆ ಒಂದೇ ಬರುತ್ತದೆ. ಸಿದ್ಧಾಂತಿಗಳು ಈಶ್ವರನಿಗೆ ರೂಪ ಒಪ್ಪುವುದರಿಂದ ಈಶ್ವರನೂ ಘಟಾದಿಗಳಂತೆ ಅನಿತ್ಯನಾಗಲಿ ಎಂದು ಏಕೆ ಹೇಳಬಾರದು?

**ಉತ್ತರ :-** ರೂಪ ಎಂದರೆ ಭೌತಿಕರೂಪ ಎಂದರ್ಥ. ಈಶ್ವರನಿಗೆ ಭೌತಿಕ-ರೂಪವಿಲ್ಲವಾದ್ದರಿಂದ ಅವನಿಗೆ ಅನಿತ್ಯತ್ವ ಬರುವುದಿಲ್ಲ. ಆದ್ದರಿಂದ, ಯಾವುದು ಭೌತಿಕರೂಪವುಳ್ಳದ್ದೋ ಅದು ಅನಿತ್ಯ ಎಂದು ವ್ಯಾಪ್ತಿ. ಅದಕ್ಕೆ ವ್ಯಭಿಚಾರವಿಲ್ಲ.

ಇನ್ನು ಮಹಾಭಾರತದಲ್ಲಿಯೂ ಕೂಡ ಈ ವೈಶೇಷಿಕಮತವನ್ನು ನಿಂದಿಸಲಾಗಿದೆ. ''ಆನ್ವೀಕ್ಷಿಕೀಂ ತರ್ಕವಿದ್ಯಾಂ ಅನುರಕ್ತೋ ನಿರರ್ಥಿಕಾಂ'' ಎಂಬುದಾಗಿ ಸೃಗಾಲರೂಪಿಯಾದ ಇಂದ್ರನು ಈ ತರ್ಕವಿದ್ಯೆಯಲ್ಲಿ ಅನುರಕ್ತರಾದರೆ ಅವರಿಗೆ ಸೃಗಾಲ ಜನ್ಮವೇ ಬರುತ್ತದೆ ಎಂದು ಹೇಳಿದ್ದಾನೆ.

ಹಾಗಾಗಿ ಈ ವೈಶೇಷಿಕಮತವು ದುಷ್ಟವಾದ್ದರಿಂದ ಅದರ ವಿರೋಧವನ್ನು ಹೇಳಲು ಸಾಧ್ಯವಿಲ್ಲ.

ಸಮನ್ವಯಾಧ್ಯಾಯದಲ್ಲಿ ಹೇಳಲ್ಪಟ್ಟ ವಿಷ್ಣುವಿನ ಪೂರ್ಣಗುತ್ವದ ಮೇಲಿನ ಆಕ್ಷೇಪ ಹಾಗು ಅದರ ಸಮಾಧಾನವೇ ಈ ಅಧಿಕರಣದ ಪೂರ್ವ-ಪಕ್ಷ ಸಿದ್ಧಾಂತ ಫಲ.

## ॥ ಓಂ ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ ಓಂ ॥ ೨-೨-೭

ಪರಮಾಣು ಆರಂಭವಾದವನ್ನು ನಿರಾಕರಣೆ ಮಾಡಿದ ನಂತರ ಪರ-ಮಾಣುಪುಂಜವಾದವನ್ನು ನಿರಾಕರಣೆ ಮಾಡುವುದು ಅವಸರ ಪ್ರಾಪ್ತವಾದ್ದ-ರಿಂದ ಹಿಂದಿನ ಅಧಿಕರಣಕ್ಕೂ ಈ ಅಧಿಕರಣಕ್ಕೂ ಸಂಗತಿ ಇದೆ ಎಂದು ತಿಳಿಯಬೇಕು.

ವಿಷ್ಣುವು ಜಗತ್ಕರ್ತಾ ಎಂಬುದು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂದು ಪೂರ್ವಪೂಕ್ಷ. ಪ್ರಪಂಚಕ್ಕೆ ಕ್ಷಣಿಕತ್ವವನ್ನು

ಹೇಳುವ ವೈಭಾಷಿಕ, ಸೌತ್ರಾಂತಿಕ ಮತದ ವಿರೋಧ ಬರುವುದರಿಂದ. ಹೇಗೆಂದರೆ, ಈ ಪ್ರಪಂಚವು ರೂಪ, ವಿಜ್ಞಾನ, ವೇದನಾ, ಸಂಜ್ಞಾ, ಸಂಸ್ಕಾರ ಎಂಬುದಾಗಿ ಐದು ವಿಧವಾಗಿದೆ. ಪ್ರಪಂಚವು ಪರಮಾರ್ಥಸತ್ ಆಗಿದೆ. ಇಂತಹ ಪ್ರಪಂಚವು ಕೇವಲ ಪರಮಾಣು ಸಮುದಾಯರೂಪವಾಗಿದೆ. ಇಂತಹ ಪರಮಾಣು ಸಮುದಾಯಗಳಲ್ಲೇ ಘಟಾದಿಬುದ್ಧಿ ಹುಟ್ಟುತ್ತದೆ. ಹಾಗಾಗಿ ಪರಮಾಣುವಿಗೆ ಪರಿಮಾಣವನ್ನಾಗಲೀ ಆ ಪರಮಾಣುಗಳಿಂದ ಆರಬ್ಧವಾದ ಅವಯವಿಯನ್ನಾಗಲೀ ಒಪ್ಪುವ ಅವಶ್ಯಕತೆಯಿಲ್ಲ. ಎಲ್ಲಾ ಪದಾರ್ಥಗಳೂ ಕೂಡ ಕ್ಷಣಿಕ. ಹೀಗೇ ಒಪ್ಪಬೇಕು. ಏಕೆಂದರೆ, ಪ್ರಪಂಚವು 'ಸತ್' ಆಗಿದೆ. ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ. ಸತ್ ಆದ ಒಂದು ವಸ್ತುವಿಗೆ ಸ್ಥಾಯಿತ್ವವನ್ನು ಒಪ್ಪಿದರೆ ಅದು ತಾನಿರುವಷ್ಟು ಕಾಲ ತನಗೆ ಸಜಾತೀಯವಾದ ಘಟಾದಿ ಕಾರ್ಯಗಳನ್ನು ಹುಟ್ಟಿಸುತ್ತಿರಬೇಕಾಗುತ್ತದೆ. ಹಾಗೆ ಹುಟ್ಟಿದ ಪದಾರ್ಥಗಳೂ ಸ್ಥಾಯಿಯಾದರೆ ಅವೂ ಸಜಾತೀಯ ಕಾರ್ಯವನ್ನು ಹುಟ್ಟಿಸಬೇಕು. ಹೀಗಾದರೆ ಒಂದೇ ಕ್ಷಣದಲ್ಲಿ ಅನಂತಕಾರ್ಯಪದಾರ್ಥಗಳು ಇರಬೇಕಾಗುತ್ತದೆ. ಹೀಗಾಗಿ ಅರ್ಥಕ್ರಿಯಾಕಾರಿತ್ವವನ್ನು ಕೂಡಿಸಬೇಕಾದರೆ ಬೇರೆ ದಾರಿಯಿಲ್ಲದೇ ಕ್ಷಣಿಕತ್ವವನ್ನು ಒಪ್ಪಲೇಬೇಕು.

ಅಥವಾ ಕ್ಷಣಿಕತ್ವವು ಅನುಮಾನದಿಂದ ಸಿದ್ಧವಾಗುತ್ತದೆ. ಯಾವುದು ಸತ್ ಆಗಿದೆಯೋ ಅದು ಕ್ಷಣಿಕ ಎಂಬುದು ವ್ಯಾಪ್ತಿ ದೀಪದಂತೆ ಎಂಬುದು ದೃಷ್ಟಾಂತ. ಎಲ್ಲಾ ಪದಾರ್ಥಗಳೂ 'ಸತ್' ಆಗಿರುವುದರಿಂದ ಕ್ಷಣಿಕವಾಗಬೇಕು ಎಂಬುದೇ ಅನುಮಾನ.

ಇಂತಹ ಕ್ಷಣಿಕವಾದ ಪ್ರಪಂಚವು ಕಾಲ, ಕರ್ಮ, ನಿಮಿತ್ತ ಇವುಗಳಿಂದಲೇ ಹುಟ್ಟುವುದರಿಂದ ಜಗತ್ಕರ್ತೃವಾದ ಈಶ್ವರನನ್ನು ಒಪ್ಪುವ ಅವಶ್ಯಕತೆ ಇಲ್ಲ.

ಈಶ್ವರನ ಸದ್ಭಾವವು ಅವನ ಜಗತ್ಕರ್ತೃತ್ವವೂ ಆಗಮದಿಂದ ಸಿದ್ಧವಾಗುತ್ತಿದೆ ಎಂದರೆ ಆಗಮಗಳಿಗೆ ಪ್ರಾಮಾಣ್ಯವನ್ನು ಒಪ್ಪಿಲ್ಲವಾದ್ದರಿಂದ ಅವು ಈಶ್ವರನ ಇರುವಿಕೆಯಲ್ಲಿ ಅವನ ಕರ್ತೃತ್ವದ ವಿಷಯದಲ್ಲಿ ಪ್ರಮಾಣವಾಗಲು ಸಾಧ್ಯವಿಲ್ಲ.

**ಸಿದ್ಧಾಂತ** :- ವಿಷ್ಣುವು ಜಗತ್ಕರ್ತಾ ಎಂಬುದು ಯುಕ್ತವಾಗಿದೆ. ಏಕೆಂದರೆ ಈ ವೈಭಾಷಿಕ ಸೌತ್ರಾಂತಿಕರಿಬ್ಬರೂ ಅನುಪಪನ್ನಭಾಷಿಗಳು. ಅವರ ಮತ ದುಷ್ಟವಾದದ್ದು. ಅದರ ವಿರೋಧ ಅಕಿಂಚಿತ್ಕರ. ಹೇಗೆಂದರೆ,

೧) ಪರಮಾಣುಗಳನ್ನು ಕಾರಣವಾಗಿಯುಳ್ಳ ಆ ಪರಮಾಣುಗಳ ಸಮುದಾಯವೇ ಘಟಾದಿ ಪದಾರ್ಥಗಳು. ಪರಮಾಣು ಸಮುದಾಯಕ್ಕಿಂತ ಅತಿರಿಕ್ತವಾದ ಅವಯವೀ ಇಲ್ಲ. ಎಂಬ ವಾದ ಸರಿಯಲ್ಲ. ಏಕೆಂದರೆ, ಈ ಸಮುದಾಯವು ಏಕಾಣುಹೇತುಕವೋ ಅನೇಕಾಣುಹೇತುಕವೋ? ಏಕಾಣು-ಹೇತುಕವಾದ ಸಮುದಾಯ ಎಂದರೆ ವಿರೋಧ ಬರುವುದು. ಸಮುದಾಯ ಎಂದರೆ ಒಂದಕ್ಕಿಂತ ಹೆಚ್ಚು ಇರಲೇಬೇಕು. ಒಂದೇ ಪರಮಾಣುವಿನ ಸಮುದಾಯ ಎಂದರೆ ಅದು ವಿರುದ್ಧವಾಗುತ್ತದೆ.

ಅನೇಕಾಣುಹೇತುಕ ಎಂಬ ಪಕ್ಷದಲ್ಲಿಯೂ ಕೂಡ ಮಿಲಿತಾನೇಕಹೇತುಕವೋ ವಿರಲಾನೇಕ ಹೇತುಕವೋ ಎಂದು ವಿಕಲ್ಪ ಮಾಡುತ್ತೇವೆ. ಮಿಲಿತಾನೇಕಹೇತುಕ ಎಂಬ ವಿಕಲ್ಪ ಕೂಡುವುದಿಲ್ಲ. ಏಕೆಂದರೆ, ಮೇಲಿನವಾದರೆ ಸಮುದಾಯ, ಸಮುದಾಯವಿದ್ದರೆ ಮೇಲನ ಎಂಬುದಾಗಿ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಹಾಗಾಗಿ ವಿರಲಾನೇಕ ಹೇತುಕ ಎನ್ನಬೇಕು. ಆದರೆ ಅದೂ ಕೂಡುವುದಿಲ್ಲ. ಏಕೆಂದರೆ ವಿರಲಪರಮಾಣುಗಳು ಸದಾ ಇರುವುದರಿಂದ ಸಮುದಾಯವೂ ಸದಾ ಇರಲೇಬೇಕಾದ್ದರಿಂದ ಆ ಸಮುದಾಯದ ನಾಶ-ರೂಪವಾದ ಪ್ರಳಯವನ್ನು ನೀವು ಅಂಗೀಕರಿಸರಿವುದು ವಿರುದ್ಧವಾಗುತ್ತದೆ.

**ಪ್ರಶ್ನೆ** :- ನಮ್ಮ ಮತದಲ್ಲಿ ಪ್ರಳಯ ಉಪಪನ್ನವಾಗುತ್ತದೆ. ಹೇಗೆಂದರೆ, ವಿರಲಾನೇಕಹೇತುಕವಾದದ್ದೇ ಸಮುದಾಯ ಎಂದು ಒಪ್ಪುತ್ತೇವೆ. ಸಮುದಾಯ ಎಂದರೆ ವಿರಲಾಣುಗಳಲ್ಲಿರುವ ಅನೇಕತ್ವ ಸಂಖ್ಯೆ . ಈ ಅನೇಕತ್ವ ಸಂಖ್ಯೆಯು ಸದಾ ಇರುವುದಾದರೂ ಅದು ಅಪೇಕ್ಷಾಬುದ್ಧಿಯಿಂದ ವ್ಯಕ್ತವಾಗುತ್ತದೆ. ಅಪೇಕ್ಷಾಬುದ್ಧಿ ಇದ್ದರೆ ಅನೇಕತ್ವದ ಪ್ರತೀತಿ ಮತ್ತು ವ್ಯವಹಾರ. ಇಲ್ಲದೇ ಹೋದರೆ ಇಲ್ಲ. ಹೀಗೆ ಅನೇಕತ್ವದ ಅಭಿವ್ಯಕ್ತಿ ಅಪೇಕ್ಷಾಬುದ್ಧಿಯ ಅಧೀನ. 'ಇದು ಒಂದು ಇದು ಇನ್ನೊಂದು' ಎಂಬ ಸ್ವರೂಪದ್ದಾಗಿರುವ ಅಪೇಕ್ಷಾಬುದ್ಧಿ ಹುಟ್ಟಬೇಕಾದರೆ ಅಣುಗಳಿಗೆ ಸಾಮೀಪ್ಯ

ಇರಬೇಕು. ಪ್ರಳಯದಲ್ಲಿಯಾದರೋ ಸಾಮೀಪ್ಯವಿರುವುದಿಲ್ಲವಾದ್ದರಿಂದ ಅಪೇಕ್ಷಾ ಬುದ್ಧಿ ಹುಟ್ಟುವುದಿಲ್ಲ. ಆ ಅಪೇಕ್ಷಾಬುದ್ಧಿಯಿಲ್ಲದ ಕಾರಣ ಅನೇಕತ್ವದ (ಸಮುದಾಯದ) ಪ್ರತೀತಿ ವ್ಯವಹಾರಗಳಿರುವುದಿಲ್ಲ. ಹೀಗೆ ಸಮುದಾಯದ ಪ್ರತೀತಿ ವ್ಯವಹಾರಗಳಿಲ್ಲದೇ ಇರುವುದೇ ಪ್ರಳಯ.

**ಉತ್ತರ** :- ಇದು ಸರಿಯಲ್ಲ. ಏಕೆಂದರೆ ನಿಮ್ಮ ಮತದಲ್ಲಿ ವಿಷಯ ಪದಾರ್ಥಗಳು ಹಾಗು ಅದನ್ನು ವಿಷಯೀಕರಿಸುವ ಆತ್ಮಾ ಇಬ್ಬರೂ ಕ್ಷಣಿಕ.

ಸಮುದಾಯದ ಪ್ರತೀತಿ ವ್ಯವಹಾರಗಳನ್ನು ಕೂಡಿಸಬೇಕಾದರೆ ಪರ-ಮಾಣುದರ್ಶನ, ಅಪೇಕ್ಷಾಬುದ್ಧಿ, ಹಾಗು ವಿತ್ತಿವ್ಯವಹಾರ ಇಷ್ಟೂ ಕೂಡ ಒಬ್ಬನೇ ಆತ್ಮನಲ್ಲಿ ಹೇಳಬೇಕು. ಅದೇ ರೀತಿ ದರ್ಶನ ವಿಷಯತ್ವ, ಅಪೇಕ್ಷಾ-ಬುದ್ಧಿವಿಷಯತ್ವ, ವಿತ್ತಿ ವ್ಯವಹಾರವಿಷಯತ್ವ ಇಷ್ಟನ್ನೂ ಒಂದೇ ಪರಮಾಣು-ಗಳಿಗೆ ಹೇಳಬೇಕು. ಆದರೆ ಈ ಮೂರರ ಏಕಾಧಿಕರಣತ್ವ ಮತ್ತು ಏಕ ವಿಷಯತ್ವ ಕ್ಷಣಿಕತ್ವವನ್ನು ಒಪ್ಪುವವರ ಮತದಲ್ಲಿ ಹೇಳಲು ಸಾಧ್ಯವಿಲ್ಲ. ಹಾಗಾಗಿ ಸಮುದಾಯದ ಪ್ರತೀತಿ ವ್ಯವಹಾರಗಳು ಉಂಟಾಗಲು ಸಾಧ್ಯವೇ ಇಲ್ಲ.

೨) ಇನ್ನು ನಿಮ್ಮ ಮತದಲ್ಲಿ ಪರಮಾಣುಗಳು ಸ್ವಸದೃಶಕಾರ್ಯಜನನ ಸ್ವಭಾವವುಳ್ಳವುಗಳು ಎಂದು ಒಪ್ಪಿರುವುದರಿಂದ, ವಿರಳಪರಮಾಣುಗಳಿಂದ ಮಿಲಿತಪರಮಾಣುಗಳು ಹುಟ್ಟಲು ಸಾಧ್ಯವೇ ಇಲ್ಲ. ವಿರಳ ಪರಮಾಣುಗಳು ತಮಗೆ ಸದೃಶವಾದ ವಿರಳಪರಮಾಣುಗಳನ್ನೇ ಹುಟ್ಟಿಸಬೇಕಾದ್ದರಿಂದ.

೩) ಓಂ ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ಓಂ ಹಾಗು ಓಂ ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ಓಂ ಎಂಬ ಎರಡು ಸೂತ್ರಗಳಲ್ಲಿ ಹೇಳಿದಂತೆ ಪ್ರತಿಕ್ಷಣ ಉತ್ಪತ್ತಿ ವಿನಾಶಗಳು ಸಾಧ್ಯವಿಲ್ಲ-ವಾದ್ದರಿಂದ ಕ್ಷಣಿಕತ್ವವುಕೂಡುವುದಿಲ್ಲ.

೪) ಅರ್ಥಕ್ರಿಯಾಕಾರಿತ್ವ ರೂಪವಾದ ಸತ್ತ್ವವನ್ನು ಬೇರೆ ರೀತಿಯಿಂದ ಕೂಡಿಸಲು ಸಾಧ್ಯವಿಲ್ಲವಾದ್ದರಿಂದ ಕ್ಷಣಿಕತ್ವವನ್ನು ಒಪ್ಪಬೇಕು ಎಂದು ಹಿಂದೆ ಹೇಳಿದ ಅರ್ಥಾಪತ್ತಿಯೂ ಕೂಡ ಓಂ ಉಭಯಥಾ ಚ ದೋಷಾತ್ ಓಂ ಎಂಬ ಸೂತ್ರದಲ್ಲಿ ಹೇಳಿದಂತೆ ದುಷ್ಟವಾಗಿದೆ.

೫) ಯಾವುದು 'ಸತ್' ಆಗಿದೆಯೋ ಅದು ಕ್ಷಣಿಕ ಎಂಬ ಅನುಮಾನವೂ ಕೂಡ ಓಂ ಆಕಾಶೇ ಚಾವಿಶೇಷಾತ್ ಓಂ ಎಂಬ ಸೂತ್ರದಲ್ಲಿ ಹೇಳಿರುವಂತೆ ಸತ್ಪ್ರತಿಪಕ್ಷವುಳ್ಳದ್ದಾಗಿದೆ.

೬) ಕ್ಷಣಿಕತ್ವವನ್ನು ಒಪ್ಪಿದರೆ 'ಅದೇ ಇದು' ಎಂಬ ಪ್ರತ್ಯಭಿಜ್ಞಾ ವಿರೋಧವೂ ಎದುರಾಗುತ್ತದೆ.

೭) ಕ್ಷಣಿಕತ್ವಕ್ಕೆ ಯಾವುದೇ ಪ್ರಮಾಣವಿಲ್ಲ ಹಾಗು ಪ್ರಮಾಣವಿರೋಧವೂ ಬರುತ್ತದೆ. ಹೀಗೆ ಅದು ಅಪ್ರಾಮಾಣಿಕವಾಗಿದೆ.

ಒಟ್ಟಿನಲ್ಲಿ ಈ ದುಷ್ಟಮತವು ಯಾವುದೇ ಪ್ರತಿರೋಧವನ್ನು ಒಡ್ಡಲು ಸಾಧ್ಯವಿಲ್ಲವಾದ್ದರಿಂದ ವಿಷ್ಣುವು ಜಗತ್ಕರ್ತಾ ಎಂಬುದು ಯುಕ್ತವಾಗುತ್ತದೆ.

## ॥ ಓಂ ನಾಸತೋಽದೃಷ್ಟತ್ವಾತ್ ಓಂ ॥ ೨-೨-೮

ಕ್ಷಣಿಕಪರಮಾಣುಪುಂಜ ಮತವನ್ನು ಕುರಿತು ಹೇಳಲ್ಪಟ್ಟ ದೋಷಗಳು ನಮ್ಮ ಮತದಲ್ಲಿ ಇಲ್ಲ ಎಂದು ಆಕ್ಷೇಪಪೂರ್ವಕವಾಗಿ ಈ ಅಧಿಕರಣ ಪ್ರವೃತ್ತ-ವಾಗುವುದರಿಂದ ಇಲ್ಲಿ ಆಕ್ಷೇಪಿಕೀ ಎಂಬ ಸಂಗತಿಯಿದೆ ಎಂದು ತಿಳಿಯಬೇಕು.

ವಿಷ್ಣುವು ವಿಶ್ವಕರ್ತಾ ಎಂಬುದು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂದು ಪೂರ್ವಪಕ್ಷ ಏಕೆಂದರೆ, ಪಾರಮಾರ್ಥಿಕವಾದ, ದೇಶತಃ ಕಾಲತಃ ವಸ್ತುತಃ ಅಪರಿಚ್ಛಿನ್ನವಾದ, ಸಂವೃತಿಯ ಸಂಬಂಧವುಳ್ಳ ಶೂನ್ಯತತ್ವದಿಂದಲೇ ವಿಶ್ವದ ಸೃಷ್ಟಿಯಾಗುತ್ತದೆ. ಅದಕ್ಕಾಗಿ ಈಶ್ವರನನ್ನು ಒಪ್ಪುವ ಅವಶ್ಯಕತೆಯಿಲ್ಲ. ಈಶ್ವರನು ಜಗತ್ಕರ್ತಾ ಎಂಬುದಕ್ಕೆ ಶ್ರುತ್ಯಾದಿ ಪ್ರಮಾಣ-ವಿದೆಯಲ್ಲಾ ? ಎಂದರೆ, ಶ್ರುತ್ಯಾದಿಗಳೆಲ್ಲಾ ಅಪ್ರಮಾಣ. ಹಾಗಾಗಿ ವಿಷ್ಣುವಿ-ನಿಂದ ಜಗದುತ್ಪತ್ತಿಯಾಗುತ್ತದೆ ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ.

ಹೀಗೆ ಹೇಳುವ ಶೂನ್ಯವಾದಿಮತದ ವಿರೋಧ ಬರುವುದರಿಂದ ವಿಷ್ಣುವು ಜಗತ್ಕರ್ತಾ ಎಂಬುದು ಯುಕ್ತವಲ್ಲ.

**ಸಿದ್ಧಾಂತ :-** ವಿಷ್ಣುವೇ ವಿಶ್ವಕರ್ತಾ. ಶೂನ್ಯವಾದಿ ಮತದ ವಿರೋಧವಿಲ್ಲ. ಏಕೆಂದರೆ, ಶೂನ್ಯತತ್ತ್ವವು ಸತ್ತ್ವಾದಿ ಎಲ್ಲಾ ಧರ್ಮಗಳಿಂದಲೂ ರಹಿತವಾಗಿದೆ. ಹಾಗಾಗಿ ಅದು ಸತ್ ಪದಾರ್ಥವಾಗಲು ಸಾಧ್ಯವಿಲ್ಲ. 'ಸತ್' ಅಲ್ಲ ಎಂದರೆ 'ಅಸತ್' ಆಗಬೇಕು. ಅಸತ್ ಪದಾರ್ಥಕ್ಕೆ ಕಾರಣತ್ವ ಕೂಡುವುದಿಲ್ಲ. ಶೂನ್ಯವು 'ಅಸತ್' ಆದರೂ ಜಗತ್ಕಾರಣವಾಗಲಿ ಎಂದರೆ, ಅಸತ್ತಾದ ಆಕಾಶಪುಷ್ಪವೂ ಸೌರಭ್ಯ ಎಂಬ ಕಾರ್ಯಕ್ಕೆ ಕಾರಣವಾಗಬೇಕು ಎಂಬ ಅತಿಪ್ರಸಂಗ ಎದುರಾಗುತ್ತದೆ.

**ಪ್ರಶ್ನೆ :-** ಶೂನ್ಯವು ಜಗತ್ಕಾರಣ ಎಂದರೆ, ಶೂನ್ಯವು ಸಂವೃತಿಸಂಬಂಧದಿಂದ ಜಗತ್ತಾಗಿ ತೋರುವುದು ಎಂದರ್ಥ. ವಸ್ತುತಃ ಜಗತ್ತು ಇಲ್ಲ.

**ಉತ್ತರ :-** ಈ ಜಗತ್ತು ಸುಳ್ಳು ಎಂಬುದು ಸರಿಯಲ್ಲ. ಏಕೆಂದರೆ ಪ್ರತ್ಯಕ್ಷಾದಿಗಳಿಂದ ಜಗತ್ತು ಸತ್ಯ ಎಂಬುದಾಗಿಯೇ ತಿಳಿಯುತ್ತಿದೆ. ಈ ಪ್ರತ್ಯಕ್ಷಾದಿಗಳಿಗೆ ಯಾವುದೇ ಬಾಧವಿಲ್ಲ.

ಹೀಗೆ ಈ ಶೂನ್ಯಮತವು ದುಷ್ಟವಾದ್ದರಿಂದ ಅದರ ವಿರೋಧ ಬರಲು ಸಾಧ್ಯವಿಲ್ಲ. ವಿಷ್ಣುವು ಜಗತ್ಕರ್ತಾ ಎಂಬುದು ಯುಕ್ತವಾಗಿದೆ. ಶೂನ್ಯವಾದಿ-ಗಳನ್ನು ನಿರಾಕರಣೆ ಮಾಡಿದ್ದರಿಂದಲೇ ಮಾಯಾವಾದಿಗಳ ನಿರಾಕರಣೆಯನ್ನೂ ಮಾಡಿದಂತಾಯಿತು ಎಂದು ತಿಳಿಯಬೇಕು.

## ॥ ಓಂ ನ ಭಾವೋಽನುಪಲಬ್ಧೇಃ ಓಂ ॥ ೨-೨-೯

ಹಿಂದೆ, ಶೂನ್ಯವು ಅಸತ್ ಆದ್ದರಿಂದ ಅದಕ್ಕೆ ಕಾರಣತ್ವ ಕೂಡುವುದಿಲ್ಲ ಎಂದು ಹೇಳಲಾಗಿದೆ. ಆದರೆ 'ವಿಜ್ಞಾನವಾದಿಗಳಾದ ನಾವು ವಿಜ್ಞಾನ ತತ್ತ್ವಕ್ಕೆ ಸತ್ತ್ವವನ್ನು ಒಪ್ಪುವುದರಿಂದ ಶೂನ್ಯವಾದಿಗಳಿಗೆ ಹೇಳಿದ ದೋಷ ನಮಗೆ ಬರುವುದಿಲ್ಲ' ಎಂದು ಹೀಗೆ ಆಕ್ಷೇಪ ಮಾಡುವುದರಿಂದ ಈ ಅಧಿಕರಣದಲ್ಲಿ ಆಕ್ಷೇಪಿಕೀ ಎಂಬ ಸಂಗತಿಯಿದೆ ಎಂದು ತಿಳಿಯಬೇಕು.

ವಿಷ್ಣುವು ಸರ್ವಕರ್ತಾ ಎಂಬುದು ಸರಿಯೋ ಅಲ್ಲವೋ ಎಂಬುದೇ ಸಂದೇಹ. ಸರಿಯಲ್ಲ ಎಂದು ಪೂರ್ವಪಕ್ಷ. ಏಕೆಂದರೆ, ವಿಜ್ಞಾನ ತತ್ತ್ವದಿಂದಲೇ

ಈ ಜಗತ್ತಿನ ಉತ್ಪತ್ತಿಯಾಗುತ್ತದೆ. ಈ ವಿಜ್ಞಾನತತ್ತ್ವವು ನಿತ್ಯ, ನಿರ್ದೋಷ, ಸದ್ರೂಪವಾಗಿದೆ. ಈ ಜಗತ್ತು ಪಾರಮಾರ್ಥಿಕ. ವಿಜ್ಞಾನತತ್ತ್ವಕ್ಕಿಂತ ಭಿನ್ನವಲ್ಲ. ಇಂತಹ ವಿಜ್ಞಾನತತ್ತ್ವದಿಂದಲೇ ಜಗದುತ್ಪತ್ತಿಯಾಗುವಾಗ ಈಶ್ವರನ ಅವಶ್ಯ-ಕತೆಯಿಲ್ಲ ಎಂದು ವಿಜ್ಞಾನವಾದಿಮತದ ವಿರೋಧ ಬರುವುದರಿಂದ ವಿಷ್ಣುವು ಸರ್ವಕರ್ತಾ ಆಗಲು ಸಾಧ್ಯವಿಲ್ಲ.

**ಸಿದ್ಧಾಂತ :-** ವಿಷ್ಣುವೇ ಸರ್ವಕರ್ತಾ. ವಿಜ್ಞಾನವಾದಿಮತದ ವಿರೋಧವಿಲ್ಲ. ಏಕೆಂದರೆ,

ವಿಜ್ಞಾನತತ್ತ್ವಕ್ಕಿಂತ ಅತಿರಿಕ್ತವಾದ ಜಗತ್ತು ಇಲ್ಲ ಎಂಬುದು ಸರಿಯಲ್ಲ. ವಿಜ್ಞಾನಕ್ಕಿಂತ ಅತಿರಿಕ್ತವಾದ ಸತ್ತ್ವವನ್ನು ಗ್ರಹಿಸುತ್ತಿರುವ ಪ್ರತ್ಯಕ್ಷದ ವಿರೋಧ ಬರುವುದರಿಂದ. ಈ ಪ್ರತ್ಯಕ್ಷವು ಅಬಾಧಿತವಾಗಿದೆ.

ಇನ್ನು ವಿಜ್ಞಾನತತ್ತ್ವಕ್ಕೂ ಜಗತ್ತಿಗೂ ಅಬೇಧವನ್ನು ತಿಳಿಸುವ ಯಾವ ಪ್ರಮಾಣವೂ ಇಲ್ಲ.

**ಪ್ರಶ್ನೆ :-** 'ಸಹೋಪಲಂಭನಿಯಮಾತ್ ಅಭೇದೋ ನೀಲತದ್ಧಿಯೋಃ' ಎಂಬ ಅನುಮಾನದಿಂದ (ಘಟ ಹಾಗು ಅದರ ಜ್ಞಾನ, ಇವುಗಳಿಗೆ ಅಭೇದ, ಸದಾ ಜೊತೆಗೇ ಉಪಲಬ್ಧವಾಗುವುದರಿಂದ) ವಿಜ್ಞಾನ ಜಗತ್ತುಗಳಿಗೆ ಅಭೇದ ಸಿದ್ಧವಾಗುತ್ತದೆ?

**ಉತ್ತರ :-** ಈ ಅನುಮಾನಕ್ಕೆ, ವಿಜ್ಞಾನ ಜಗತ್ತುಗಳಿಗೆ ಭೇದವನ್ನು ಗ್ರಹಿಸುವ ಪ್ರತ್ಯಕ್ಷದ ವಿರೋಧ ಬರುತ್ತದೆ. ಈ ಪ್ರತ್ಯಕ್ಷವಾದರೋ ಅಬಾಧಿತವಾಗಿದೆ. ಹಾಗಾಗಿ ಅನುಮಾನದಿಂದ ಅಭೇದಸಿದ್ಧವಾಗುವುದಿಲ್ಲ.

ವಿಜ್ಞಾನವು ಅಶುತರ ವಿನಾಶಿಯಾಗಿದೆ. ಅಂತಹ ವಿಜ್ಞಾನಕ್ಕೂ ಸ್ಥಾಯಿಯಾದ ಜಗತ್ತಿಗೂ ಅಭೇದ ಕೂಡುವುದಿಲ್ಲ.

ಹೀಗೆ ವಿಜ್ಞಾನವಾದಿ ಮತವು ದುಷ್ಟವಾದ್ದರಿಂದ ಅದರ ವಿರೋಧ ಹೇಳಲು ಸಾಧ್ಯವಿಲ್ಲ. ವಿಷ್ಣುವು ವಿಶ್ವಕರ್ತಾ ಎಂಬುದು ಯುಕ್ತವಾಗಿದೆ.

## ॥ ಓಂ ನೈಕಸ್ಮಿನ್ನಸಮ್ಭವಾತ್ ಓಂ ॥ ೨-೨-೧೦

ಶೂನ್ಯವಾದಿಗಳು ಹೇಳುವ ಅಸತ್ತ್ವ, ವಿಜ್ಞಾನವಾದಿಗಳು ಹೇಳುವ ಸತ್ತ್ವ, ಇವೆರಡನ್ನೂ ನಾವು ಅಂಗೀಕಾರ ಮಾಡುವುದರಿಂದ ಒಂದೊಂದು ಪಕ್ಷದಲ್ಲಿ ಹೇಳಲ್ಪಟ್ಟ ದೋಷಗಳು ನಮ್ಮ ಮತಕ್ಕೆ ಬರುವುದಿಲ್ಲ ಎಂದು ಆಕ್ಷೇಪ ಮಾಡುತ್ತಿರುವುದರಿಂದ ಈ ಅಧಿಕರಣದಲ್ಲಿ ಆಕ್ಷೇಪಿಕೀ ಎಂಬ ಸಂಗತಿಯಿದೆ.

ವಿಷ್ಣುವಿಗೆ ಹೇಳಲ್ಪಟ್ಟ ವಿಶ್ವಕರ್ತೃತ್ವವು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂದು ಪೂರ್ವಪಕ್ಷ. ಜೈನಮತ ವಿರೋಧ-ಬರುವುದರಿಂದ, ಹೇಗೆಂದರೆ, ಆತ್ಮನು ಶರೀರ ಪರಿಮಾಣವುಳ್ಳವನು. ಇಂತಹ ಆತ್ಮನ ಅದೃಷ್ಟದಿಂದ ಹಾಗು ದೃಷ್ಟ ಸಾಧನಗಳಿಂದ ಜಗತ್ತಿನ ಜನ್ಮಾದಿಗಳು ಉಂಟಾಗುತ್ತದೆ. ಈಶ್ವರನನ್ನು ಒಪ್ಪುವ ಅವಶ್ಯಕತೆಯಿಲ್ಲ. ಈ ಜಗತ್ತು ಏಳು ಪ್ರಕಾರಗಳುಳ್ಳದ್ದಾಗಿದೆ. ಈ ಪ್ರಕಾರಗಳೂ ನಿಯತವಲ್ಲ, ಅನಿಯತ. ಈ ಏಳು ಪ್ರಕಾರಗಳು ಯಾವುದೆಂದರೆ, ಸತ್ತ್ವ, ಅಸತ್ತ್ವ, ಸದಸತ್ತ್ವ, ಸದಸದ್ವಿಲಕ್ಷಣತ್ವ, ಸತ್ತ್ವೇ ಸತಿ ಸದ್ವಿಲಕ್ಷಣತ್ವ, ಅಸತ್ತ್ವೇ ಸತಿ ಅಸದ್ವಿಲಕ್ಷಣತ್ವ, ಸದಸತ್ತ್ವೇ ಸತಿ ಸದಸದ್ವಿಲಕ್ಷಣತ್ವ ಎಂಬುದಾಗಿ.

ಹೀಗೆ ಹೇಳುವ ಜೈನಮತದ ವಿರೋಧ ಬರುವುದರಿಂದ ವಿಷ್ಣುವು ವಿಶ್ವಕರ್ತಾ ಆಗಲು ಸಾಧ್ಯವಿಲ್ಲ.

**ಸಿದ್ಧಾಂತ :-** ವಿಷ್ಣುವೇ ವಿಶ್ವಕರ್ತಾ. ಜೈನಮತದ ವಿರೋಧವಿಲ್ಲ. ಅವರ ಮತ ದುಷ್ಟವಾಗಿದೆ. ಹೇಗೆಂದರೆ,

೧) ಈ ಜಗತ್ತು, ಸತ್ತ್ವ ಅಸತ್ತ್ವ, ಭಾವತ್ವ ಅಭಾವತ್ವ ಎಂದು ಎರಡೆರಡು ಪ್ರಕಾರಗಳಿಂದ ವ್ಯವಸ್ಥಿತವಾಗಿದೆ. ಇದಕ್ಕೆ ಹೊರತಾದ ಮೂರನೇ ಪ್ರಕಾರವಿದೆ ಎನ್ನುವುದಕ್ಕೆ ಯಾವುದೇ ಪ್ರಮಾಣವಿಲ್ಲ. ಹಾಗಾಗಿ ಜಗತ್ತು 'ಸಪ್ತಭಂಗಿ' ಎಂಬುದು ಅಸಂಭಾವಿತ.

೨) ಒಂದೊಂದು ಪಕ್ಷದಲ್ಲಿ ಹೇಳಲ್ಪಟ್ಟ ದೋಷವನ್ನು ಪರಿಹಾರ ಮಾಡಿಕೊಳ್ಳಬೇಕು ಎಂಬ ಇಚ್ಛೆಯಿಂದ ಏಳೂ ಪ್ರಕಾರಗಳನ್ನು ಒಪ್ಪುವುದಾದರೆ, ಏಳೂ ಪಕ್ಷಗಳಲ್ಲಿ ಹೇಳಲ್ಪಟ್ಟ ದೋಷಗಳೂ ಬಂದೊದಗುತ್ತವೆ.

೩) ಆತ್ಮನು ಶರೀರ ಪರಿಮಾಣವುಳ್ಳವನು ಎಂಬುದೂ ಸರಿಯಲ್ಲ. ಏಕೆಂದರೆ,

ಮಶಕ (ಸೊಳ್ಳೆ) ಶರೀರದಲ್ಲಿರುವ ಆತ್ಮಾ ಮಶಕ ಪರಿಮಾಣವುಳ್ಳವನು. ಅವನಿಗೆ ಮುಂದಿನ ಜನ್ಮದಲ್ಲಿ ಮಾತಂಗ (ಆನೆ) ಶರೀರ ಬಂದರೆ ಆಗ ಅಕಾತ್ಸ್ನ್ಯರ್ (ಆನೆಯ ಶರೀರ ಪೂರ್ತಿ ಇಲ್ಲದೇ ಇರುವುದು) ಉಂಟಾಗುತ್ತದೆ. ಅದಕ್ಕೆ ವಿರುದ್ಧವಾಗಿ ಆನೆಯ ಶರೀರದಲ್ಲಿದ್ದವನಿಗೆ ಮುಂದೆ ಮಶಕ ಶರೀರ ಬಂದರೆ ಅತಿರೇಕ (ಮಶಕ ಶರೀರದ ಆಚೆಯೂ ಇರುವುದು) ಉಂಟಾಗುತ್ತದೆ.

**ಪ್ರಶ್ನೆ** :- ಮಶಕ ಶರೀರವಿದ್ದಾಗ ಆತ್ಮನೂ ಮಶಕ ಶರೀರದಷ್ಟೇ ಇರುವನು. ಆನೆಯ ಶರೀರ ಬಂದಾಗ ಆತ್ಮನೂ ಬೆಳೆದು ಆನೆಯ ಶರೀರದಷ್ಟು ಆಗುವನು. ಹೀಗೆ ಯಾವ ಶರೀರ ಬರುವುದೋ ಅದಕ್ಕೆ ಅನುಗುಣವಾಗಿ ಆತ್ಮನೂ ಹಿಗ್ಗುತ್ತಾನೆ ಅಥವಾ ಕುಗ್ಗುತ್ತಾನೆ?

**ಉತ್ತರ** :- ಹೀಗೆ ಆತ್ಮನಿಗೆ, ಶರೀರಕ್ಕೆ ಅನುಗುಣವಾಗಿ ಹಿಗ್ಗು, ಕುಗ್ಗುಗಳನ್ನು ಒಪ್ಪಿದರೆ ಅವನಿಗೂ ವಿಕಾರವಿದೆ ಎಂದಾಗಿ ಆತ್ಮನು ಅನಿತ್ಯನಾಗಬೇಕಾಗುತ್ತದೆ.

ಆತ್ಮನು ಶರೀರಪರಿಮಾಣವುಳ್ಳವನು ಎನ್ನುವುದಕ್ಕೆ ಯಾವುದೇ ಪ್ರಮಾಣ-ವಿಲ್ಲ. ಮತ್ತು ಅದು ಅನೇಕ ಪ್ರಮಾಣಗಳಿಗೆ ವಿರುದ್ಧವೂ ಆಗಿದೆ.

ಹಾಗಾಗಿ ಈ ಜೈನ ಮತವು, ದುಷ್ಟವಾದ್ದರಿಂದ ಅದರ ವಿರೋಧ 'ವಿಷ್ಣುವು ವಿಶ್ವಕರ್ತಾ' ಎಂಬ ಮತಕ್ಕೆ ಬರಲು ಸಾಧ್ಯವಿಲ್ಲ.

## ॥ ಓಂ ಪತ್ಯುರಸಾಮಂಜಸ್ಯಾತ್ ಓಂ ॥ ೨-೨-೧೧

ಈ ಪ್ರಪಂಚವು ಒಂದು ಪ್ರಕಾರವುಳ್ಳದ್ದಾಗಿದೆ ಎದು ಅಂಗೀಕಾರ ಮಾಡುವುದರಿಂದ, 'ಜಗತ್ತು ಸಪ್ತ ಭಂಗಿ' ಎಂಬ ಮತವನ್ನು ಕುರಿತು ಹೇಳಲ್ಪಟ್ಟ ದೋಷಗಳು ನಮಗೆ ಬರುವುದಿಲ್ಲ. ಎಂದು ಹೀಗೆ ಆಕ್ಷೇಪ ಮಾಡುತ್ತಿರುವುದರಿಂದ, ಈ ಅಧಿಕರಣದಲ್ಲಿ ಆಕ್ಷೇಪಿಕೀ ಎಂಬ ಸಂಗತಿಯಿದೆ.

ವಿಷ್ಣುವಿಗೆ ಹೇಳಲ್ಪಟ್ಟ ವಿಶ್ವಕರ್ತೃತ್ವವು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂಬುದು ಪೂರ್ವಪಕ್ಷ. ಶೈವಾದಿಮತ ವಿರೋಧ ಬರುವುದರಿಂದ.

ಹೇಗೆಂದರೆ, ಪಶುಪತಿಯೇ ಸಾರ್ವಜ್ಞಾದಿಗುಣಗಳುಳ್ಳವನು ಅವನೇ ಮಾಯೆ (ಪ್ರಕೃತಿ)ಯನ್ನು ಉಪಾದಾನವಾಗಿ ಮಾಡಿಕೊಂಡು ಹರಿ, ಹರ, ಹಿರಣ್ಯಗರ್ಭ ಮೊದಲಾದ ಸಮಸ್ತ ಪ್ರಪಂಚವನ್ನು ನಿರ್ಮಾಣವಾಡುತ್ತಾನೆ. ಹೀಗೇ ಶ್ರುತಿಸ್ಮೃತಿಗಳು ಸಾರುತ್ತಿವೆ. ಹಾಗಾಗಿ ಪಾಶುಪತ ಮತದ ವಿರೋಧ ಬರುವುದರಿಂದ ವಿಷ್ಣುವು ಜಗತ್ಕರ್ತಾ ಆಗಲು ಸಾಧ್ಯವಿಲ್ಲ.

**ಸಿದ್ಧಾಂತ :-** ವಿಷ್ಣುವೇ ಜಗತ್ಕರ್ತಾ, ಪಶುಪತಿಯಲ್ಲ. ಏಕೆಂದರೆ

೧) ''ಯಂ ಕಾಮಯೇ ತಂ ತಮಮುಗ್ರಂ ಕೃಣೋಮಿ'' ಎಂದು ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತ್ಯಾದಿಗಳಿಂದ ಶಿವನು ಪರಾಧೀನ ಎಂದು ತಿಳಿಯುತ್ತಿದೆ.

೨) ಶಿವನಿಗೆ ಶರೀರವಿಲ್ಲದೇಯಿರುವುದರಿಂದ ಅವನು ಕರ್ತೃವಾಗಲು ಸಾಧ್ಯವಿಲ್ಲ. ಜೊತೆಗೆ ಪ್ರಳಯಕಾಲದಲ್ಲಿ ಎಲ್ಲಾ ಭೂತಗಳೂ ವಿಲೀನ-ವಾಗಿರುತ್ತವೆಯಾದ್ದರಿಂದ ಪೃಥಿವ್ಯಾದ್ಯಧಿಷ್ಠಾನವಿರುವುದಿಲ್ಲ. ಈ ಕಾರಣ-ದಿಂದಲೂ ಶಿವನಿಗೆ ಕರ್ತೃತ್ವ ಕೂಡುವುದಿಲ್ಲ.

**ಪ್ರಶ್ನೆ :-** ಶರೀರ, ಅಧಿಷ್ಠಾನಗಳಿಲ್ಲದೇ ಇರುವುದರಿಂದ ಶಿವನಿಗೆ ಕರ್ತೃತ್ವ ಕೂಡುವುದಿಲ್ಲ ಎನ್ನುವುದು ತಪ್ಪು. ಶಿವನಿಗೆ ಬೇರೆ ಶರೀರದ ಅವಶ್ಯಕತೆಯಿಲ್ಲ. ಬೇರೆ ಅಧಿಷ್ಠಾನವೂ ಬೇಕಿಲ್ಲ. ಕಾರಕಸಮೂಹವೇ ಅವನಿಗೆ ಶರೀರ, ಅಧಿಷ್ಠಾನ ಎಲ್ಲವೂ ಆಗಿದೆ. ಕಾರಕಜಾತವೇ ಸಾಕ್ಷಾತ್ ಪ್ರಯತ್ನಾಧಿಷ್ಠೇಯ-ವಾದ್ದರಿಂದ ಅದೇ ಶರೀರ.

**ಉತ್ತರ :-** ಶಿವನಿಗೆ ಶರೀರವನ್ನು ಒಪ್ಪಿದರೆ ಅವನಿಗೂ ಶರೀರ ನಿಮಿತ್ತಕವಾದ ಜನ್ಮ ಮರಣಗಳನ್ನು ಒಪ್ಪಬೇಕಾಗುತ್ತದೆ. ಹಾಗೇ ಸುಖದುಃಖಾದಿಭೋಗವನ್ನೂ ಒಪ್ಪಬೇಕಾಗುತ್ತದೆ.

**ಪ್ರಶ್ನೆ** :- ವಿಷ್ಣುವು ಜಗತ್ಕರ್ತಾ ಎಂಬ ಪಕ್ಷದಲ್ಲಿಯೂ ಮೇಲೆ ಹೇಳಿದ ದೋಷ ಬಂದೇ ಬರುವುದು?

**ಉತ್ತರ** :- ಇಲ್ಲ. ವಿಷ್ಣುವು ವಿಚಿತ್ರಶಕ್ತಿವುಳ್ಳವನು. ಅವನ ಶಕ್ತಿಯು ನಿತ್ಯದಲ್ಲೂ ಸರ್ವ ವಿಷಯಕ. ಈ ವಿಚಾರವು ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ ಎಂಬ ಶ್ರುತ್ಯಧಿಕರಣದಲ್ಲಿ ಹೇಳಲ್ಪಟ್ಟಿದೆ. ವಿಷ್ಣುವಿನ ಶರೀರ ಜ್ಞಾನಾನಂದಾದಿ ರೂಪವಾಗಿದೆ. ಹಾಗಾಗಿ ಅವನಿಗೆ ಕರ್ತೃತ್ವ ಕೂಡುತ್ತದೆ. ಯಾವುದೇ ದೋಷದ ಪ್ರಸಕ್ತಿಯಿಲ್ಲ. ಎಲ್ಲಾ ಶ್ರುತಿಗಳನ್ನೂ ವಿಷ್ಣುವಿನಲ್ಲಿ ಸಮನ್ವಯಮಾಡಿರುವುದ-ರಿಂದ ಶಿವನು ಜಗತ್ಕರ್ತಾ ಎಂದು ಹೇಳುವ ಯಾವ ಪ್ರಮಾಣವೂ ಇಲ್ಲ.

ಹೀಗೆ ಪಾಶುಪತಮತವು ದುಷ್ಟವಾದ್ದರಿಂದ ಅದರ ವಿರೋಧ ಬರಲು ಸಾಧ್ಯವಿಲ್ಲ.

ಪಾಶುಪತಮತವನ್ನು ನಿರಾಕರಣೆ ಮಾಡಿದ್ದಲಿಂದಲೇ, ಅದೇ ನ್ಯಾಯ-ದಿಂದ, ಶಾಕ್ತೇಯ, ಸೌರ, ಸ್ಕಾಂದ, ಗಾಣಪತ್ಯ ಮೊದಲಾದ ಮತಗಳೂ ನಿರಾಕೃತವಾದವು ಎಂದು ತಿಳಿಯಬೇಕು.

## ॥ ಓಂ ಉತ್ಪತ್ತ್ಯಸಂಭವಾತ್ ಓಂ ॥ ೨-೨-೧೨

ಹಿಂದೆ ಪಾಶುಪತಮತವನ್ನು ನಿರಾಕರಿಸಿದ್ದರಿಂದಲೇ ಶಕ್ತಿಮತವೂ ನಿರಾಕೃತವಾದಂತೇ ಆಗಿದೆ. ಆದರೂ ವಿಶೇಷ-ದೋಷಗಳನ್ನು ಹೇಳುವುದಕ್ಕಾಗಿ ಈ ಅಧಿಕರಣದಲ್ಲಿ ಪುನಃ ಅದರ ವಿಚಾರವನ್ನು ಮಾಡಲಾಗುತ್ತಿದೆ. ಹೀಗೆ ಸಂಗತಿಯನ್ನು ತಿಳಿಯಬೇಕು.

ವಿಷ್ಣುವಿಗೆ ಹೇಳಲ್ಪಟ್ಟ ವಿಶ್ವಕರ್ತೃತ್ವವು ಯುಕ್ತವೋ ಅಲ್ಲವೋ ಎಂಬುದೇ ಸಂದೇಹ. ಯುಕ್ತವಲ್ಲ ಎಂದು ಪೂರ್ವಪಕ್ಷ. ಏಕೆಂದರೆ, ಶ್ರುತ್ಯಾದಿಗಳಲ್ಲಿ ಸಾರ್ವಜ್ಞಾದಿಗುಣವಿಶಿಷ್ಟಳಾದ ಶಕ್ತಿಯೇ ವಿಶ್ವಕರ್ತೃ ಎಂಬುದಾಗಿ ಉಕ್ತವಾಗಿದ್ದಾಳೆ. ಅದರ ವಿರೋಧ ಬರುತ್ತದೆ.

**ಸಿದ್ಧಾಂತ** :- ವಿಷ್ಣುವೇ ಜಗತ್ಕರ್ತಾ, ಶಕ್ತಿಯಲ್ಲ. ಏಕೆಂದರೆ,

೧) ಪುರುಷನ ಅನುಗ್ರಹವಿಲ್ಲದೇ ಕೇವಲ ಸ್ತ್ರೀಯಿಂದ ಉತ್ಪತ್ತಿ ಸಾಧ್ಯವಿಲ್ಲ. ಹಾಗಾಗಿ ಕೇವಲ ಶಕ್ತಿಯು ಬ್ರಹ್ಮಾದಿ ಸಕಲ ಜಗತ್ತಿಗೆ ಉತ್ಪಾದಕಳಾಗಲು ಸಾಧ್ಯವಿಲ್ಲ.

೨) ಶಕ್ತಿಗೆ ಶಿವನ ಅನುಗ್ರಹವಿದೆ ಎಂಬ ಮಧ್ಯಮವಾಮ ಮತದ ಅನುಸಾರವೂ ಶಕ್ತಿಗೆ ಜಗತ್ಕರ್ತೃತ್ವ ಕೂಡುವುದಿಲ್ಲ. ಏಕೆಂದರೆ ಶಕ್ತಿಗೆ ಅನುಗ್ರಾಹಕನಾದ ಶಿವನಿಗೆ ಸೃಷ್ಟಿ ಮಾಡಲು ಉಪಯೋಗಿಯಾದ ಜ್ಞಾನಾದಿ ಸಾಧನಗಳಿಲ್ಲದೇ ಇರುವುದರಿಂದ ಆ ಶಿವನಿಗೆ ಅನುಗ್ರಾಹಕತ್ವವೇ ಕೂಡುವುದಿಲ್ಲ.

೩) ಸೃಷ್ಟಿಗೆ ಉಪಯೋಗಿಯಾದ ಜ್ಞಾನಾದಿಗಳನ್ನು ಶಿವನಿಗೆ ಒಪ್ಪುವ ಅಣುವಾಮ ಮತವೂ ಸರಿಯಲ್ಲ. ಹಾಗೆ ಶಿವನಿಗೆ ಜ್ಞಾನಾದಿಗಳಿದ್ದರೆ ಅವನೇ ಜಗತ್ಸೃಷ್ಟಿಯನ್ನು ಮಾಡಬಹುದಾದ್ದರಿಂದ ಶಕ್ತಿಯನ್ನು ಜಗತ್ಕರ್ತೃತ್ವೇನ ಒಪ್ಪಿದ್ದು ವ್ಯರ್ಥವಾಗುತ್ತದೆ.

ಹೀಗೆ ಮಹಾವಾಮ, ಮಧ್ಯಮವಾಮ, ಅಣುವಾಮ ಮೂರು ಮತಗಳು ಯುಕ್ತವಲ್ಲ.

ಈ ಮೂರೂ ಮತಗಳು ಶ್ರುತಿಗೆ ವಿರುದ್ಧವಾಗಿವೆ. ಹಾಗಾಗಿ ಶಕ್ತಿಮತವು ದುಷ್ಟವಾದ್ದರಿಂದ ಅದರ ವಿರೋಧ ಬರಲು ಸಾಧ್ಯವಿಲ್ಲ. ವಿಷ್ಣುವೇ ಜಗತ್ಕರ್ತಾ ಎಂಬುದು ಯುಕ್ತವಾಗಿದೆ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಎರಡನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು.**

# ಎರಡನೇ ಅಧ್ಯಾಯದ ಮೂರನೆಯ ಪಾದ

**ಪಾದ ಸಂಗತಿ :-** ಈ ಪಾದದಲ್ಲಿಯೂ ಹಿಂದಿನ ಪಾದದಲ್ಲಿ ಹೇಳಿದಂತೆ ಪಾದಸಂಗತಿಯನ್ನು ಇಟ್ಟುಕ್ಕೊಳ್ಳಬಹುದು. ಮೊದಲು ದುರ್ಬಲವಾದ ಯುಕ್ತಿವಿರೋಧವನ್ನು ಪರಿಹಾರಮಾಡಿ ಅನಂತರ ಕ್ರಮವಾಗಿ ಪ್ರಬಲವಾದ ಸಮಯ, ಶ್ರುತಿ, ಯುಕ್ತಿಸಹಿವಾದ ಶ್ರುತಿ ವಿರೋಧವನ್ನು ಪರಿಹಾರ-ಮಾಡುವುದು. ಅಥವಾ ಹಿಂದಿನ ಅಧಿಕರಣದಲ್ಲಿ ಬಂದಿರುವ ಓಂ ವಿಪ್ರತಿ-ಷೇಧಾಚ್ಚ ಓಂ ಎಂಬಲ್ಲಿ ಹೇಳಲ್ಪಟ್ಟ ದೋಷಗಳು ವೈದಿಕ ಮತಕ್ಕೂ ಅನ್ವಯಿಸುತ್ತದೆ ಎಂಬ ಶಂಕಾ ಬಂದರೆ ಅವರ ನಿರಾಸವನ್ನು ಮಾಡುತ್ತಿರುವುದ-ರಿಂದ ಹಿಂದಿನ ಪಾದಕ್ಕೂ ಈ ಪಾದಕ್ಕೂ ಸಂಗತಿಯನ್ನು ತಿಳಿಯಬಹುದು.

## ॥ ಓಂ ನ ವಿಯದಶ್ರುತೇಃ ಓಂ ॥ ೨-೩-೧

ಅಧಿಭೂತ, ಅದಿದೈವ, ಪರಮಾತ್ಮ, ಜೀವ ಇಷ್ಟು ವಿಚಾರ ಪ್ರಸ್ತುತವಾಗಿದೆ. ಇವುಗಳಲ್ಲಿ ಸೂಚೀಕಟಾಹನ್ಯಾಯವನ್ನು (ಮೊದಲು ಚಿಕ್ಕ ಕೆಲಸ ಮುಗಿಸಿ ನಂತರ ದೊಡ್ಡ ಕೆಲಸಕ್ಕೆ ಕೈಹಾಕುವುದು) ಅನುಸರಿಸುತ್ತಾ ಮೊದಲು ಅಧಿಭೂತ ಹಾಗು ಅಧಿದೈವ ವಿಚಾರವನ್ನು ಮಾಡಲಾಗುತ್ತಿದೆ.

ಸೂತ್ರದಲ್ಲಿರುವ ವಿಯತ್ ಶಬ್ದದಿಂದ ಭೂತಾಕಾಶ, ಅವ್ಯಾಕೃತಾಕಾಶ, ಇವುಗಳ ಅಭಿಮಾನಿ ದೇವತೆಗಳು ಇಷ್ಟನ್ನು ಗ್ರಹಿಸಬೇಕು. ಆಕಾಶಕ್ಕೆ ಉತ್ಪತ್ತಿ ಇದೆಯೇ ಇಲ್ಲವೋ ಎಂಬುದೇ ಸಂದೇಹ. ಉತ್ಪತ್ತಿಯಿಲ್ಲ ಎಂದು ಪೂರ್ವಪಕ್ಷ. ಏಕೆಂದರೆ,

ಆಕಾಶಕ್ಕೆ ಹುಟ್ಟಿಲ್ಲ ಎಂಬುದೇ ಎಲ್ಲರ ಅನುಭವ. ಜೊತೆಗೆ ಆಕಾಶವು ವಿಭುದ್ರವ್ಯವಾದ್ದರಿಂದ ಅದಕ್ಕೆ ಉತ್ಪತ್ತಿಯಿಲ್ಲ ಉಳಿದ ವಿಭುದ್ರವ್ಯಗಳಂತೆ ಎಂಬ ಅನುಮಾನವೂ ಇದೆ. ಈ ಪ್ರತ್ಯಕ್ಷ ಹಾಗು ಅನುಮಾನಗಳಿಂದ ಅನುಗೃಹೀತವಾಗಿದೆ 'ಅನಾದಿರ್ವಾಯಮಾಕಾಶಃ' ಎಂಬ ಅನಾದಿತ್ವವನ್ನು ಹೇಳುವ ಶ್ರುತಿ. ಇಂತಹ ಶ್ರತಿಗಳು ಅನೇಕ ಇವೆ. ಹೀಗೆ ಅನಾದಿತ್ವವನ್ನು

ಹೇಳುವ ಶ್ರುತಿ, ಯುಕ್ತಿ ಸಹಿತವಾದದ್ದರಿಂದ ಪ್ರಬಲವಾಗಿದೆ. ಬಹುತ್ವ ಎಂಬ ಕಾರಣದಿಂದಲೂ ಪ್ರಬಲವಾಗಿದೆ.

**ಪ್ರಶ್ನೆ** :- ಆಕಾಶಸ್ಸಂಭೂತ ಎಂದು ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಯೂ ಇದೆ. ಇದರ ಬಲದಿಂದ ಅನುತ್ಪತ್ತಿಯನ್ನು ಹೇಳುವ ಶ್ರುತಿಗೆ ಅಮುಖ್ಯಾರ್ಥವನ್ನೇಕೆ ಮಾಡಬಾರದು?.

**ಉತ್ತರ** :- ಇದು ಸರಿಯಲ್ಲ, ಏಕೆಂದರೆ ಆಕಾಶಕ್ಕೆ ಉತ್ಪತ್ತಿಯಿಲ್ಲ ಎನ್ನುವುದಕ್ಕೆ, ಪ್ರತ್ಯಕ್ಷ ಹಾಗು ಯುಕ್ತಿ, ಇವರೆಡರ ಅನುಗ್ರಹವುಳ್ಳ ಶ್ರುತಿಯಿದೆ. ಆದ್ದರಿಂದ ಅದು ಪ್ರಬಲ. ಇಂತಹ ಪ್ರಬಲ ಶ್ರುತಿಯಿಂದ ದುರ್ಬಲವಾದ ಉತ್ಪತ್ತಿ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕೇ ಹೊರತು ಪ್ರಬಲವಾದ ಅನುತ್ಪತ್ತಿ ಶ್ರುತಿಗೆ ಅಮುಖ್ಯಾರ್ಥವನ್ನು ಮಾಡಬಾರದು.

'ನ ಜಾಯತೇ ಮ್ರಿಯತೇ ವಾ' ಎನ್ನುವಲ್ಲಿರುವ ಅನುತ್ಪತ್ತಿವಾಚಕಶಬ್ದಕ್ಕೆ ಮುಖ್ಯಾರ್ಥವನ್ನೇ ಗ್ರಹಿಸಲಾಗಿದೆ. ಅದೇ ಅನುತ್ಪತ್ತಿವಾಚಕವಾದ ಶಬ್ದ ಪ್ರಕೃತದಲ್ಲಿಯೂ ಶ್ರುತವಾಗಿದೆ. ಇಲ್ಲಿಯೂ ಮುಖ್ಯಾರ್ಥವನ್ನೇ ಇಟ್ಟುಕೊಳ್ಳಬೇಕು ಅಮುಖ್ಯಾರ್ಥವನ್ನು ಮಾಡುದಕ್ಕೆ ಯಾವುದೇ ಕಾರಣವಿಲ್ಲ. ಕಾರಣವಿಲ್ಲದೇ ಅಮುಖ್ಯಾರ್ಥವನ್ನು ಮಾಡಿದರೆ ದ್ವೈರೂಪ್ಯವನ್ನು ಅಂಗೀಕರಿಸಿದಂತಾಗುತ್ತದೆ. ಅದು ಸರಿಯಲ್ಲ. ಒಂದೇ ಶಬ್ದಕ್ಕೆ ಒಂದು ಕಡೆ ಮುಖ್ಯಾರ್ಥ ಇನ್ನೊಂದು ಕಡೆ ಅಮುಖ್ಯಾರ್ಥ - ಇದೇ ದ್ವೈರೂಪ್ಯ

**ಸಿದ್ಧಾಂತ** :- ಆಕಾಶಕ್ಕೆ ಉತ್ಪತ್ತಿಯಿದೆ.

ಆತ್ಮನ ಆಕಾಶಃ ಸಂಭೂತ ಇತ್ಯಾದಿ ಉತ್ಪತ್ತಿಪ್ರತಿಪಾದಕ ಶ್ರುತಿಗಳು ಅನೇಕ ಇರುವುದರಿಂದ.

ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳುವ ಶ್ರುತಿಯ ವಿರೋಧ ಬರುವುದಲ್ಲಾ? ಎಂದರೆ, ಇಲ್ಲ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿ. ಪ್ರಬಲ, ಏಕೆಂದರೆ ಅದು ಸರ್ವವಿಷಯಕವಾಗಿದೆ. ಆಕಾಶ ಶಬ್ದಕ್ಕೆ ಭೂತಾಕಾಶ, ಅವ್ಯಾಕೃತಾಕಾಶ, ಇವೆರಡರ ಅಭಿಮಾನಿಗಳು ಎಂದು ಇಷ್ಟು ಅರ್ಥ. ಈ ನಾಲ್ಕಕ್ಕೂ ಉತ್ಪತ್ತಿಯಿದೆ.

ಪರಾಧೀನವಿಶೇಷಾವಾಪ್ತಿ ಎಂಬುದು ಎಲ್ಲದಕ್ಕೂ ಇದೆ. ಹಾಗಾಗಿ ಉತ್ಪತ್ತಿಶ್ರುತಿ ಬಹುವಿಷಯವಾಯಿತು. ಹಾಗಾಗೇ ಪ್ರಬಲವಾಯಿತು. ಜೊತೆಗೆ, ಆಕಾಶವು ಅಲ್ಪಶಕ್ತಿಯುಳ್ಳದಾದ್ದರಿಂದ ಅದಕ್ಕೂ ಉತ್ಪತ್ತಿಯಿರಬೇಕು, ಘಟದಂತೆ ಎಂಬ ಅನುಮಾನವೂ ಇದೆ. ಈ ಕಾರಣದಿಂದಲೂ ಶ್ರುತಿಯು ಪ್ರಬಲವಾಯಿತು.

ಹೀಗೆ ಪ್ರಬಲವಾದ ಉತ್ಪತ್ತಿ ಶ್ರುತಿಯನ್ನು ಬೇರೆ ರೀತಿ ಕೂಡಿಸಲು ಬರುವುದಿಲ್ಲವಾದ್ದರಿಂದ ಅನುತ್ಪತ್ತಿ ಶ್ರುತಿಗೆ ಆಮುಖ್ಯಾರ್ಥ ಮಾಡಬೇಕು. ಅನುತ್ಪತ್ತಿಶ್ರುತಿಯು ಅಲ್ಪವಿಷಯವೂ ಆಗಿದೆ ಭೂತಾಕಾಶಕ್ಕೆ ಅನುತ್ಪತ್ತಿಯನ್ನು ಹೇಳಲು ಸಾದ್ಯವಿಲ್ಲ. ಅಲ್ಪವಿಷಯತ್ವ ಇರುವುದರಿಂದಲೇ ಅನುತ್ಪತ್ತಿಶ್ರುತಿ ದುರ್ಬಲವೂ ಆಗಿದೆ.

ಅನಾದಿತ್ವ ಶ್ರುತಿಗೆ ಆಮುಖ್ಯಾರ್ಥವನ್ನೇ ಮಾಡಬೇಕು ಎಂಬುದು ಶ್ರುತಿಸಿದ್ಧವೂ ಆಗಿದೆ. ಪ್ರಾಣಃ ಶ್ರದ್ಧಾ ಆಕಾಶ ಇತಿ ಭಾಗಶೋ ಹ್ಯುತ್ಪದ್ಯಂತೇ ಎಂಬ ಶ್ರುತಿಯಲ್ಲಿ ಆಕಾಶಕ್ಕೆ ಅನೇಕ ಭಾಗಗಳಿಂದ ಉತ್ಪತ್ತಿ ಕೆಲವು ಭಾಗಗಳಿಂದ ಮಾತ್ರ ಅನುತ್ಪತ್ತಿಯನ್ನು ಹೇಳಿರುವುದರಿಂದ. ಇನ್ನು, ಒಂದೇ ಬ್ರಹ್ಮ ಶಬ್ದಕ್ಕೆ ಬೇರೆ ಬೇರೆ ಕಡೆ ವಿರಿಂಚ, ಪರಬ್ರಹ್ಮ ಎಂದು ಬೇರೆ ಬೇರೆ ಅರ್ಥ ಮೂಡಿದಂತೆ, ಅನುತ್ಪತ್ತಿ ಶಬ್ದಕ್ಕೂ ಪರಬ್ರಹ್ಮನಲ್ಲಿ ಆಗುವಾಗ ಮುಖ್ಯಾರ್ಥವನ್ನೂ ಆಕಾಶದಲ್ಲಿ ಆಮುಖ್ಯಾರ್ಥವನ್ನು ಮಾಡಬೇಕು. ಅದಕ್ಕೆ ಕಾರಣವೂ ಇದೆ. ಆಕಾಶಕ್ಕೆ ಉತ್ಪತ್ತಿ ಇಲ್ಲ ಎಂದರೆ, ಸ ಇದಂ ಸರ್ವಮಸೃಜತ ಎಂಬ ಪ್ರತಿಜ್ಞೆಗೆ ವಿರೋಧ ಉಂಟಾಗುತ್ತದೆ. ಜೊತೆಗೆ ಆತ್ಮಾ ವಾ ಇದಮೇಕ ಏವ ಅಗ್ರ ಆಸೀತ್ ಇತ್ಯಾದಿ ಅನೇಕ ಉತ್ಪತ್ತಿ ಶ್ರುತಿವಿರೋಧವೂ ಬರುತ್ತದೆ. ಇದೇ ಕಾರಣ.

ಈ ಸೂತ್ರದಲ್ಲಿ ಆಕಾಶಕ್ಕೆ ಪರಾಧೀನ ವಿಶೇಷಾವಾಪ್ತಿ ಎಂಬ ಉತ್ಪತ್ತಿ ಇದೆ ಎಂದು ಹೇಳಿದ್ದರಿಂದಲೇ ಪ್ರಕೃತಿ, ಜೀವಚೈತನ್ಯ, ಕಾಲ, ವೇದ, ಮಹತ್ತತ್ತ್ವ ಅಹಂಕಾರತತ್ತ್ವ, ಮನಸ್ಸು, ಬುದ್ಧಿ ಇವುಗಳಿಗೆ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿಯನ್ನು ಹೇಳಿದಂತಾಯಿತು ಎಂದು ತಿಳಿಯಬೇಕು.

**ಅಧಿಕರಣ ಫಲ** :- ಆಕಾಶಕ್ಕೆ ಉತ್ಪತ್ತಿಯಿಲ್ಲ ಎಂದಾದರೆ ವಿಷ್ಣುವು ಸಕಲಜಗತ್ಕರ್ತಾ ಆಗಲು ಸಾಧ್ಯವಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನ, ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ ॥ ೨-೩-೨

ಆಕಾಶಾದ್ವಾಯುಃ ಎಂಬುದಾಗಿ ಶ್ರುತಿಯಿರುವುದರಿಂದ ಅದೇ ಕ್ರಮದಲ್ಲಿ ಮೊದಲು ಆಕಾಶದ ವಿಚಾರವನ್ನು ಮಾಡಿ ಈಗ ವಾಯುವಿನ ವಿಚಾರ ಮಾಡಲಾಗಿತ್ತಿದೆ. ಹೀಗೆ ಈ ಅಧಿಕರಣದಲ್ಲಿ ಆನಂತರ್ಯ ಎಂಬ ಸಂಗತಿ-ಯಿದೆ. ಅಥವಾ ಹಿಂದಿನ ಅಧಿಕರಣದ ಸಿದ್ಧಂತ ನ್ಯಾಯವನ್ನೇ ಇಲ್ಲಿ ಅತಿದೇಶ ಮಾಡುತ್ತಿರುವುದರಿಂದ ಆತಿದೇಶಿಕೀ ಎಂಬ ಸಂಗತಿಯಿದೆ ಎಂದು ತಿಳಿಯಬೇಕು.

ವಾಯು ಶಬ್ದಕ್ಕೆ ಭೂತವಾಯು, ಅದರ ಮುಖ್ಯಾಭಿಮಾನಿ, ಅಮುಖ್ಯಾ-ಭಿಮಾನಿ ಎಂದು ಇಷ್ಟು ಅರ್ಥ. ಮುಖ್ಯಾಭಿಮಾನಿ ವಾಯುವಿನ ವಿಷಯದಲ್ಲೇ ವಿವಾದವಿರುವುದರಿಂದ ಇಲ್ಲಿ ವಾಯು ಎಂದರೆ ಮುಖ್ಯಪ್ರಾಣನೇ.

ಮುಖ್ಯವಾಯುವಿಗೆ, ಈ ಪ್ರಕರಣದಲ್ಲಿ ಹೇಳಲ್ಪಟ್ಟ ಪರಾಧೀನ ವಿಶೇಷಾವಾಪ್ತಿ ಎಂಬ ಉತ್ಪತ್ತಿ ಇದೆಯೇ ಇಲ್ಲವೋ ಎಂಬುದೇ ಸಂದೇಹ. ಉತ್ಪತ್ತಿಯಿಲ್ಲ ಎಂದೇ **ಪೂರ್ವಪಕ್ಷ** ಏಕೆಂದರೆ,

'ತೇಜೋಬನ್ನಾನ್ಯಾಕಾಶ ಇತಿ ತಾನ್ಯನಿತ್ಯಾನಿ ವಾಯುರ್ವಾವ ನಿತ್ಯಃ' ಎಂದು ವಾಯುವಿಗೆ ನಿತ್ಯತ್ವವನ್ನು ಹೇಳುವ ಶ್ರುತಿಯಿರುವುದರಿಂದ.

**ಪ್ರಶ್ನೆ** :- ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳುವ ಶ್ರುತಿಗೆ ಹಿಂದೆ ಅಮುಖ್ಯಾರ್ಥವನ್ನು ಮಾಡಿದಂತೆ ವಾಯುವಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗೂ ಗೌಣಾರ್ಥವನ್ನು ಮಾಡಬೇಕು. ಆದ್ದರಿಂದ ಈ ಶಂಕೆಗೆ ಅವಕಾಶವೇ ಇಲ್ಲವಲ್ಲಾ?

**ಪರಿಹಾರ** :- ಹಾಗೆ ಹೇಳಲು ಸಾಧ್ಯವಿಲ್ಲ ಒಂದು ವೇಳೆ ಆಕಾಶದಂತೆ ವಾಯುವಿಗೂ ಉತ್ಪತ್ತಿ ಇರುವುದಾದರೆ ಶ್ರುತಿಯಲ್ಲಿ ಆಕಾಶ ತೇಜಸ್ಸು, ಅಪ್,

ಅನ್ನ ಇವುಗಳಿಗೆ ಅನಿತ್ಯತ್ವವನ್ನು ಹೇಳಿ ವಾಯುವಿಗೆ ಮಾತ್ರ ನಿತ್ಯತ್ವವನ್ನು ಹೇಳಿದ್ದು ಕೂಡುವುದಿಲ್ಲ. ಹಾಗಾಗಿ ವಾಯುವಿಗೆ ಉತ್ಪತ್ತಿಯಿಲ್ಲ ಎಂದೇ ಹೇಳಬೇಕು.

**ಪ್ರಶ್ನೆ** :- ಶ್ರುತಿಯಲ್ಲಿ ಆಕಾಶಾದಿ ಶಬ್ದಗಳಿಂದ ಭೂತಗಳನ್ನೇ ಇಟ್ಟುಕೊಳ್ಳ-ಬೇಕು. ಭೂತಾಕಾಶಾದಿಗಳಿಗೆ ಅನಿತ್ಯತ್ವವನ್ನು ಹೇಳಿ ವಾಯುವಿಗೆ ನಿತ್ಯತ್ವವನ್ನು ಹೇಳಿದ್ದಾರೆ ಎಂದರೆ ಮುಖ್ಯವಾಯುವಿಗೆ ಸ್ವರೂಪನಿತ್ಯತ್ವವನ್ನು ಹೇಳಿದ್ದಾರೆ ಎಂದರ್ಥ. ಆಗ ವಿಶೇಷವಾಗಿ ನಿತ್ಯತ್ವವನ್ನು ಹೇಳಿದ್ದು ಕೂಡುತ್ತದೆ. ಹಾಗಾಗಿ ವಿಶೇಷವಾಗಿ ನಿತ್ಯತ್ವವನ್ನು ಹೇಳಿದ್ದರಿಂದ ವಾಯುವಿಗೆ ಉತ್ಪತ್ತಿಯಿಲ್ಲ ಎಂದು ಹೇಳಿದ್ದು ತಪ್ಪ?

**ಪರಿಹಾರ**:- ಶ್ರುತಿಯಲ್ಲಿ ಆಕಾಶಾದಿ ಶಬ್ದಗಳಿಂದ ಭೂತಾಕಾಶಾದಿಗಳನ್ನೇ ಗ್ರಹಿಸಲಾಗಿದೆ ಎಂದು ಹೇಳಲು ಯಾವುದೇ ಕಾರಣವಿಲ್ಲ ಹಾಗಾಗಿ ಆಕಾಶಾದಿ ಶಬ್ದಗಳಿಂದ ಆಭಿಮಾನಿದೇವತೆಗಳನ್ನು ಇಟ್ಟುಕೊಂಡಾಗ ಅವರಿಗೆ ಅನಿತ್ಯತ್ವ-ವನ್ನು ಹೇಳಿ ವಾಯುವಿಗೆ ಮಾತ್ರ ನಿತ್ಯತ್ವವನ್ನು ಹೇಳಿದಾಗ ವಾಯುವಿಗೆ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿಯು ಇಲ್ಲ ಎಂದೇ ಸಿದ್ಧವಾಗುವುದು.

'ತೇಜೋಬನ್ನಾನ್ಯಾಕಾಶ ಇತಿ ತಾನ್ಯಚೇತನಾನಿ ವಾಯುರ್ವಾವ ಚೇತನಃ' ಎಂಬ ಶ್ರುತಿಯಲ್ಲಿ ವಾಯುವಿಗೆ ವಿಶೇಷವಾಗಿ ಚೇತನತ್ವವನ್ನು ಹೇಳಲಾಗಿದೆ. ಚೇತನತ್ವ ಎಂಬುದು ಎಲ್ಲಾ ಜೀವರಲ್ಲೂ ಸಾಧಾರಣವಾಗಿ ಇದೆ. ಎಲ್ಲ ಚೇತನರು ಸ್ವರೂಪತಃ ನಿತ್ಯರೇ. ಹೀಗೆ ಎಲ್ಲಾ ಜೀವರಲ್ಲೂ ಇರುವ ಸ್ವರೂಪ-ನಿತ್ಯತ್ವ ಎಂಬ ಚೇತನತ್ವವನ್ನೇ ವಾಯುವಿಗೆ ಹೇಳಿದರೆ ವಿಶೇಷವಾಗಿ ಚೇತನತ್ವ-ವನ್ನು ಹೇಳಿದ್ದು ಯುಕ್ತವಾಗುವುದಿಲ್ಲ. ಹಾಗಾಗಿ ವಿಶೇಷವಾದ ಚೇತನತ್ವವನ್ನೇ ಹೇಳಬೇಕು. ಅದೇನೆಂದರೆ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿಯೂ ಇಲ್ಲದಿರುವುದೇ ಆಗಿದೆ.

ಕುವಿದಙ್ಗ ಎಂಬ ಮಂತ್ರದಲ್ಲಿ ಮುಖ್ಯವಾಯುವಿಗೆ ಸರ್ವದೇವೋಪಾಸ್ಯತ್ವ ಹೇಳಲ್ಪಟ್ಟಿದೆ. ಮುಖ್ಯವಾಯುವಿಗೂ ಉತ್ಪತ್ತಿ ಇರುವುದಾದರೆ ಅವನಿಗೆ ಸರ್ವದೇವೋಪಾಸ್ಯತ್ವ ಕೂಡುವುದಿಲ್ಲ.

ನೋದಯೋ ನ ನಿಮ್ಲೋಚಃ ಎಂಬ ಶ್ರುತಿಯಲ್ಲಿ ವಾಯುವಿಗೆ ಹುಟ್ಟು-ಸಾವುಗಳಿಲ್ಲ ಎಂದು ಹೇಳಲಾಗಿದೆ.

ವಾಯುವು ಪರಮನಿತ್ಯ, ಪರಮಚೇತನನಾದ್ದರಿಂದ ಅವನಿಗೂ ಉತ್ಪತ್ತಿ-ಯಿಲ್ಲ. ಈಶ್ವರನಂತೆ ಎಂಬ ಅನುಮಾನವೂ ಇದೆ.

ಹೀಗೆ ನಿತ್ಯತ್ವದ ವ್ಯಾಪ್ತಿಯುಳ್ಳ ಅನೇಕ ಹೇತುಗಳಿದ್ದರೂ ನಿತ್ಯತ್ವವನ್ನು ಒಪ್ಪದಿದ್ದರೆ, ಉತ್ಪತ್ತಿಯನ್ನು ಹೇಳಿದರೆ ಆಗ ಅನುಭವವಿರೋಧವೂ ಬರುತ್ತದೆ.

**ಸಿದ್ಧಾಂತ** :- ಮುಖ್ಯವಾಯುವಿಗೆ ಉತ್ಪತ್ತಿಯಿದೆ.

ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿ ವಾಯುವಿಗೆ ಇದೆ. ದೇಹ-ಸಂಬಂಧವೇ ಪರಾಧೀನವಿಶೇಷಾವಾಪ್ತಿ. ಇದು ಪ್ರಾಣಾದ್ವಾಯುರಜಾಯತ ಎಂಬ ಶ್ರುತಿಯಿಂದ ಸಿದ್ಧವಾಗಿದೆ

ಮುಖ್ಯಪ್ರಾಣನೂ ಅಲ್ಪಶಕ್ತಿಯುಳ್ಳವನಾದ್ದರಿಂದ ಉತ್ಪತ್ತಿಯುಳ್ಳವನೇ ಎಂಬ ಯುಕ್ತಿಯಿಂದಲೂ ಉತ್ಪತ್ತಿ ಸಿದ್ಧವಾಗುವುದು.

ಪರಾಧೀನವಿಶೇಷಾವಾಪ್ತಿ ರೂಪವಾದ ಜನ್ಮವಿದೆ ಎಂಬುದು ಶ್ರುತಿಸಿದ್ಧವೂ ಆಗಿದೆ.

ಈಶ್ವರನಂತೆ ಮುಖ್ಯಪ್ರಾಣನಿಗೂ ಪರಾಧೀನವಿಶೇಷಾವಾಪ್ತಿಯೂ ಇಲ್ಲ ಎನ್ನುವುದಾದರೆ ಇಬ್ಬರೂ ಸ್ವತಂತ್ರರು ಎಂದು ಒಪ್ಪಬೇಕು. ಅದು ವಿರುದ್ಧ. ವಾಯುವಿಗೆ ಉತ್ಪತ್ತಿಯನ್ನು ಒಪ್ಪಿದರೆ ನಿತ್ಯತ್ವವನ್ನು ಹೇಳುವ ಶ್ರುತಿಯ ವಿರೋಧ ಬರುವುದಿಲ್ಲವೇ? ಎಂದರೆ ಇಲ್ಲ ಮುಖ್ಯವಾಯುವಿನ ಸ್ವರೂಪಾರಿಕ್ತವಾದ ಜ್ಞಾನವೂ ನಿತ್ಯ ಎಂಬ ಅಭಿಪ್ರಾಯದಿಂದ ಶ್ರುತಿಯು ವಾಯುವಿಗೆ ನಿತ್ಯತ್ವವನ್ನು ಹೇಳುತ್ತಿದೆ ಎಂದು ಅರ್ಥಮಾಡಬೇಕು.

**ಅಧಿಕರಣಫಲ** :- ಮುಖ್ಯಪ್ರಾಣನಿಗೆ ಉತ್ಪತ್ತಿಯಿಲ್ಲ ಎಂದಾದರೆ ವಿಷ್ಣುವಿಗೆ ಸಕಲಜಗತ್ಕರ್ತೃತ್ವ ಕೂಡುವುದಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನ. ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಅಸಂಭವಸ್ತು ಸತೋನುಪಪತ್ತೇಃ ಓಂ ॥ ೨-೩-೩

ಉತ್ಪತ್ತಿ ಸಂಭಾವನೆಗಳೇ ಇಲ್ಲದಿರುವ ಆಕಾಶಾದಿಗಳಿಗೆ ಉತ್ಪತ್ತಿಯನ್ನು ಹೇಳಿದಂತೆ ಈಶ್ವರನಿಗೂ ಉತ್ಪತ್ತಿಯನ್ನು ಹೇಳಬಹುದು ಎಂಬ ಶಂಕೆ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೂ ಹಿಂದಿನ ಅಧಿಕರಣಗಳಿಗೂ ಸಂಬಂಧವಿದೆ ಎಂದು ತಿಳಿಯಬೇಕು.

ಸರ್ವಕರ್ತಾ ಎಂದು ಹೇಳಲ್ಪಟ್ಟ ವಿಷ್ಣುವಿಗೆ ಜನ್ಮವಿದೆಯೋ ಇಲ್ಲವೋ ಎಂಬುದೇ ಸಂದೇಹ. ವಿಷ್ಣುವಿಗೂ ಜನ್ಮವಿದೆ ಎಂಬುದು ಪೂರ್ವಪಕ್ಷ ಏಕೆಂದರೆ, ಅಸತಃ ಸದಜಾಯತ ಎಂಬಲ್ಲಿ ಅಸತ್ತಿನಿಂದ ಸತ್ ಶಬ್ದವಾಚ್ಯನಾದ ಈಶ್ವರನಿಗೆ ಜನ್ಮವು ಹೇಳಲ್ಪಟ್ಟಿದೆ.

'ನ ಜಾಯತೇ ಮ್ರಿಯತೇ', ಇತ್ಯಾದಿ ಅನಾದಿತ್ವವನ್ನು ಹೇಳುವ ಶ್ರುತಿವಿರೋಧ ಬರುವುದಿಲ್ಲವೇ ಎಂದರೆ, ಇಲ್ಲ. ಈ ಅನಾದಿತ್ವವನ್ನು ಹೇಳುವ ಶ್ರುತಿಗಳೆಲ್ಲಾ ಸ್ವರೂಪಾನಾದಿತ್ವವನ್ನು ಹೇಳುತ್ತಿವೆ. ಉತ್ಪತ್ತಿಯನ್ನು ಹೇಳುವ ಶ್ರುತಿಗಳೆಲ್ಲಾ ಈಶ್ವರನಿಗೆ ಪರಾಧೀನವಿಶೇಷಾವಾಪ್ತಿ ರೂಪವಾದ ಉತ್ಪತ್ತಿಯನ್ನು ಹೇಳುತ್ತಿದೆ ಎಂದು ಹೀಗೆ ವ್ಯವಸ್ಥೆ ಮಾಡುತ್ತೇವೆ. ಆಗ ಯಾವುದೇ ವಿರೋಧವಿಲ್ಲ. ಈಶ್ವರನು ದೇಹತಃ ಅನಾದಿಯಾದ್ದರಿಂದ ಅವನಿಗೆ ಪರಾ-ಧೀನವಿಶೇಷಾವಾಪ್ತಿಯನ್ನು ಹೇಗೆ ಹೇಳುವುದು ಎಂದರೆ ದೇಹತಃ ಅನಾದಿ-ಯಾದ್ದರಿಂದ ಈಶ್ವರನಿಗೆ ಪರಾಧೀನವಿಶೇಷಾವಾಪ್ತಿಯನ್ನು ಒಪ್ಪದೇ ಹೋದರೆ ಚಿತ್ರಪ್ರಕೃತಿಗೂ ಪರಾಧಿನವಿಶೇಷಾವಾಪ್ತಿಯನ್ನು ಒಪ್ಪಬಾರದು. ಚಿತ್ ಪ್ರಕೃತಿಯೂ ದೇಹತಃ ಅನಾದಿಯೇ ದೇಹತಃ ಅನಾದಿಯಾದರೂ ಹಿಂದೆ ವಿಯದಧಿಕರಣದಲ್ಲಿ ಚಿತ್‌ಪ್ರಕೃತಿಗೆ ಪರಾಧಿನವಿಶೇಷಾವಾಪ್ತಿಯನ್ನು ಒಪ್ಪಿದಂತೆ ಈಶ್ವರನಿಗೂ ಒಪ್ಪಬೇಕು.

**ಸಿದ್ಧಾಂತ:-** ಈಶ್ವರನಿಗೆ ಪರಾಧಿನವಿಶೇಷಾವಾಪ್ತಿ ಎಂಬ ಉತ್ಪತ್ತಿಯು ಇಲ್ಲ ಏಕೆಂದರೆ,

ದೇಹತಃ ಅನಾದಿತ್ವಾಂಶದಲ್ಲಿ ಚಿತ್ ಪ್ರಕೃತಿಗೂ ಈಶ್ವರನಿಗೂ ಸ್ವಾಮ್ಯವಿದ್ದರೂ ಈಶ್ವರ ಸ್ವತಂತ್ರ, ಚಿತ್ ಪ್ರಕೃತಿ ಪರತಂತ್ರ ಹಾಗಾಗಿ ಚಿತ್ ಪ್ರಕೃತಿಗೆ ಪರಾಧೀನವಿಶೇಷಾವಾಪ್ತಿ ಒಪ್ಪಿದರೆ ಈಶ್ವರನಿಗೂ ಒಪ್ಪಬೇಕು ಎಂಬುದು ತಪ್ಪು.

ಇನ್ನು ಈಶ್ವರನು ಅಸತ್ತಿನಿಂದ ಹುಟ್ಟಿದ ಎಂಬುದು ಸರಿಯಲ್ಲ. ಅಸತ್ತಿಗೆ ಕಾರಣತ್ವವೇ ಕೂಡುವುದಿಲ್ಲ.

ಅಸತಃ ಸದಜಾಯತ ಎಂಬಲ್ಲಿ ಅಸತ್ ಶಬ್ದಕ್ಕೆ ಬ್ರಹ್ಮ ಎಂದರ್ಥ. ಸತ್ ಶಬ್ದಕ್ಕೆ ಪ್ರಾಣ ಎಂದರ್ಥ. ಇದು ಬ್ರಹ್ಮ ವಾ ಅಸತ್ ಸದ್ವಾವ ಪ್ರಾಣಃ ಎಂಬುದರಿಂದ ತಿಳಿಯುತ್ತದೆ. ಹೀಗೆ ಆ ಶ್ರುತಿಯು ವಾಯುವು ಈಶ್ವರನಿಂದ ಹುಟ್ಟಿದ ಎಂದು ಹೇಳುತ್ತಿದೆ. ಆದ್ದರಿಂದ ಈಶ್ವರ ಜನ್ಮ ಸಿದ್ಧವಾಗುವುದಿಲ್ಲ.

**ಅಧಿಕರಣ ಫಲ** :- ವಿಷ್ಣುವಿಗೇ ಉತ್ಪತ್ತಿ ಇರುವುದಾದರೆ ಅವನು ಸಕಲಜಗತ್ಕರ್ತಾ ಆಗುವುದು ಹೇಗೆ ಎಂಬ ಆಕ್ಷೇಪ ಹಾಗು ಅದರ ಸಮಾಧಾನ, ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ತೇಜೋತಸ್ತಥಾ ಹ್ಯಾಹ ಓಂ ॥ ೨-೩-೪

ಹಿಂದಿನ ಅಧಿಕರಣಗಳಿಂದ, ಈಶ್ವರನಿಗೆ ಅಜನ್ಮ ಅನೀಶರಿಗೆ ಜನ್ಮ ಸಿದ್ಧವಾಯಿತು.

'ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ತೇಜಸ್ಸು ಮೊದಲಾದವುಗಳೂ ಕೂಡ ಈಶ್ವರನಿಂದಲೇ ಹುಟ್ಟಿದ್ದು ಎಂದೂ ಸಿದ್ಧವಾಗಿದೆ. ಈ ಅಧಿಕರಣದಲ್ಲಿ ಈ ತೇಜಸ್ಸು ಮೊದಲಾದವುಗಳಿಗೆ ಈಶ್ವರನಲ್ಲದೇ ಬೇರೆಯವರಿಂದ ಜನ್ಮವಿಲ್ಲ ಎಂದು ಹೇಳಲಾಗುತ್ತಿದೆ. ಹೀಗೆ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯನ್ನು ತಿಳಿಯಬೇಕು.

ತೇಜೋದೇವತೆ ಹಾಗು ತೇಜೋಭೂತ ಇದು ಈಶ್ವರನಿಂದ ಹುಟ್ಟುವಂತೆ ವಾಯುದೇವತೆ ಹಾಗೂ ವಾಯುಭೂತ ಇದರಿಂದಲೂ ಹುಟ್ಟುತ್ತದೋ

ಇಲ್ಲವೋ ಎಂಬುದೇ ಸಂದೇಹ. 'ವಾಯೋರಗ್ನಿಃ' ಎಂಬ ಶ್ರುತಿ ಇರುವುದರಿಂದ ವಾಯುವಿನಿಂದಲೂ ತೇಜಸ್ಸು ಹುಟ್ಟುತ್ತದೆ ಎಂದು ಪೂರ್ವಪಕ್ಷ.

ಪ್ರಶ್ನೆ:- 'ವಾಯೋರಗ್ನಿಃ' ಎಂಬಲ್ಲಿ ತೇಜಸ್ಸು ವಾಯುವಿನಿಂದ ಹುಟ್ಟುತ್ತದೆ ಎಂದು ಹೇಳುವುದು ವಾಯುವು ತೇಜಸ್ಸಿನ ಜನ್ಮಕ್ಕೆ ದ್ವಾರ ಎಂಬರ್ಥದಲ್ಲಿ, ಮುಖ್ಯ ಜನಕ ಈಶ್ವರನೇ, ಹೀಗೇಕೆ ಹೇಳಬಾರದು?

**ಪರಿಹಾರ** :- ಈಶ್ವರನಿಗೆ ವಾಯುವನ್ನು ದ್ವಾರವಾಗಿ ಮಾಡಿಕೊಳ್ಳದೇ ತೇಜಸ್ಸನ್ನು ಸೃಷ್ಟಿಮಾಡುವ ಶಕ್ತಿ ಇದೆಯೋ ಇಲ್ಲವೋ? ಇದೆ ಎಂದರೆ ವಾಯುವನ್ನು ದ್ವಾರವಾಗಿ ಮಾಡಿಕೊಂಡದ್ದು ವ್ಯರ್ಥ. ಇಲ್ಲ ಎಂದರೆ ವಾಯುವು ತೇಜಸ್ಸಿನ ಜನ್ಮಕ್ಕೆ ಸ್ವತಂತ್ರ ಕಾರಣ ಎಂದು ಸಿದ್ಧವಾಯಿತು. 'ತತ್ತೇಜೋಸೃಜತ' ಎಂಬ ಶ್ರುತಿ ವಿರೋಧ ಬರುವುದಿಲ್ಲವೇ? ಏಕೆಂದರೆ ಈ ಶ್ರುತಿಯಲ್ಲಿ ಈಶ್ವರನು ತೇಜಸ್ಸಿನ ಜನ್ಮಕ್ಕೆ ಕಾರಣ ಎಂದು ಹೇಳಿದೆ ಎಂದರೆ, ಇಲ್ಲ, ನಾವು ಈಶ್ವರ ವಾಯು ಇಬ್ಬರಿಂದಲೂ ತೇಜಸ್ಸು ಹುಟ್ಟಿದೆ ಎಂದು ಹೇಳುತ್ತಿರುವುದರಿಂದ ಈಶ್ವರಜತ್ವವನ್ನು ಒಪ್ಪಿರುವುದರಿಂದ ಈ ಶ್ರುತಿಯವಿರೋಧವಿಲ್ಲ.

ತತ್ತೇಜೋಸೃಜತ ಎಂಬ ಶ್ರುತಿಯು ತೇಜಸ್ಸು, ಕೇವಲ ಈಶ್ವರನಿಂದಲೇ ಹುಟ್ಟಿದೆ ಎಂದು ಹೇಳುತ್ತದೆ ಎಂಬ ಅಭಿಪ್ರಾಯ ಸರಿಯಲ್ಲ. ಏಕೆಂದರೆ ತತ್ತೇಜೋಸೃಜತ ಎಂಬ ಶ್ರುತಿಯು ಉಭಯಜತ್ವಪರವಾಗಿ ಸಾವಕಾಶವಾಗಿದೆ. ಆದರೆ ವಾಯೋರಗ್ನಿ ಎಂಬ ಶ್ರುತಿ ನಿರವಕಾಶವಾಗಿದೆ. ನಿರವಕಾಶವಾದ ಈ ಶ್ರುತಿಯಿಂದ ತತ್ತೇಜೋಸೃಜತ ಎಂಬ ಶ್ರುತಿಗೆ (ಬ್ರಹ್ಮ ಮಾತ್ರ ಕಾರಣಪರ ಎಂದಾದರೆ) ಅಪ್ರಾಮಾಣ್ಯ ಬಂದೊದಗುತ್ತದೆ.

**ಸಿದ್ಧಾಂತ** :- ಈಶ್ವರನೇ ಸ್ವತಂತ್ರವಾಗಿ ತೇಜಸ್ಸನ್ನು ಹುಟ್ಟಿಸಿದ್ದಾನೆ. ತತ್ತೇಜೋಸೃಜತ ಎಂಬ ಶ್ರುತಿ ಹೀಗೇ ಹೇಳುತ್ತಿರುವುದರಿಂದ 'ತತ್ತೇಜೋ-ಸೃಜತ' ಎಂಬ ಶ್ರುತಿಯು ಬ್ರಹ್ಮಮಾತ್ರಕಾರಣಪರ ಎಂದರೆ ವಾಯೋರಗ್ನಿಃ ಎಂಬ ಶ್ರುತಿಯ ವಿರೋಧ ಬರುವುದಿಲ್ಲವೇ? ಎಂದರೆ, ಇಲ್ಲ. ವಾಯೋರಗ್ನಿಃ ಎಂಬ ಶ್ರುತಿಗೆ ವಾಯುವು ತೇಜಸ್ಸಿನ ಸೃಷ್ಟಿಯಲ್ಲಿ ದ್ವಾರ ಎಂದಷ್ಟೇ ಅರ್ಥ ಹಾಗಾಗಿ ವಿರೋಧವಿಲ್ಲ. ವಾಯುವು ದ್ವಾರಮಾತ್ರ ಎಂದರೆ ಹಿಂದೆ ಹೇಳಿದ

ವಿಕಲ್ಪಾಸಹತ್ವ ಎಂಬ ದೋಷ ಬರುವುದಿಲ್ಲವೇ ಎಂದರೆ, ಇಲ್ಲ. ಈಶ್ವರನಿಗೆ ಯಾವುದನ್ನೂ ಅಪೇಕ್ಷಿಸದೇ ಸೃಷ್ಟಿಮಾಡುವ ಶಕ್ತಿಯಿದೆ. ಆದರೆ ಲೀಲೆಯಿಂದ ವಾಯುವನ್ನು ದ್ವಾರವಾಗಿ ಮಾಡಿಕೊಂಡಿದ್ದಾನೆ ಎಂದು ಅಭಿಪ್ರಾಯ. ಹಾಗಾಗಿ ಈಶ್ವರನೇ ಸ್ವತಂತ್ರ ಕಾರಣ ವಾಯುಭೂತ, ವಾಯುದೇವತೆ ಇವೆರಡು ತೇಜೋಭೂತ ತೇಜೋದೇವತೆ ಇವರ ಜನ್ಮದಲ್ಲಿ ದ್ವಾರಮಾತ್ರ ಎಂದು ಹೇಳಬೇಕು.

ಕಾರಣತ್ವೇನ ಚಾಕಾಶಾದಿಷು — ಎಂಬ ಅಧಿಕರಣದಲ್ಲಿ ವಾಯುಶಬ್ದವು ಮುಖ್ಯವಾಗಿ ಈಶಪರ ಎಂದು ಹೇಳಿ ವಾಯೋರಗ್ನಿಃ ಎಂಬುದಕ್ಕೆ ವಾಯು-ಶಬ್ದವಾಚ್ಯನಾದ ಬ್ರಹ್ಮನಿಂದಲೇ ತೇಜೋಭೂತ ಹಾಗು ತದ್ದೇವತೆ ಹುಟ್ಟಿದೆ ಎಂದರ್ಥ ಮಾಡಲಾಗಿದೆ. ಆದರೂ ಈ ಅಧಿಕರಣದಲ್ಲಿ ತೇಜೋಭೂತ ಹಾಗು ತದ್ದೇವತೆ, ಬ್ರಹ್ಮನಿಂದ ಹುಟ್ಟಿದಂತೆ ವಾಯುಭೂತ ಹಾಗು ತದ್ದೇವತೆ-ಯಿಂದಲೂ ಹುಟ್ಟಿದೆ ಎಂದೇಕೆ ಹೇಳಬಾರದು ಎಂಬ ಶಂಕೆಗೆ ಉತ್ತರಕೊಡ-ಲಾಗಿದೆ, ಹೀಗೆ ಈ ಎರಡು ಅಧಿಕರಣಗಳಿಗೆ ಭೇದವಿರುವುದರಿಂದ ಗತಾರ್ಥತ್ವ ಎಂಬ ದೋಷವಿಲ್ಲ.

ಹೇಗಿದ್ದರೂ ಈ ಅಧಿಕರಣಕ್ಕೆ ತದನನ್ಯತ್ವಾಧಿಕರಣದಿಂದ ಗತಾರ್ಥತಾ ಬಂದೆಬರುತ್ತದೆ. ಏಕೆಂದರೆ, ತದನನ್ಯತ್ವಾಧಿಕಾರಣದಲ್ಲೂ ಈಶ್ವರನು ಇತರ ಸ್ವತಂತ್ರ ಸಾಧನಗಳನ್ನು ಅಪೇಕ್ಷಿಸಿ ಸೃಷ್ಟಿಮಾಡುತ್ತಾನೆ ಎಂಬ ಶಂಕೆಯನ್ನು ನಿರಾಕರಿಸಲಾಗಿತ್ತು. ಇಲ್ಲಿಯೂ ಅದೇ ಶಂಕೆಯನ್ನು ಮಾಡಿಕೊಂಡು ನಿರಾಕರಿಸಲಾಗಿದೆ ಎಂದರೆ, ಇಲ್ಲ. ತದನನ್ಯತ್ವಾಧಿಕರಣದಲ್ಲಿ ಯುಕ್ತಿಪ್ರಾಪ್ತವಾದ ಸಾಧನಾಂತರ ಸ್ವಾತಂತ್ರ್ಯವನ್ನು ನಿರಾಕರಿಸಲಾಗಿದೆ. ಇಲ್ಲಿ ಶ್ರುತಿಪ್ರಾಪ್ತವಾದ ಸಾಧನಾಂತರ ಸ್ವಾತಂತ್ರ್ಯವನ್ನು ನಿರಾಕರಿಸಲಾಗಿದೆ. ಹಾಗಾಗಿ ಎರಡು ಅಧಿ ಕರಣಗಳಿಗೆ ವ್ಯತ್ಯಾಸ ಇರುವುದರಿಂದ ಗತಾರ್ಥತಾ ಎಂಬ ದೋಷಕ್ಕೆ ಅವಕಾಶವಿಲ್ಲ.

**ಅಧಿಕರಣ ಫಲ:-** ಈಶ್ವರನೇ ಸ್ವತಂತ್ರವಾಗಿ ಜಗತ್ಕಾರಣ ಎಂಬುದರ ಆಕ್ಷೇಪ ಹಾಗು ಅದರ ಸಮಾಧಾನ ಇದೇ ಈ ಅಧಿಕರಣದ ಪೂರ್ವ ಪಕ್ಷ ಸಿದ್ಧಾಂತ ಫಲ.

## II ಓಂ ಆಪಃ ಓಂ II ೨-೩-೫

ತೇಜಸ್ಸಿನ ಅನಂತರ ಪ್ರಾಪ್ತವಾದದ್ದು (ವಾಯೋರಗ್ನಿಃ ಅಗ್ನೇರಾಪಃ ಎಂಬಲ್ಲಿ) ಅಪ್ (ನೀರು). ಅದರ ಜನಕ ಯಾರು ಎಂದು ವಿಚಾರ-ಮಾಡುತ್ತಿರುವುದರಿಂದ ಈ ಅಧಿಕರಣದಲ್ಲಿ ಆನಂತರ್ಯ ಎಂಬ ಸಂಗತಿ ಇದೆ. ಅಬ್ದೇವತೆ ಹಾಗು ಭೂತ ಇವೆರಡೂ ಸ್ವತಂತ್ರವಾಗಿ ಈಶ್ವರನಿಂದ ಹುಟ್ಟಿದಂತೆ ತೇಜೋದೇವತೆ ಹಾಗು ತೇಜೋಭೂತದಿಂದಲೂ ಸ್ವತಂತ್ರವಾಗಿ ಹುಟ್ಟಿದೆಯೋ ಅಥವಾ ಈಶ್ವರನಿಂದ ಮಾತ್ರ ಹುಟ್ಟಿದೆಯೋ ಎಂಬುದೇ ಸಂದೇಹ. ಅಗ್ನೇರಾಪಃ ಎಂಬ ಶ್ರುತಿ ಇರುವುದರಿಂದ ತೇಜೋಭೂತ ತದ್ದೇವತೆಯಿಂದಲೂ ಹುಟ್ಟಿದೆ ಎಂದು ಪೂರ್ವಪಕ್ಷ. ಸ್ವತಂತ್ರವಾಗಿ ತೇಜೋದೇವತೆ ತೇಜೋಭೂತದಿಂದ ಹುಟ್ಟಿದೆ ಎಂದರೆ 'ಬ್ರಹ್ಮೈವೇದಮಗ್ರ ಆಸೀತ್ ತದಪೋಸೃಜತ' ಎಂಬ ಶ್ರುತಿವಿರೋಧ ಬರುತ್ತದೆ ಎನ್ನಬಾರದು. ಏಕೆಂದರೆ ಅಗ್ನೇರಾಪಃ ಎಂಬ ಶ್ರುತಿ ಪ್ರಬಲ. ಹೇಗೆಂದರೆ, ಲೋಕದಲ್ಲಿಯೂ ಶೆಕೆಯಾದಾಗ ಬೆವರು ಬರುವುದು ಕಂಡಿದೆ. ಹಾಗಾಗಿ ಬೆವರು ಅಪ್ತ್ವವುಳ್ಳದ್ದಾಗಿದೆ ಹಾಗೇ ತೇಜೋಜನ್ಯವೂ ಆಗಿದೆ. ಅದರಂತೆ ಅಪ್‌ನಲ್ಲಿ ಅಪ್‌ತ್ವ ಇರುವುದರಿಂದ ಅದೂ ತೇಜೋಜನ್ಯವಾಗಬೇಕು. ಎಂಬ ಯುಕ್ತಿಯ ಸಹಕಾರ ಶ್ರುತಿಗಿದೆ. ಜೊತೆಗೆ 'ತೇಜಸ ಏವ ತಧ್ಯಾಪೋಜಾಯಂತ' ಎಂಬ ಸ್ಪಷ್ಟ ಶ್ರುತಿಯೂ ಇದೆ. ಹೀಗೆ ಪ್ರಬಲವಾದ ಅಗ್ನೇರಾಪಃ ಎಂಬ ಶ್ರುತಿಯಿಂದ ತದಪೋಸೃಜತ ಎಂಬ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕು.

**ಸಿದ್ಧಾಂತ:-** ತೇಜೋಭೂತ ತದ್ದೇವತೆಯಲ್ಲಿರುವ ಈಶ್ವರನೇ ಸ್ವತಂತ್ರವಾಗಿ ಅಪ್ ಜನಕನಾಗಿದ್ದಾನೆ. ತದಪೋಸೃಜತ ಎಂಬ ಶ್ರುತಿಯಲ್ಲಿ ಹಾಗೇ ಹೇಳಿರುವುದರಿಂದ.

ಹಾಗಾದರೆ ಅಗ್ನೇರಾಪಃ ಎಂಬ ಶ್ರುತಿಗೆ ಏನು ಅರ್ಥ ಎಂದರೆ ಹಿಂದೆ ಹೇಳಿದಂತೆ ಅಗ್ನಿಯಲ್ಲಿ ಇದ್ದುಕೊಂಡು ಅದನ್ನು ದ್ವಾರವಾಗಿ ಮಾಡಿಕೊಂಡು ಅಪ್ ಅನ್ನು ಹುಟ್ಟಿಸುತ್ತಾನೆ ಎಂದರ್ಥ. ಹೀಗೇಕೆ ಅರ್ಥಮಾಡಬೇಕು ಎಂದರೆ, 'ಸ ಇದಂ ಸರ್ವಮಸೃಜತ' 'ಕರ್ತಾ ಸರ್ವಸ್ಯ ವೈ ವಿಷ್ಣುಃ' ಇದೇ ಮೊದಲಾದ ಶ್ರುತಿಸ್ಮೃತಿಗಳು ವಿಷ್ಣುವೇ ಸರ್ವಕರ್ತಾ ಎಂದು ಹೇಳುತ್ತಿವೆ. ಇಲ್ಲಿರುವ ಸರ್ವ

ಶಬ್ದಕ್ಕೆ ಮುಖ್ಯಾರ್ಥವನ್ನೇ ಮಾಡಬೇಕು. ಆದಕ್ಕನುಸಾರವಾಗಿ ವಿಷ್ಣುವೇ ಸ್ವತಂತ್ರವಾಗಿ ಸರ್ವಕರ್ತಾ ಎನ್ನಬೇಕು. ಜೊತೆಗೆ ವಿಷ್ಣುವನ್ನು ಬಿಟ್ಟು ಉಳಿದ-ವರಿಗೆ ಸ್ವತಂತ್ರವಾಗಿ ಸೃಷ್ಟಿಮಾಡುವ ಶಕ್ತಿಯು ಇಲ್ಲ. ಹಾಗಾಗಿ ಹಿಂದೆ ಹೇಳಿದಂತೆ ವಿಷ್ಣುವೇ ಸ್ವತಂತ್ರಕರ್ತಾ ಅಗ್ನ್ಯಾದಿಗಳು ದ್ವಾರಮಾತ್ರ ಎಂಬುದೇ ಯುಕ್ತವಾಗಿದೆ.

## ॥ ಓಂ ಪೃಥಿವ್ಯಧಿಕಾರರೂಪ ಶಬ್ದಾನ್ತರಾದಿಭ್ಯಃ ಓಂ ॥

## ೨-೩-೬

ಹಿಂದಿನ ಅಧಿಕರಣದ ಸಿದ್ಧಾಂತನ್ಯಾಯದಿಂದ ಅಪ್‌ಗೆ ದ್ವಾರತ್ವವೇನೋ ಸಿದ್ಧವಾಯಿತು ಆದರೆ ಅದು ಯಾವುದಕ್ಕೆ ದ್ವಾರ ಎಂಬ ವಿಚಾರವನ್ನು ಈ ಅಧಿಕರಣದಲ್ಲಿ ಮಾಡಲಾಗುತ್ತಿದೆ. ಹೀಗೆ ಹಿಂದಿನ ಅಧಿಕರಣದಿಂದ ಸಂಗತಿಯನ್ನು ತಿಳಿಯಬೇಕು. ಈಶ್ವರನಿಂದಾಗುವ ಅನ್ನಸೃಷ್ಟಿಯಲ್ಲಿ ಅಪ್ ದ್ವಾರವಾಗಿದೆಯೋ ಅಥವಾ ಪೃಥಿವೀಸೃಷ್ಟಿಯಲ್ಲೋ ಎಂಬುದೇ ಸಂದೇಹ. 'ಆಪ ಐಕ್ಷಂತ ತಾ ಅನ್ನಮಸೃಜಂತ' ಎಂಬ ಶ್ರುತಿಯು ಅನ್ನಸೃಷ್ಟಿಯಲ್ಲಿ ಅಪ್ ಗೆ ದ್ವಾರತ್ವವನ್ನು ಹೇಳುತ್ತಿದೆ. 'ಅದ್ಭ್ಯಃ ಪೃಥಿವೀ' ಎಂಬ ಶ್ರುತಿಯು ಪೃಥಿವೀಸೃಷ್ಟಿಯಲ್ಲಿ ಅಪ್ ಗೆ ದ್ವಾರತ್ವವನ್ನು ಹೇಳುತ್ತಿದೆ. ಈ ಎರಡು ಶ್ರುತಿಗಳು ನಿರವಕಾಶವಾಗಿವೆ. ಪರಸ್ಪರವಿರುದ್ಧಾರ್ಥಪ್ರತಿಪಾದಕವಾಗಿವೆ. ಎರಡು ನಿರ-ವಕಾಶವಾದ್ದರಿಂದ ಒಂದರ ಬಾಧ ಇನ್ನೊಂದಕ್ಕೆ ಬಂದು ಎರಡೂ ಅಪ್ರಮಾಣ ಎಂದಾಗಿ ಅಪ್‌ಗೆ ದ್ವಾರತ್ವವೇ ಸಿದ್ಧವಾಗದೇ ಹೋಗಬೇಕು ಎಂಬುದೇ ಪೂರ್ವಪಕ್ಷ.

ಅನ್ನಶ್ರುತಿಗೆ ಪೃಥಿವೀಪರತ್ವವನ್ನು ಹೇಳೋಣ ಎಂದರೆ ಅದು ಸರಿಯಲ್ಲ. ಏಕೆಂದರೆ, 'ಅದ್ಭ್ಯೋ ವಾ ಅನ್ನಮುತ್ಪದ್ಯತೇ ತಾ ಅನ್ನಮಸೃಜಂತ ಅದ್ಭ್ಯ ಏವ ತದನ್ನಾದ್ಯಂ ಜಾಯತೇ' ಮೊದಲಾದ ಅನೇಕ ಶ್ರುತಿಗಳಲ್ಲಿ ಅಪ್ ನಿಂದ ಅನ್ನಸೃಷ್ಟಿ ಹೇಳಲ್ಪಟ್ಟಿದೆ. ಇಲ್ಲೆಲ್ಲಾ ನಾವು ಅನ್ನ ಶಬ್ದಕ್ಕೆ ಯಥಾಶ್ರುತವಾದ ಅರ್ಥವನ್ನೇ ಇಟ್ಟುಕೊಂಡರೆ ಆಗ ಪ್ರಸಿದ್ಧಾರ್ಥಪರಿಗ್ರಹ ಎಂಬ ಗುಣ ಪ್ರಾಪ್ತವಾಗುತ್ತದೆ ಇಲ್ಲದಿದ್ದರೆ ಇಲ್ಲ.

ಇನ್ನು, 'ಯತ್ರ ಕ್ವಚ ವರ್ಷತಿ ತದೇವ ಬೂಯಿಷ್ಠಮನ್ನಂ ಭವತಿ' ಎಂಬಲ್ಲಿ ವರ್ಷಜತ್ವ (ಮಳೆಯಿಂದ ಹುಟ್ಟುವುದು) ಎಂಬ ಲಿಂಗ ಹೇಳಿದೆ. ಹಾಗೇ, 'ಅನ್ನಮಶಿತಂ ತ್ರೇಧಾ ವಧೀಯತೇ' ಎಂಬಲ್ಲಿ ಅದ್ಯತ್ವ (ತಿನ್ನಲ್ಪಡುವುದು) ಎಂಬ ಲಿಂಗ ಉಕ್ತವಾಗಿದೆ. ಇವೆರಡೂ ಅನ್ನಕ್ಕೇ ಇರುವುದು ಪೃಥಿವಿಗಲ್ಲ ಹಾಗಾಗಿ ಅನ್ನಶ್ರುತಿಗೆ ಪೃಥಿವೀಪರವಾದ ಅರ್ಥ ಮಾಡಬಾರದು.

ಹಾಗಾದರೆ ಪೃಥಿವೀ ಶಬ್ದಕ್ಕೆ ಅನ್ನ ಎಂಬ ಅರ್ಥ ಮಾಡಬಹುದಲ್ಲಾ? ಎಂದರೆ ಅದೂ ಸಾಧ್ಯವಿಲ್ಲ. ಏಕೆಂದರೆ ಅದ್ಭ್ಯ ಪೃಥಿವೀ ಎಂಬಲ್ಲಿರುವ ಪೃಥಿವೀ ಶಬ್ದಕ್ಕೆ ಅನ್ನ ಎಂದರ್ಥ ಮಾಡಿದರೆ ಅಪ್‌ನಿಂದ ಅನ್ನ ಹುಟ್ಟಿತು ಎಂದಾಗುತ್ತದೆ.ಆದರೆ 'ಓಷಧೀಭ್ಯೋ ಅನ್ನಂ' ಎಂಬ ಶ್ರುತಿಯು ಅನ್ನವು ಓಷಧಿಗಳಿಂದ ಹುಟ್ಟಿದೆ ಎಂದು ಹೇಳುತ್ತಿದೆ. ಈ ಶ್ರುತಿಯ ವಿರೋಧ ಬರುತ್ತದೆ.

ಹಾಗಾದರೆ ಅಪ್‌ಗೆ ಉಭಯತ್ರದ್ವಾರತ್ವವನ್ನು ಹೇಳೋಣ, ಅಂದರೆ, ಅಪ್ ಇದು ಪೃಥಿವೀಸೃಷ್ಟಿಗೂದ್ವಾರ, ಅನ್ನಸೃಷ್ಟಿಗೂ ದ್ವಾರ ಇದೂ ಸರಿಯಲ್ಲ. ಓಷಧೀಭ್ಯೋ ಅನ್ನಂ ಎಂಬ ಶ್ರುತಿವಿರೋಧ ಬರುವುದರಿಂದ. ಹಾಗಾದರೆ, ಅನ್ನವು ಅಪ್‌ನಿಂದಲೂ ಓಷಧಿಯಿಂದಲೂ ಹುಟ್ಟಿದೆ ಎಂದೇಕೆ ಹೇಳಬಾರದು? ಎಂದರೆ ಆಗ ಬಹುಕಲ್ಪನಾ ಎಂಬ ದೋಷ ಬರುತ್ತದೆ. ಹಾಗಾಗಿ ಅದು ಯುಕ್ತವಲ್ಲ.

ಹಾಗಾದರೆ, ಅನ್ನಸೃಷ್ಟಿಯಲ್ಲಿ ಅಪ್ ಸಾಕ್ಷಾತ್ ಕಾರಣವಲ್ಲ ಪರಂಪರಯಾ ಕಾರಣ ಎಂದು ಹೇಳೋಣ? ಎಂದರೆ ಅದೂ ಸರಿಯಲ್ಲ. ಆಗ ಅಪ್‌ಗೆ ಸಾಕ್ಷಾತ್ ಅನ್ನಕಾರಣತ್ವವನ್ನು ಹೇಳುವ 'ತಾ ಅನ್ನಮಸೃಜಂತ' ಮೊದಲಾದ ಶ್ರುತಿಗಳಿಗೆ ಅಮುಖ್ಯಾರ್ಥವನ್ನು ಮಾಡಬೇಕಾಗುತ್ತದೆ. ಮುಖ್ಯಾರ್ಥವನ್ನು (ಸಾಕ್ಷಾತ್ ಕಾರಣ ಎಂಬ) ಕೈಬಿಡಬೇಕಾಗುತ್ತದೆ. ಆದ್ದರಿಂದ ಹಿಂದೆ ಹೇಳಿದಂತೆ ಎರಡೂ ಶ್ರುತಿಗಳಿಗೆ (ತಾ ಅನ್ನಮಸೃಜಂತ ಹಾಗು ಅದ್ಭ್ಯಃ ಪೃಥಿವೀ) ಅಪ್ರಾಮಾಣ್ಯವನ್ನೇ ಹೇಳಬೇಕು.

**ಸಿದ್ಧಾಂತ** :- ಅಪೌರುಷೇಯವಾದ್ದರಿಂದ ನಿರ್ದೋಷ ಎನಿಸಿಕೊಂಡ ವೇದಕ್ಕೆ, ಎರಡು ಶ್ರುತಿಗಳಿಗೆ ಪರಸ್ಪರ ವಿರೋಧ ಕಂಡಾಗ ಒಂದಕ್ಕೆ

ಅರ್ಥಾಂತರವನ್ನು ಮಾಡಬೇಕು. ಪ್ರಕೃತದಲ್ಲಿ 'ತಾ ಅನ್ನಮಸೃಜಂತ' ಎಂಬಲ್ಲಿರುವ ಅನ್ನ ಶಬ್ದಕ್ಕೆ ಪೃಥಿವೀ ಎಂಬರ್ಥ ಮಾಡಬೇಕು ಏಕೆಂದರೆ, ತಾ ಅನ್ನಮಸೃಜಂತ ಎಂಬ ಶ್ರುತಿಗಿಂತ ಪೂರ್ವದಲ್ಲಿ ತತ್ತೇಜೋಸೃಜತ ತದಪೋ-ಸೃಜತ ಎಂಬ ಶ್ರುತಿಯಿದೆ. ನಂತರದಲ್ಲಿ ತಾಸಾಂ ತ್ರಿವೃತಂ ಎಂಬ ಶ್ರುತಿಯಿದೆ. ಹಾಗಾಗಿ ಇದು ಭೂತಪ್ರಕರಣ ಎಂದು ತಿಳಿಯುತ್ತದೆ. ಆದ್ದರಿಂದ ಇಲ್ಲಿರುವ ಅನ್ನ ಶಬ್ದಕ್ಕೆ ಪೃಥಿವೀಭೂತ ಎಂದು ಅರ್ಥಮಾಡುವುದು ಯುಕ್ತವಾಗಿದೆ.

ಜೊತೆಗೆ, 'ಯ ಕೃಷ್ಣಂ ತದನ್ನಸ್ಯ' ಎಂಬುದಾಗಿ ಕೃಷ್ಣರೂಪ ಶ್ರುತವಾಗಿದೆ. ಇದೂ ಕೂಡ ಪೃಥಿವೀಯದ್ದೇ ಲಿಂಗ. ಏಕೆಂದರೆ, 'ಕೃಷ್ಣೈವ ಪೃಥಿವೀ ಸ್ವತಃ' ಎಂಬ ಸ್ಮತಿಯು ಪ್ರಥಿವಿಯ ಬಣ್ಣ ಕೃಷ್ಣ ಎಂದು ಹೇಳುತ್ತಿದೆ. ಇದಲ್ಲದೇ 'ಆಪಶ್ಚ ಪೃಥಿವೀ ಚಾನ್ನಂ' ಎಂಬ ಶ್ರುತಿಯಲ್ಲಿ ಅನ್ನಶಬ್ದವು ಪೃಥಿವೀ ಎಂಬರ್ಥದಲ್ಲಿ ಪ್ರಯುಕ್ತವೂ ಆಗಿದೆ.

ವರ್ಷಜತ್ವ ಅದ್ಯತ್ವ ಎಂಬ ಲಿಂಗವಿರೋಧವೂ ಇಲ್ಲ. ಏಕೆಂದರೆ, ಯತ್ರಕ್ವಚ ವರ್ಷತಿ ಇತ್ಯಾದಿ ವಾಕ್ಯದಲ್ಲಿರುವ ಅನ್ನ ಶಬ್ದಕ್ಕೂ ಪೃಥಿವೀ ಎಂದೇ ಅರ್ಥ. ಆದರೆ ಮುಖ್ಯಾರ್ಥವನ್ನೇ ಇಟ್ಟುಕೊಂಡರೆ ಇಲ್ಲಿ ಬಾಧವಿರುವುದರಿಂದ ಲಕ್ಷಣಾರ್ಥವನ್ನು ಮಾಡಬೇಕು. ಅಂದರೆ ಪೃಥಿವೀ ಎಂದರೆ ಪಾರ್ಥಿವ ಎಂದರ್ಥ. ಆಗ ವರ್ಷಜತ್ವ ಅದ್ಯತ್ವ ಲಿಂಗದ ವಿರೋಧವಿಲ್ಲ. ಪಾರ್ಥಿವದಲ್ಲಿ ಇವೆರಡೂ ಇರುವುದರಿಂದ.

ತೇಜೋಶಿತಂ ಎಂಬಲ್ಲಿ ಹೇಗೆ ಲಕ್ಷಣಾರ್ಥವನ್ನು ಮಾಡಿದ್ದಾರೆ ತೇಜಸ್ ಎಂದರೆ ತೈಜಸ ಎಂದು. ಹಾಗಾಗಿ ಪೃಥಿವೀಸೃಷ್ಟಿಯಲ್ಲೇ ಅಪ್‌ಗೆ ದ್ವಾರತ್ವ ಸಿದ್ಧವಾಯಿತು.

**ಅಧಿಕರಣ ಫಲ** :- ದ್ವಾರತ್ವವನ್ನು ಹೇಳುವ ಶ್ರುತಿಗಳಿಗೆ ಅಪ್ರಾಮಾಣ್ಯ ಬಂದೊದಗಿದರೆ ಆಗ ಈಶ್ವರನು ವಸ್ತ್ವಂತರದ್ವಾರಾ ಸಾಕ್ಷಾತ್ ಸರ್ವಕಾರಣ-ನಾಗಿದ್ದಾನೆ ಎಂಬುದು ಕೂಡುವುದಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನ ಇದೇ ಈ ಅದಿಕರಣದ ಹಾಗು ಪೂರ್ವಪಕ್ಷ ಸಿದ್ಧಾಂತ ಫಲ.

## ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ಸಃ ಓಂ ॥ ೨-೩-೭

ವಿಷ್ಣುವೇ ಸ್ವತಂತ್ರವಾಗಿ ಸರ್ವಜಗತ್ಕರ್ತಾ ಎಂಬುದಕ್ಕೆ ಅಧಿಭೂತ ಹಾಗು ಅಧಿದೈವ ಜನ್ಮಶ್ರುತಿಗಳಿಂದ ವಿರೋಧ, ಎಂಬ ಶಂಕೆಮಾಡಿಕೊಂಡು ಅದನ್ನು ಹಿಂದಿನ ಅಧಿಕರಣಗಳಲ್ಲಿ ಪರಿಹಾರ ಮಾಡಲಾಗಿದೆ. ಈಗ ಈ ಅಧಿಕರಣ-ದಲ್ಲಿ ಅಧಿಭೂತ ಹಾಗೂ ಅಧಿದೈವ ಲಯ ಶ್ರುತಿಗಳ ವಿರೋಧವು ಪರಿಹರಿಸಲ್ಪಡುತ್ತದೆ. ಹೀಗೆ ಸಂಗತಿಯನ್ನು ತಿಳಿಯಬೇಕು.

ಆಕಾಶವೇ ಮೊದಲಾದ ಅಧಿಭೂತ ಹಾಗು ಅಧಿದೈವಕ್ಕೆ ಜನ್ಮವಿದೆ ಎಂದ ಮೇಲೆ ಲಯವೂ ಸಿದ್ಧವಾಯಿತು. ಈ ಲಯಕರ್ತಾ ಯಾರು? ರುದ್ರನೋ ವಿಷ್ಣುವೋ ಎಂಬುದೇ ಸಂದೇಹ. ರುದ್ರನೇ ಲಯಕರ್ತಾ ಎಂದು ಪೂರ್ವಪಕ್ಷ. ರುದ್ರನೇ ಸಂಹರ್ತಾ ಎಂದು ಸುಪ್ರಸಿದ್ಧನಾದ್ದರಿಂದ 'ರುದ್ರೋ ಮಾ ವಿಶಾಂತಕಃ' ಎಂಬ ಶ್ರುತಿಯು ಅಂತಕ ಎಂಬ ಪದದಿಂದ ರುದ್ರನಿಗೆ ಸಂಹರ್ತೃತ್ವವನ್ನು ಹೇಳುತ್ತಿದೆ.

**ಪ್ರಶ್ನೆ:-** ವಿಷ್ಣುವಿಗೆ ಸಂಹರ್ತೃತ್ವವನ್ನು ಹೇಳುವ 'ಯತ್ಪ್ರಯಂತ್ಯಭಿಸಂ-ವಿಶಂತಿ ಯಮಪ್ಯೇತಿ ಭುವನಂ ಸಾಂಪರಾಯೇ' ಇತ್ಯಾದಿ ಶ್ರುತಿಗಳ ವಿರೋಧ ಬರುವುದಿಲ್ಲವೇ?

**ಪರಿಹಾರ:-** ಇಲ್ಲ, ವಿಷ್ಣುವಿಗೆ ಸಂಹರ್ತೃತ್ವವನ್ನು ಹೇಳುವ ಶ್ರುತಿಗಳಿಗೆ, ವಿಷ್ಣುವು ಸಂಹಾರಕನಲ್ಲ ಎಂದು ಹೇಳುವ ಅನುಮಾನದ ಸಹಾಯವುಳ್ಳ ರುದ್ರನೇ ಸಂಹರ್ತಾ ಎಂದು ಹೇಳುವ ಶ್ರುತಿಯ ವಿರೋಧ ಬರುತ್ತದೆ. ಹಾಗಾಗಿ ಅವುಗಳು ಅಪ್ರಮಾಣ. ವಿಷ್ಣುವು ಸಂಹಾರಕನಲ್ಲಿ ಎಂದು ಹೇಳುವ ಅನುಮಾನ ಯಾವುದೆಂದರೆ, ವಿಷ್ಣುವು ಜನಕನಾದ್ದರಿಂದ, ರಕ್ಷಕನಾದ್ದರಿಂದ ಅವನು ಸಂಹಾರಕನಾಗಲು ಸಾಧ್ಯವಿಲ್ಲ, ತಂದೆ ಮೊದಲಾ-ದವರಂತೆ ಎಂಬುದೇ ಆಗಿದೆ.

**ಪ್ರಶ್ನೆ:-** ರುದ್ರನು, ವಿಷ್ಣುವಿನಿಂದಾಗುವ ಸಂಹಾರಕ್ಕೆ ದ್ವಾರನಾಗಿದ್ದಾನೆ ಎಂದೇಕೆ ಹೇಳಬಾರದು?

**ಪರಿಹಾರ:-** ವಿಷ್ಣುವು ಸಂಹಾರಕನಾಗಲು ಸಾಧ್ಯವೇ ಇಲ್ಲ ಎಂದು ಹೇಳುವ ಯುಕ್ತಿಯ ವಿರೋಧ ಇರುವುದರಿಂದ ವಿಷ್ಣುವಿಗೆ ಸಂಹರ್ತೃತ್ವ ಒಪ್ಪಲು ಸಾಧ್ಯವಿಲ್ಲ. ಆದ್ದರಿಂದಲೇ ರುದ್ರನಿಗೆ ದ್ವಾರತ್ವವೂ ಕೊಡುವುದಿಲ್ಲ.

**ಸಿದ್ಧಾಂತ:-** ವಿಷ್ಣುವೇ ಸರ್ವಲಯಕರ್ತಾ. 'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯು ಅನಾದಿಬಂಧ ಲಯವೇ ವಿಷ್ಣುವಿನ ಅಧೀನ ಎಂದು ಹೇಳುತ್ತಿದೆ. ಹೀಗಿರುವಾಗ ಸಾದಿವಿಶ್ವಲಯ ಅವನ ಅಧೀನ ಎಂದು ಸಿದ್ಧವಾಗೇ ಆಗುತ್ತದೆ. ಇದನ್ನೇ ಕೈಮುತ್ಯನ್ಯಾಯ ಎನ್ನುತ್ತಾರೆ.

ಯಮಪ್ಯೇತಿ ಭುವನಂ ಸಾಂಪರಾಯೇ ಸ ನೋ ಹರಿಃ ಯ ಇದಂ ಸರ್ವಂ ವಿಲಾಪಯತಿ ಸ ಹರಿಃ ಸ್ರಷ್ಟಾ ಪಾತಾ ಚ ಸಂಹರ್ತಾ ಸ ಏಕೋ ಹರಿಃ' ಇತ್ಯಾದಿ ಶ್ರುತಿಸ್ಮೃತಿಗಳು ಸ್ಪಷ್ಟವಾಗಿ ವಿಷ್ಣುವಿಗೆ ಸಂಹರ್ತೃತ್ವವನ್ನು ಹೇಳುತ್ತಿವೆ.

ರುದ್ರನಿಗೆ ಸಂಹಾರವನ್ನು ಹೇಳುವ ಶ್ರುತಿಯ ವಿರೋಧವಿಲ್ಲ 'ನಿಮಿತ್ತ-ಮಾತ್ರಮೀಶಸ್ಯ' ಎಂಬ ಸ್ಮೃತಿಯ ಅನುಸಾರ ಕೆಲವು ಸಂಹಾರದಲ್ಲಿ ರುದ್ರನು ದ್ವಾರನಾಗಿದ್ದಾನೆ ಎಂದು ಹೇಳುವುದೇ 'ರುದ್ರೋಮಾವಿಶಾಂತಕಃ' ಮೊದಲಾದ ಶ್ರುತಿಗಳ ತಾತ್ಪರ್ಯ. ಆದ್ದರಿಂದ ಆ ಶ್ರುತಿಗಳೆಲ್ಲಾ ಸಾವಕಾಶವಾಗಿವೆ.

ಯುಕ್ತಿಯು ಅಪ್ರಯೋಜಕವಾಗಿದೆ ಅಂದರೆ ಜನಕತ್ವ ರಕ್ಷಕತ್ವಗಳು ಅಮಾರಕತ್ವಕ್ಕೆ ಪ್ರಯೋಜಕಗಳಲ್ಲ. ಮಮತಾದಿದೋಷಗಳೇ ಅಮಾರಕತ್ವಕ್ಕೆ ಪ್ರಯೋಜಕ. ವಿಷ್ಣುವು ನಿರ್ದೋಷನಾದ್ದರಿಂದ ಅವನಲ್ಲಿ ಮಮತಾದಿ-ದೋಷಗಳಿಲ್ಲ. ಜೊತೆಗೆ ಅವನು ಲೋಕವಿಲಕ್ಷಣನಾದ್ದರಿಂದ ಲೋಕದಲ್ಲಿರುವ ತಂದೆತಾಯಿಗಳಂತೆ ಅಲ್ಲ. ಆದ್ದರಿಂದ ಲೋಕವಿರೋಧವನ್ನು ಅವನಲ್ಲಿ ಹೇಳಲು ಸಾಧ್ಯವಿಲ್ಲ. ಹಾಗಾಗಿ ಯುಕ್ತಿಯಿಂದ ಅಮಾರಕತ್ವ ಸಿದ್ಧವಾಗುವುದಿಲ್ಲ.

**ಅಧಿಕರಣ ಫಲ:-** 'ಜನ್ಮಾದ್ಯಸ್ಯಯತಃ' ಎಂಬ ಸೂತ್ರದಲ್ಲಿ ವಿಷ್ಣುವು ಜಗಜ್ಜನ್ಮಾದಿಕರ್ತಾ ಎಂದು ಹೇಳಿದೆ. ಜನ್ಮಾದಿಗಳಲ್ಲಿ ಲಯವೂ ಸೇರಿದೆ. ಲಯಕರ್ತಾ ವಿಷ್ಣುವಲ್ಲ ಎಂದಾದರೆ ಅವನಿಗೆ ಜನ್ಮಾದಿಕರ್ತೃತ್ವ ಕೂಡುವುದಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನ. ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ।। ಓಂ ವಿಪರ್ಯಯೇಣ ಕ್ರಮೋತ ಉಪಪದ್ಯತೇ ಚ ಓಂ ।।
## ೨-೩-೮

ಈಶ್ವರನಿಂದಲೇ ಸರ್ವಕ್ಕೂ ಲಯ ಎಂದು ಸಿದ್ಧವಾದಮೇಲೆ ಈ ಅಧಿಕರಣದಲ್ಲಿ ಯಾವಕ್ರಮದಿಂದ ಲಯ ಎಂಬ ವಿಚಾರ ಮಾಡಲಾಗುತ್ತಿದೆ. ಹೀಗೆ ಹಿಂದಿನಿಂದ ಸಂಗತಿಯನ್ನು ತಿಳಿಯಬೇಕು.

ಈ ಅಧಿಭೂತಗಳೆಲ್ಲವೂ ಹುಟ್ಟಿದ ಕ್ರಮದಿಂದಲೇ ಲಯವನ್ನು ಹೊಂದು-ತ್ತವೋ ಅಥವಾ ವ್ಯುತ್ಕ್ರಮದಿಂದಲೋ ಎಂಬುದೇ ಸಂದೇಹ. ಜನ್ಮಕ್ರಮದಿಂದಲೇ ಲಯ ಎಂದು ಪೂರ್ವಪಕ್ಷ. ಏಕೆಂದರೆ,

'ಕ್ರಮಾದುತ್ಪದ್ಯತೇ ಕ್ರಮಾಲ್ಲೀಯತೇ' 'ಕ್ರಮೇಣೋತ್ಪತ್ತಿರ್ಲಯಶ್ಚ' 'ಕ್ರಮೇಣೈವಾಸ್ಯ ಉತ್ಪತ್ತಿಲಯೌ' ಎಂಬುದಾಗಿ ಕ್ರಮಲಯವನ್ನು ಹೇಳುವ ಅನೇಕ ಶ್ರುತಿಗಳಿರುವುದರಿಂದ.

**ಪ್ರಶ್ನೆ:-** 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ಶ್ರುತಿಯು ವ್ಯುತ್ಕ್ರಮದಿಂದ ಲಯ ಎಂದು ಹೇಳುತ್ತಿದೆ. ಕ್ರಮಲಯ ಒಪ್ಪಿದರೆ ಇದರ ವಿರೋಧ ಬರುವುದಿಲ್ಲವೇ?

**ಪರಿಹಾರ:-** ಇಲ್ಲ, ಕ್ರಮಲಯ ಶ್ರುತಿ ಪ್ರಬಲ. ಏಕೆಂದರೆ ಅದು ಯುಕ್ತಿಸಹಿತವಾಗಿದೆ. ಲೋಕದಲ್ಲಿ ಪ್ರಾಯೇಣ ಉತ್ಪತ್ತಿ ಕ್ರಮದಿಂದಲೇ ಕಂಡಿರುವುದರಿಂದ ಭೂತಗಳು ಉತ್ಪತ್ತಿಕ್ರಮದಿಂದಲೇ ಲಯ ಹೊಂದುತ್ತವೆ ಎಂದು ಒಪ್ಪಬೇಕು. ಹೀಗೆ ಯುಕ್ತಿಸಹಿತವಾದ ಕ್ರಮಲಯ ಶ್ರುತಿಯಿಂದ ವ್ಯುತ್ಕ್ರಮಲಯಶ್ರುತಿಗೆ ಬಾಧವನ್ನು ಹೇಳಬೇಕು.

**ಸಿದ್ಧಾಂತ:-** ವ್ಯುತ್ಕ್ರಮದಿಂದಲೇ ಲಯ. 'ವ್ಯುತ್ಕ್ರಮಾದ್ವಿಲಯಶ್ಚ' ಎಂಬ ನಿರವಕಾಶವಾದ ಶ್ರುತಿ ಇರುವುದರಿಂದ.

ಕ್ರಮಲಯಶ್ರುತಿಗಳ ವಿರೋಧವಿಲ್ಲ ಏಕೆಂದರೆ 'ದ್ವಿವಿಧಃ ಕ್ರಮ ಉದ್ದಿಷ್ಟೋ ವ್ಯುತ್ಕ್ರಮೋಽನುಕ್ರಮಸ್ತಥಾ ಸೃಷ್ಟಾವನ್ಯೋ ಲಯೇ ಚಾನ್ಯಃ' ಎಂಬಲ್ಲಿ ವ್ಯುತ್ಕ್ರಮವೂ ಒಂದು ಕ್ರಮವೇ ಎಂದು ಹೇಳಿರುವುದರಿಂದ ಕ್ರಮಲಯ ಶ್ರುತಿಗಳಲ್ಲಿ ಹೇಳಿರುವ

ಕ್ರಮ ಎಂದರೆ ಅದು ವ್ಯುತ್ಕ್ರಮ ಎಂದರ್ಥ. ಹಾಗಾಗಿ ಕ್ರಮಲಯಶ್ರುತಿಗಳೆಲ್ಲಾ ಸಾವಕಾಶವಾಗಿದೆ.

ಹಿಂದೆ ಹೇಳಿದ ಯುಕ್ತಿ ಅಪ್ರಯೋಜಕ ಅಂದರೆ, ಮೊದಲು ಹುಟ್ಟಿದ್ದು ಮೊದಲು ನಾಶವಾಗುವುದಕ್ಕೆ ಪೂರ್ವೋತ್ಪನ್ನತ್ವ ಪ್ರಯೋಜಕವಲ್ಲ, ಸಾಮರ್ಥ್ಯಾಭಾವವೇ ಪ್ರಯೋಜಕ. ಆದರೆ ಭೂತಗಳ ವಿಚಾರದಲ್ಲಿ 'ಪೂರ್ವೇ ಪೂರ್ವೇ ಯತೋ ವಿಷ್ಣೋಃ' ಎಂಬ ಸ್ಮೃತಿಯ ಅನುಸಾರವಾಗಿ ಮೊದಲು ಹುಟ್ಟಿದಕ್ಕೆ ಅಧಿಕಸಾಮರ್ಥ್ಯವಿರುವುದರಿಂದ ಪಶ್ಚಾತ್ ಲಯ ಕೂಡುತ್ತದೆ.

**ಅಧಿಕರಣ ಫಲ:-** ಕ್ರಮಲಯ ಶ್ರುತಿಯ ವಿರೋಧದಿಂದ ವ್ಯುತ್ಕ್ರಮಲಯ ಶ್ರುತಿಯು ಅಪ್ರಮಾಣ ಎಂದಾದರೆ, ಉಳಿದ ಶ್ರುತಿಗಳ ಪ್ರಾಮಾಣ್ಯದಲ್ಲೂ ಅನಾಶ್ವಾಸ ಉಂಟಾಗಿ ವಿಷ್ಣುವಿಗೆ ಶ್ರುತಿಸಮನ್ವಯದಿಂದ ಹೇಳಲ್ಪಟ್ಟ ಸರ್ವಸಂಹರ್ತೃತ್ವಾದಿಗಳು ಸಿದ್ಧವಾಗದೇ ಹೋಗಬೇಕು ಎಂಬ ಆಕ್ಷೇಪ ಹಾಗು ಸಮಾಧಾನ. ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಅಂತರಾ ವಿಜ್ಞಾನ ಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ಓಂ ॥ ೨-೩-೯

ಹಿಂದೆ ವ್ಯುತ್ಕ್ರಮೇಣ ಲಯ ಹೇಳಲ್ಪಟ್ಟಿದೆ. ಅದಕ್ಕೆ ಕೆಲವು ಕಡೆ ಅಪವಾದವಿದೆ ಎಂಬ ಶಂಕೆ ಮಾಡುತ್ತಿರುವದರಿಂದ ಸಂಗತಿಯಿದೆ ಎಂದು ತಿಳಿಯಬೇಕು.

ಪ್ರಕೃತವಾದ ಅಧಿಭೂತಗಳು ಎಲ್ಲವೂ ವ್ಯುತ್ಕ್ರಮದಿಂದಲೇ ಲಯಹೊಂದುತ್ತವೆಯೋ ಅಥವಾ ಕೆಲವು ಕ್ರಮ(ಜನ್ಮ)ದಿಂದ ಲಯ ಹೊಂದುತ್ತವೋ ಎಂಬುದೇ ಸಂದೇಹ.

**ಪೂರ್ವಪಕ್ಷ :-** 'ಮನಸಶ್ಚ ವಿಜ್ಞಾನಂ' ಎಂಬಲ್ಲಿ ಮನಸ್ತತ್ವದಿಂದ ವಿಜ್ಞಾನತತ್ತ್ವ ಹುಟ್ಟಿದೆ ಎಂದು ಹೇಳಿದೆ. 'ಯಚ್ಛೇದ್ವಾಙ್ಮನಸೀ ಪ್ರಾಜ್ಞಃ ತದ್ಯಚ್ಛೇತ್ ಜ್ಞಾನ ಆತ್ಮನಿ' ಎಂಬ ಶ್ರುತಿಯು ಈ ಎರಡು ತತ್ತ್ವಗಳಿಗೆ ಉತ್ಪತ್ತಿಕ್ರಮದಿಂದಲೇ ಲಯವನ್ನು ಹೇಳುತ್ತಿದೆ. ಹಾಗಾಗಿ ಮನಸ್ತತ್ತ್ವ ಹಾಗು ವಿಜ್ಞಾನತತ್ತ್ವ ಇವೆರಡನ್ನು ಬಿಟ್ಟು ಉಳಿದವುಗಳಿಗೆ ವ್ಯುತ್ಕ್ರಮದಿಂದ ಲಯ ಎಂದು ಹೇಳಬೇಕು.

**ಪ್ರಶ್ನೆ:-** ಶ್ರುತಿಯಲ್ಲಿ (ಮನಸಶ್ಚ ವಿಜ್ಞಾನಂ) ಇರುವ ಮನಸ್ ಮತ್ತು ವಿಜ್ಞಾನ ಶಬ್ದಗಳಿಗೆ ಮನಸ್ತತ್ವ ಹಾಗು ವಿಜ್ಞಾನತತ್ತ್ವ ಎಂದರ್ಥ ಅಲ್ಲ. ಅಂತಃ ಕರಣ ಹಾಗು ಅವಬೋಧ ಎಂದರ್ಥ. ಹಾಗಾಗಿ ಈ ಶ್ರುತಿಯು ತತ್ತ್ವ-ಸೃಷ್ಟಿಪರವೇ ಅಲ್ಲ?

**ಪರಿಹಾರ :-** ಇದು ಸರಿಯಲ್ಲ.ಏಕೆಂದರೆ ಮನಸ್ ಹಾಗು ವಿಜ್ಞಾನ ಶಬ್ದಗಳಿಗೆ ಮನಸ್ತತ್ತ್ವ ಹಾಗು ವಿಜ್ಞಾನತತ್ತ್ವ ಎಂಬುದೇ ಮುಖ್ಯಾರ್ಥ. ಕಾರಣವಿಲ್ಲದೇ ಮುಖ್ಯಾರ್ಥ ಬಿಟ್ಟು ಅಮುಖ್ಯಾರ್ಥ ಮಾಡಬಾರದು.

**ಪ್ರಶ್ನೆ:-** ಕೆಲವಕ್ಕೆ ಉತ್ಪತ್ತಿಕ್ರಮದಿಂದ ಲಯ ಒಪ್ಪದರೆ 'ವ್ಯುತ್ಕ್ರಮಾದ್ವಿಲಯಶ್ಚ' ಎಂದು ಸರ್ವಕ್ಕೂ ವ್ಯುತ್ಕ್ರಮಲಯವನ್ನು ಹೇಳುವ ಶ್ರುತಿಯ ವಿರೋಧ ಬರುವುದಿಲ್ಲವೇ?

**ಪರಿಹಾರ:-** ಇಲ್ಲ 'ಮನಸಶ್ಚ ವಿಜ್ಞಾನಂ' ಎಂದು ಮನೋವಿಜ್ಞಾನಗಳಿಗೆ ಕ್ರಮಲಯವನ್ನು ಹೇಳುವ ಶ್ರುತಿ ಪ್ರಬಲ. ಏಕೆಂದರೆ ಅದಕ್ಕೆ ಲೋಕನುಸಾರಿತ್ವ ಎಂಬ ಯುಕ್ತಿಯ ಸಹಕಾರವಿದೆ. ಲೋಕದಲ್ಲಿಯೂ ಕೆಲವುಕಡೆ ಉತ್ಪತ್ತಿ-ಕ್ರಮದಿಂದ ಲಯ ಕೆಲವುಕಡೆ ವ್ಯುತ್ಕ್ರಮದಿಂದ ಲಯ ಕಂಡಿದೆ. ಹಾಗಾಗಿ ಪ್ರಬಲವಾದ ಈ ಶ್ರುತಿಯಿಂದ 'ವ್ಯುತ್ಕ್ರಮಾದ್ವಿಲಯಶ್ಚ' ಎಂದು ಸರ್ವಕ್ಕೂ ವ್ಯುತ್ಕ್ರಮಲಯ ಹೇಳುವ ಶ್ರುತಿಯು ಬಾಧಿತ ಎಂದು ಹೇಳಬೇಕು.

**ಸಿದ್ಧಾಂತ :-** ಮನಸ್‌ಶಬ್ದಕ್ಕೆ ಮನಸ್ತತ್ತ್ವ ಹಾಗು ಅಂತರಿಂದ್ರಿಯ ಎಂಬರ್ಥದಲ್ಲಿ, ವಿಜ್ಞಾನ ಶಬ್ದಕ್ಕೆ ವಿಜ್ಞಾನತತ್ತ್ವ ಹಾಗು ಅವಬೋಧ ಎಂಬರ್ಥದಲ್ಲಿ ಪ್ರಯೋಗ ಕಂಡಿರುವುದರಿಂದ ಈ ಎರಡು ಶಬ್ದಗಳಿಗೆ ತತ್ತ್ವಪರವಾದ ಅರ್ಥ ಮಾತ್ರ ಮುಖ್ಯ. ಇಂದ್ರಿಯ ಅವಬೋಧ ಪರವಾದ ಅರ್ಥ ಮುಖ್ಯವಲ್ಲ ಎಂದು ಹೇಳುವುದು ಸರಿಯಲ್ಲ.

'ವಿಜ್ಞಾನತತ್ವಂ ಮಹತಃ ಸಮುತ್ಪನ್ನಂ ಚತುರ್ಮುಖಾತ್' ಎಂಬ ಸ್ಮೃತಿಯ ವಿರೋಧ ಬರುವುದರಿಂದ 'ಮನಸಶ್ಚ ವಿಜ್ಞಾನಂ' ಎಂಬುದು ತತ್ತ್ವ ವಿಷಯವಲ್ಲ. ಇದು ಅಂತರಿಂದ್ರಿಯ ಹಾಗು ಅವಬೋಧಸೃಷ್ಟಿಪರ ಎಂದು ಹೇಳಬೇಕು.ಮನೋವಿಜ್ಞಾನತತ್ತ್ವಗಳಿಗೆ ಉತ್ಪತ್ತಿಕ್ರಮದಿಂದ ಲಯವನ್ನು

ಹೇಳುವ ವಿಶೇಷಪ್ರಮಾಣವಿಲ್ಲ. ಜೊತೆಗೆ 'ಸರ್ವಂ ವೈತತ್ಕ್ರಮಾದುತ್ಪದ್ಯತೇ ವ್ಯುತ್ಕ್ರಮಾತ್ ಲೀಯತೇ' ಇತ್ಯಾದಿ, ಸರ್ವಕ್ಕೂ ವ್ಯುತ್ಕ್ರಮಲಯ ಹೇಳುವ ಶ್ರುತಿ ಇರುವುದರಿಂದ ಎಲ್ಲವೂ ವ್ಯುತ್ಕ್ರಮದಿಂದಲೇ ಲಯಹೊಂದುತ್ತವೆ ಎಂದು ಸಿದ್ಧವಾಗುವುದು.

**ಅಧಿಕರಣ ಫಲ:-** ಶ್ರುತಿಗಳಿಗೆ ಪರಸ್ಪರ ವಿರೋಧದಿಂದ ಒಂದಕ್ಕೆ ಅಪ್ರಾಮಾಣ್ಯ ಒಪ್ಪಿದರೆ ಇತರ ಶ್ರುತಿಗಳಲ್ಲೂ ಅಪ್ರಾಮಾಣ್ಯ ಶಂಕೆ ಮೂಡಿ ಹಿಂದೆ ಹೇಳಿದ ಶ್ರುತಿ ಸಮನ್ವಯದಿಂದ ವಿಷ್ಣುವಿನ ಸರ್ವಸ್ರಷ್ಟೃತ್ವ ಹಾಗು ಸಂಹರ್ತೃತ್ವ ಕೂಡುವುದಿಲ್ಲ ಎಂಬ ಆಕ್ಷೇಪ ಹಾಗು ಅವರ ಸಮಾಧಾನ. ಇದೇ ಈ ಅಧಿಕರಣದಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ನಾತ್ಮಾಽಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ ಓಂ ॥
## ೨-೩-೧೦

ಇಲ್ಲಿಯವರೆಗೆ, ಬ್ರಹ್ಮನನ್ನು ಹೊರತುಪಡಿಸಿ ಎಲ್ಲದಕ್ಕೂ ವ್ಯುತ್ಕ್ರಮದಿಂದ ಲಯ ಶ್ರುತ್ಯುಕ್ತವಾಗಿದೆ ಎಂದು ಹೇಳಿ ಈಗ ಬ್ರಹ್ಮನಿಗೂ ಲಯವನ್ನು ಹೇಳೋಣ ಎಂಬ ಶಂಕೆ ಮಾಡುತ್ತಿರುವುದರಿಂದ ಸಂಗತಿಯಿದೆ ಎಂದು ತಿಳಿಯಬೇಕು.

''ಸರ್ವೋತ್ಪತ್ತಿಲಯಕರ್ತಾ'' ಎಂದು ಪ್ರಕೃತನಾದ ವಿಷ್ಣುವಿಗೂ ದೇಹನಾಶ ಎಂಬ ಲಯ ಇದೆಯೋ ಇಲ್ಲವೋ ಎಂಬುದೇ ಸಂದೇಹ. ''ಸ ಇದಂ ಸರ್ವಂ ವಿಲಾಪ್ಯ ಅಂತಸ್ತಮಸಿ ಲೀಯತೇ'' ಎಂಬ ಶ್ರುತಿಯಲ್ಲಿ ವಿಷ್ಣುವಿಗೂ ಲಯ ಶ್ರುತವಾಗಿರುವುದರಿಂದ ಅವನಿಗೂ ಲಯವಿದೆ ಎಂದು ಪೂರ್ವಪಕ್ಷ.

**ಪ್ರಶ್ನೆ** :- ''ನಿತ್ಯೋ ನಿತ್ಯಾನಾಂ'' ಎಂಬ ಶ್ರುತಿಯು ವಿಷ್ಣುವು ನಿತ್ಯ ಎಂದು ಹೇಳುತ್ತಿದೆ. ಅವನಿಗೆ ಲಯ ಒಪ್ಪಿದರೆ ಈ ಶ್ರುತಿಯ ವಿರೋಧ ಬರುವುದಿಲ್ಲವೇ?

**ಪರಿಹಾರ :-** ಇಲ್ಲ. ''ಸ ಇದಂ ಸರ್ವಂ ವಿಲಾಪ್ಯ'' ಎಂಬ ಶ್ರುತಿಯು ಪ್ರಬಲ. ಏಕೆಂದರೆ, ಇದು ಯುಕ್ತಿಸಹಿತವಾಗಿದೆ. ಅದೇನೆಂದರೆ, ವಿಷ್ಣುವೂ ಚೇತನನಾದ್ದರಿಂದ ಅವನಿಗೂ ಜೀವನಂತೆ ಲಯವುಂಟು ಎಂಬುದೇ. ಹೀಗೆ ಪ್ರಬಲವಾದ ಈ ಶ್ರುತಿಯಿಂದ ನಿತ್ಯೋ ನಿತ್ಯಾನಾಂ ಎಂಬ ಶ್ರುತಿಗೆ ಬಾಧವನ್ನು ಹೇಳಬೇಕು. ಲಯಶ್ರುತಿಯು (ಸ ಇದಂ ಸರ್ವಂ ವಿಲಾಪ್ಯ...) ಅಪಿಹಿತತ್ವಪರ ( ಮರೆಯಾಗಿರುತ್ತಾನೆ ಎಂದು) ಎಂದು ಹೇಳಬಾರದು. ಹಾಗೆ ಅರ್ಥಮಾಡಲು ಯಾವುದೇ ಕಾರಣವಿಲ್ಲ.

**ಪ್ರಶ್ನೆ :-** 'ಅಸಂಭವಸ್ತು ಸತೋಽನುಪಪತ್ತೇಃ' ಎಂಬ ಸೂತ್ರದಲ್ಲಿಯೇ ಪರಮಾತ್ಮನು ಸ್ವತಂತ್ರನಾದ್ದರಿಂದ ಅವನಿಗೆ ಉತ್ಪತ್ತಿ ಇಲ್ಲ ಎಂದು ಹೇಳಿದೆ. ಉತ್ಪತ್ತಿಯಿಲ್ಲ ಎಂದ ಮೇಲೆ ಲಯವೂ ಇಲ್ಲ ಎಂಬುದು ಅರ್ಥಾತ್‌ಸಿದ್ಧ. ಹಾಗಾಗಿ ಲಯ ಒಪ್ಪುವುದು ಅಯುಕ್ತವಲ್ಲವೇ?

**ಪರಿಹಾರ :-** ಈಶ್ವರನಿಗೆ ಸ್ವತಃ ಉತ್ಪತ್ತಿಲಯ ಇಲ್ಲದೇ ಹೋದರೂ ಲೀಲೆಯಿಂದ ಅವನು ದೇಹ ಗ್ರಹಣ ಹಾಗೂ ತ್ಯಾಗಗಳನ್ನು ಮಾಡಬಹುದು.

**ಸಿದ್ಧಾಂತ :-** ವಿಷ್ಣುವಿಗೆ ದೇಹನಾಶ ಎಂಬ ಲಯವೂ ಇಲ್ಲ. ದೇಹನಾಶವಿದೆ ಎನ್ನುವುದಕ್ಕೆ ಯಾವುದೇ ಪ್ರಮಾಣವಿಲ್ಲ. 'ತಮಸಿ ಲೀಯತೇ'' ಎಂಬ ಪ್ರಮಾಣವಿದೆಯಲ್ಲಾ? ಎಂದರೆ ಈ ಶ್ರುತಿಯು ಅಪಿಹಿತತ್ವಪರ. ಹಾಗಾಗಿ ಇದು ಲಯವಿದೆ ಎನ್ನಲು ಪ್ರಮಾಣವಾಗಲಾರದು. ಈ ಶ್ರುತಿಯು ಅಪಿಹಿತತ್ವಪರ ಎಂದೇಕೆ ಹೇಳಬೇಕು ಎಂದರೆ, ಸಮಾಖ್ಯಾ ಇರುವುದರಿಂದ. ಋಗ್ವೇದದಲ್ಲಿ ''ತುಚ್ಛೇನಾಭ್ವಪಿಹಿತಂ ಯದಾಸೀತ್'' ಎಂಬ ಮಂತ್ರವಿದೆ. ಈ ವಾಕ್ಯಕ್ಕಿಂತ ಮೊದಲು ನಾಸದಾಸೀತ್ ಎಂದು ಸರ್ವಕ್ಕೂ ಲಯವನ್ನು ಹೇಳಿ ತಮ ಆಸೀತ್ ಎಂದು ತಮಸ್ ಶಬ್ದಿತವಾದ ಪ್ರಕೃತಿ ಇತ್ತು ಎಂದು ಹೇಳಲಾಗಿದೆ. ಅನಂತರ ತುಚ್ಛೇನ ಎಂಬ ವಾಕ್ಯದಿಂದ ಬ್ರಹ್ಮನು ಆ ತಮಸ್ಸಿನಿಂದ ಮುಚ್ಚಿ-ಹೋಗಿದ್ದ ಎಂದು ಅನಂತರ ಪ್ರಾದುರ್ಭೂತನಾದ ಎಂದು ಹೇಳಿದೆ. ಹಾಗಾಗಿ ತಮಸಿ ಲೀಯತೇ ಎಂಬ ಶ್ರುತಿಗೂ ಅಪಿಹಿತತ್ವಪರವಾಗೇ ಅರ್ಥಮಾಡಬೇಕು.

ಜೊತೆಗೆ ''ತಮಸಿ ಲೀನಃ ಪ್ರಕೃತಿಂ ಪುರುಷಂ ಕಾಲಂ ಚಾನುಪಶ್ಯತಿ ನೈನಂ ಪಶ್ಯತಿ ಕಶ್ಚನ'' ಎಂಬ ಇನ್ನೊಂದು ಪೈಂಗಿಶ್ರುತಿಯು ಅಪಿಹಿತತ್ವವನ್ನೇ

ಹೇಳುತ್ತಿದೆ. ಇಲ್ಲಿರುವ ನಿಲೀನ ಶಬ್ದಕ್ಕೆ ಅಪಿಹಿತ ಎಂದೇ ಅರ್ಥ ಏಕೆಂದರೆ, ಮುಂದೆ, ಇವನು ಪ್ರಕೃತ್ಯಾದಿಗಳನ್ನು ನೋಡುತ್ತಿದ್ದ ಇವನನ್ನು ಯಾರೂ ನೋಡುತ್ತಿರಲಿಲ್ಲ ಎಂದು ಹೇಳಿದ್ದರಿಂದ.

ಹೀಗೆ ಅಪಿಹಿತತ್ವವನ್ನು ಒಪ್ಪದೇ ಹೋದರೆ, ಲಯವನ್ನೇ ಹೇಳುವುದಾದರೆ ಆಗ ''ನಿತ್ಯೋಽನಿತ್ಯಾನಾಂ, ಸನಿತ್ಯೋ ನಿರ್ಗುಣಃ ವಿಭುಃ'' ಮೊದಲಾದ ಅನೇಕ ನಿತ್ಯತ್ವಪ್ರತಿಪಾದಕ ಶ್ರುತಿಗಳ ವಿರೋಧ ಬರುತ್ತದೆ. ಚೇತನತ್ವ ಯುಕ್ತಿಯು ಶ್ರುತಿವಿರುದ್ಧವಾದ್ದರಿಂದ ಅಪ್ರಮಾಣ.

**ಅಧಿಕರಣ ಫಲ :-** ವಿಷ್ಣುವಿಗೇ ಲಯ ಇರುವುದಾದರೆ ಅವನು ಸಕಲಜಗಜ್ಜನ್ಮಾದಿಕರ್ತಾ ಆಗಲು ಸಾಧ್ಯವಿಲ್ಲ ಎಂಬ ಆಕ್ಷೇಪ ಹಾಗು ಅದರ ಸಮಾಧಾನ, ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಜ್ಞೋತ ಏವ ಓಂ ॥ ೨-೩-೧೧

ಇಲ್ಲಿಯವರೆಗೆ ಸೂಚೀಕಟಾಹನ್ಯಾಯದಿಂದ ಅಲ್ಪವಾದ ಅಧಿಭೂತಾದಿ ವಿಚಾರವನ್ನು ಮಾಡಿ ಈಗ ಈ ಪಾದ ಮುಗಿಯುವವರೆಗೆ ವಿಸ್ತಾರವಾದ ಜೀವವಿಚಾರ ಮಾಡಲಾಗುತ್ತಿದೆ. ಹೀಗೆ ಈ ಅಧಿಕರಣಕ್ಕೆ ಸಂಗತಿಯನ್ನು ತಿಳಿಯಬೇಕು.

ಜೀವನಿಗೆ ಉತ್ಪತ್ತಿ ಇದೆಯೋ ಇಲ್ಲವೋ ಎಂಬುದೇ ಸಂದೇಹ. ಉತ್ಪತ್ತಿಯಿಲ್ಲ ಎಂಬುದೇ ಪೂರ್ವಪಕ್ಷ. ಏಕೆಂದರೆ, ''ನಿತ್ಯೋ ನಿತ್ಯಾನಾಂ'' ಎಂಬ ಶ್ರುತಿಯಲ್ಲಿ ನಿತ್ಯಾನಾಂ ಎಂಬ ಷಷ್ಠೀವಿಭಕ್ತ್ಯಂತಪದದಿಂದ ಜೀವರ ನಿತ್ಯತ್ವವು ಹೇಳಲ್ಪಟ್ಟಿರುವುದರಿಂದ.

**ಪ್ರಶ್ನೆ :-** ''ಸರ್ವ ಏವ ಚಿದಾತ್ಮಾನೋ ವ್ಯುಚ್ಚರಂತಿ'' ಎಂಬ ಶ್ರುತಿಯಲ್ಲಿ ವ್ಯುಚ್ಚರಂತಿ (ಉತ್ಪದ್ಯಂತೇ) ಎಂಬ ಪದದಿಂದ ಜೀವರಿಗೆ ಉತ್ಪತ್ತಿ ಶ್ರುತವಾಗಿದೆ. ಹಾಗಾಗಿ ನಿತ್ಯತ್ವ ಹೇಳಿದ್ದು ಸರಿಯಲ್ಲ?

**ಪರಿಹಾರ :-** ಜೀವನಿಗೆ ನಿತ್ಯತ್ವವನ್ನು ಹೇಳುವ ಶ್ರುತಿ ಪ್ರಬಲ. ಏಕೆಂದರೆ ಅದು ಯುಕ್ತಿಸಹಿತವಾಗಿದೆ. ಜೀವರಿಗೆ ಸ್ವರೂಪೋತ್ಪತ್ತಿ ಇಲ್ಲ. ಏಕೆಂದರೆ

ಸ್ವರೋತ್ಪತ್ತಿಗೆ ಬೇಕಾದ ಯಾವ ಕಾರಣವೂ ಇಲ್ಲ, ಆದ್ದರಿಂದ, ಎಂಬುದೇ ಆ ಯುಕ್ತಿ. ಹೀಗಾಗಿ ಸಯುಕ್ತಿಕವಾದ ನಿತ್ಯತ್ವಶ್ರುತಿಯಿಂದ ಉತ್ಪತ್ತಿ ಶ್ರುತಿಗೆ ಬಾಧವನ್ನು ಹೇಳಬೇಕು. ಹಾಗಾಗಿ ಅದು ಪ್ರಮಾಣವಾಗಲಾರದು.

**ಪ್ರಶ್ನೆ** :- ಸ್ವರೂಪೋತ್ಪತ್ತಿ ಇಲ್ಲದೇ ಇರುವ ವಿಯದಾದಿಗಳಿಗೆ ಪರಾ-ಧೀನವಿಶೇಷಾವಾಪ್ತಿಯನ್ನು ಒಪ್ಪಿದ ಹಾಗೆ ಜೀವನಿಗೂ ಏಕೆ ಒಪ್ಪಬಾರದು?

**ಪರಿಹಾರ** :- ಜೀವನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೆ ಪರಾಧೀನ-ವಿಶೇಷಾವಾಪ್ತಿಪರವಾಗಿ ಅರ್ಥ ಮಾಡುವುದಾದರೆ, ಅನುತ್ಪತ್ತಿ ಶ್ರುತಿಗೂ ಬ್ರಹ್ಮನಲ್ಲಿ ಮಾಡಿದ ಹಾಗೆ, ಜೀವ ಮೊದಲಾದವುಗಳಿಗೆ ಪರಾಧೀನ-ವಿಶೇಷಾವಾಪ್ತಿ ರೂಪ ಉತ್ಪತ್ತಿಯಿಲ್ಲ ಎಂದೇ ಅರ್ಥಮಾಡಬೇಕು. ಬ್ರಹ್ಮನಲ್ಲಿ ಆಗುವಾಗ ಅನುತ್ಪತ್ತಿ ಶ್ರುತಿಯು ಪರಾಧೀನವಿಶೇಷಾವಾಪ್ತಿಅಭಾವಪರ, ಆದರೆ ಜಿವನಲ್ಲಿ ಮಾತ್ರ ಸ್ರರೂಪೋತ್ಪತ್ತಿಶೂನ್ಯಪರ ಎಂದು ಹೇಳಿದರೆ ಆಗ ಒಂದೇ ಶಬ್ದಕ್ಕೆ ಒಂದೊಂದು ಕಡೆ ಒಂದೊಂದು ಆರ್ಥ ಮಾಡಿದಂತಾಗುತ್ತದೆ. ಇದು ಸರಿಯಲ್ಲ. ಹಾಗಾಗಿ ಉತ್ಪತ್ತಿ ಎಂದರೆ ಪರಾಧೀನವಿಶೇಷಾವಾಪ್ತಿ ಎಂದು ಅರ್ಥ ಮಾಡಿದರೂ ಅದರ ಅಭಾವವನ್ನು ಹೇಳುವ ಶ್ರುತಿಯ ವಿರೋಧ ಬಂದೇ ಬರುತ್ತದೆ. ಆದ್ದರಿಂದ ಮೊದಲು ಹೇಳಿದಂತೆ ಸ್ವರೂಪೋತ್ಪತ್ತಿ ವಿಷಯದಲ್ಲೇ ಇಲ್ಲಿ ಆಕ್ಷೇಪ ಎಂದು ತಿಳಿಯಬೇಕು.

**ಸಿದ್ಧಾಂತ** :- ಜೀವನಿಗೆ ದೇಹಸಂಬಂಧವೆಂಬ ಪರಾಧೀನವಿಶೇಷಾ-ವಾಪ್ತಿರೂಪ ಉತ್ಪತ್ತಿ ಇದೆ. ''ತೇ ವಾ ಏತೇ ಚಿದಾತ್ಮಾನೋಽವಿನಷ್ಟಾಃ ಪರಂ-ಜ್ಯೋತಿಃ ನಿವಿಶಂತಿ ಅವಿನಷ್ಟಾ ಏವೋತ್ಪದ್ಯಂತೇ'' ಎಂಬ ಶ್ರುತಿಯಲ್ಲಿ ಜೀವರು ನಾಶಹೊಂದದೆ ಉತ್ಪತ್ತಿ ಹೊಂದುತ್ತಾರೆ ಎಂದು ಹೇಳಿದೆ. ಹಾಗಾಗಿ ಜೀವನಿಗೆ ಸ್ವರೂಪತಃ ಉತ್ಪತ್ತಿ ಇಲ್ಲದೇ ಹೋದರೂ ಅವನ ಉಪಾಧಿ(ದೇಹಾದಿ)ಗಳಿಗೆ ಉತ್ಪತ್ತಿ ಇರುವುದರಿಂದ ಪರಾಧೀನವಿಶೇಷಾವಾಪ್ತಿ ಹೇಳುವ ಶ್ರುತಿಯು ಉಪಾಧ್ಯುತ್ಪತ್ತಿಪರ ಹಾಗು ಅನುತ್ಪತ್ತಿ ಹೇಳುವಶ್ರುತಿಯು ಸ್ವರೂಪ ಪರ ಎಂದು ಭಿನ್ನವಿಷಯತ್ವ ಇರುವುದರಿಂದ ಪರಸ್ಪರ ವಿರೋಧವಿಲ್ಲ. ಅನೇಕಾ-ರ್ಥತ್ವ ಎಂಬ ದೋಷಕ್ಕೂ ಅವಕಾಶವಿಲ್ಲ, ಏಕೆಂದರೆ, ಬ್ರಹ್ಮನ ವಿಷಯದಲ್ಲಿ ಅನುತ್ಪತ್ತಿ ಹೇಳುವ ಶ್ರುತಿಗೆ ಪರಾಧೀನವಿಶೇಷಾವಾಪ್ತಿಯೂ ಇಲ್ಲ ಎಂದೇ

ಅರ್ಥ ಏಕೆಂದರೆ, ಬ್ರಹ್ಮನಿಗೆ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿ ಇದೆ ಎಂದು ಹೇಳುವ ಯಾವ ಶ್ರುತಿಯೂ ಇಲ್ಲ. ಆದರೆ ಜೀವನಿಗೆ ಅನುತ್ಪತ್ತಿ ಹೇಳುವ ಶ್ರುತಿಗೆ ಪರಾಧೀನವಿಶೇಷಾವಾಪ್ತಿಯೂ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ, ಏಕೆಂದರೆ ಜೀವನಿಗೆ ಪರಾಧೀನವಿಶೇಷಾವಾಪ್ತಿ ಎಂಬ ಉತ್ಪತ್ತಿ ಇದೆ ಎಂದು ಹೇಳುವ ಶ್ರುತಿ ಇದೆ. ಹಾಗಾಗಿ ಸ್ವರೂಪೋತ್ಪತ್ತಿ ಇಲ್ಲ ಎಂದೇ ಅರ್ಥಮಾಡಬೇಕು. ಹೀಗೆ ಅನೇಕಾರ್ಥತ್ವ ಎಂಬುದು ನ್ಯಾಯಯುತವೇ ಆದ್ದರಿಂದ ದೋಷವಲ್ಲ.

**ಅಧಿಕರಣ ಫಲ** :- ಜೀವನಿಗೆ ಉತ್ಪತ್ತಿ ಇಲ್ಲ ಎಂದರೆ, ವಿಷ್ಣುವು ಸರ್ವಜಗತ್ಕರ್ತಾ ಆಗಲು ಸಾಧ್ಯವಿಲ್ಲ. ಸರ್ವದಲ್ಲಿ ಜೀವನೂ ಸೇರಿರುವುದರಿಂದ ಎಂಬ ಆಕ್ಷೇಪ ಹಾಗು ಅದರ ಸಮಾಧಾನ ಇದೇ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತ ಫಲ.

## ॥ ಓಂ ಉತ್ಕ್ರಾಂತಿಗತ್ಯಾಗತೀನಾಂ ಓಂ ॥ ೨-೩-೧೨

ಪೂರ್ವಾಧಿಕರಣದಲ್ಲಿ ಜೀವನಿಗೆ ಉತ್ಪತ್ತಿ ಇದೆಯೋ ಇಲ್ಲವೋ ಎಂದು ಚರ್ಚಿಸಲಾಯಿತು. ಈ ಅಧಿಕರಣದಲ್ಲಿ ಜೀವನು ಅಣುವೋ? ಮಹತ್ತೋ ಎಂದು ಪರಿಮಾಣ ವಿಷಯದ ವಿಚಾರ ಮಾಡಲಾಗುತ್ತದೆ. ಇದರಿಂದ ಸಂಗತಿ ಬಂದಂತಾಯಿತು. ಪ್ರಕೃತನಾದ ಜೀವನು ವ್ಯಾಪ್ತನೋ ಅಣುವೋ ಎಂದು ಸಂದೇಹ.

ವ್ಯಾಪ್ತ ಎಂದು ಪೂರ್ವಪಕ್ಷ ''ವ್ಯಾಪ್ತಾ ಹಿ ಆತ್ಮಾನಃ ಚೇತನಾ ನಿರ್ಗುಣಾಶ್ಚ'' ಎಂದು ವ್ಯಾಪ್ತತ್ವವನ್ನು ಹೇಳುವ ಶ್ರುತಿಯು ಬಹುವಚನ ಘಟಿತವಾಗಿದೆ. ಬಹುತ್ವವು ಅನೇಕ ಧರ್ಮಿಗಳಲ್ಲೇ ಇರುತ್ತದೆ ಎಂದು ಸಾಮಾನ್ಯ ನಿಯಮ ಬ್ರಹ್ಮನು ಒಬ್ಬನೇ. ಜೀವರು ಅನೇಕರಿದ್ದಾರೆ. ಆದ್ದರಿಂದ ಈ ಶ್ರುತಿಯು ಜೀವ ಪರವೇ ಆಗಬೇಕು. ''ಋತಂ ಪಿಬಂತೌ'' ಎಂಬ ದ್ವಿವಚನ ಘಟಿತ ಶ್ರುತಿಯು ಮಾತ್ರ ಬ್ರಹ್ಮ ಶಬ್ದಾದಿ ಅಪವಾದ ಇರುವುದರಿಂದ ಬ್ರಹ್ಮ ಪರ. ಆದರೆ ಇಲ್ಲಿ ಅಂತಹ ಅಪವಾದ ಯಾವುದು ಇಲ್ಲವಾದ್ದರಿಂದ ಜೀವ ಪರವೇ ಆಗಬೇಕು. ''ಯದ್ಯಪಿ ಅಣುರ್ಹಿ ಏಷ ಆತ್ಮಾ'' ಎಂದು ಅಣುತ್ವ ಶ್ರುತಿಯು ಇದೆ. ಆದರೆ

ಅದರ ಪ್ರಕಾರ ಜೀವನಿಗೆ ಅಣುತ್ವ ಒಪ್ಪಿದರೆ ಸರ್ವದೇಹ ಸಂಬದ್ಧ ಸ್ಪರ್ಶಾದಿಗಳ ಜ್ಞಾನ ಇಲ್ಲದಂತಾಗುತ್ತದೆ. ಆಯಾ ದೇಹ ಪರಿಮಾಣ ಒಪ್ಪಿದರೆ ಆನೆಯ ದೇಹದಲ್ಲಿದ್ದ ಜೀವನಿಗೆ ಇರುವೆಯ ಜನ್ಮ ಬಂದಾಗ ಆ ದೇಹದಲ್ಲಿ ಪ್ರವೇಶ ಅಸಾಧ್ಯವಾಗುತ್ತದೆ ಎಂದು ನೈಕಸ್ಮಿನ್ನಸಂಭವಾತ್ ಎಂಬ ಅಧಿಕರಣದಲ್ಲಿ ಹೇಳಲಾಗಿದೆ. ಆದ್ದರಿಂದ ಅಣುತ್ವಶ್ರುತಿಯು ದುರ್ಬಲ. ಜೀವನಿಗೆ ವ್ಯಾಪ್ತತ್ವ-ವನ್ನು ಅಂಗೀಕರಿಸಿದರೆ ಸರ್ವದೇಹ ಸಂಬಂಧಿ ಜ್ಞಾನವು ಕೂಡುತ್ತದೆ ಎಂಬ ಯುಕ್ತಿ ಸಹಿತವಾದ್ದರಿಂದ ವ್ಯಾಪ್ತತ್ವ ಶ್ರುತಿಯು ಪ್ರಬಲ. ಇದರಿಂದ ವಿರುದ್ಧ-ವಾದ ಅಣುತ್ವ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಬೇಕು. ಇದರ ಮೇಲೆ ಶಂಕಿಸಬಹುದು ಜೀವನು ಅಣುವೇ ಆಗಿದ್ದಾನೆ ಅವನಿಗೆ ಅನೇಕ ಅಂಶಗಳಿವೆ. ಆ ಆಂಶಗಳಿಂದ ಸರ್ವದೇಹ ಸಂಬಂಧಿಸ್ಪರ್ಶಾದಿಜ್ಞಾನ ಬರಬಹುದು ಎಂದು. ಆದರೆ ಹೀಗೆ ಹೇಳುವುದು ಸಮಂಜಸವಲ್ಲ. ಅ ಅನೇಕ ಅಂಶಗಳು ಚೇತನಗಳೇ ಆದ್ದರಿಂದ ಏಕಮತ್ಯವಿಲ್ಲದೆ ಒಂದೊಂದು ಅಂಶಕ್ಕೆ ವಿರುದ್ಧ ಮತಿ ಉಂಟಾಗಿ ಅದರಿಂದ ವಿರುದ್ಧ ಕ್ರಿಯೆಗಳೂ ಉಂಟಾಗಿ ದೇಹವೇ ಭಗ್ನವಾಗುವ ಪ್ರಸಂಗ-ವಾಗಲೀ ಅಥವಾ ನಿಷ್ಕ್ರಿಯತ್ವ ಪ್ರಸಂಗವಾಗಲೀ ಬರಬಹುದು. ಆದ್ದರಿಂದ ಜೀವನಿಗೆ ವ್ಯಾಪ್ತತ್ವವನ್ನು ಹೇಳುವುದೇ ಸೂಕ್ತವಾಗುತ್ತದೆ.

**ಸಿದ್ಧಾಂತ** :- ''ಸೋಸ್ಮಾತ್ ಶರೀರಾತ್'' ಎಂಬ ಶ್ರುತಿಯು ಜೀವನು ಈ ಶರೀರದಿಂದ ಹೊರಟು ಪರಲೋಕಕ್ಕೆ ಹೋಗಿ ಅಲ್ಲಿಂದ ಮರಳಿ ಈ ಲೋಕಕ್ಕೆ ಬರುತ್ತಾನೆ ಎಂದು ಜೀವನಿಗೆ ಉತ್ಕ್ರಮಣ ಗಮನ ಆಗಮನಗಳನ್ನು ಹೇಳಿದೆ. ವ್ಯಾಪ್ತನಿಗೆ ಇದು ಯುಕ್ತವಾಗುವುದಿಲ್ಲವಾದ್ದರಿಂದ ಹಕ್ಕಿಯಂತೆ ಜೀವನು ಅಣುವೇ ಆಗಿದ್ದಾನೆ. ವ್ಯಾಪ್ತವಾದ ಆಕಾಶಾದಿಗಳಲ್ಲಿ ಗಮನಾಗಮನಾದಿಗಳು ಕಂಡಿಲ್ಲ. ಇನ್ನು ಜೀವನಿಗೆ ಮಧ್ಯಮ ಪರಿಮಾಣವನ್ನು ಹೇಳಿದರೆ ಘಟ ಪಟಾದಿಗಳಂತೆ ಅನಿತ್ಯತ್ವ ಪ್ರಸಂಗವಿದೆ. ಆದ್ದರಿಂದಲೂ ಅಣುತ್ವವನ್ನೇ ಹೇಳಬೇಕು. ''ಅಣುರ್ಹಿ ಏಷಆತ್ಮಾ'' ಎಂಬ ಶ್ರುತಿಯು ಆಧಾರವಾಗಿದೆ. ಯದ್ಯಪಿ ವ್ಯಾಪ್ತಾ ಹಿ ಆತ್ಮಾನಃ ಎಂಬುದಾಗಿಯೂ ಶ್ರುತಿ ಇದೆ. ಆದರೆ ಅದು ''ಸ ಆತ್ಮಾ ಇದಂ ಸೃಜತಿ'' ಎಂದು ವಿಷ್ಣು ಪ್ರಕರಣದಲ್ಲಿ ಬಂದಿರುವುದರಿಂದ ಮತ್ತು ಏಷೋ ಹಿ ಆತ್ಮಾ ಅಧ್ಯುದ್ಗತೋ ಮಾನಶಕ್ತೇಃ ಎಂಬ ವಾಕ್ಯಶೇಷದಲ್ಲಿ ಇರುವ ಆತ್ಮ ಶಬ್ದ ಮತ್ತು ಉನ್ಮಾನತ್ವ (ಅಪರಿಮಿತತ್ವ) ಎಂಬ ಲಿಂಗಗಳಿಂದ

ವಿಷ್ಣುಪರವೇ ಆಗಿದೆ. ಇಲ್ಲಿರುವ ಬಹುವಚನವನ್ನು ಗುಹಾಧಿಕರಣನ್ಯಾಯ-ದಂತೆ ವಿಷ್ಣುರೂಪಗಳು ಅನೇಕ ಇರುವುದರಿಂದ ಕೂಡಿಸಬಹುದು.

ಮತ್ತು ದೇಹದ ಏಕದೇಶದಲ್ಲಿರುವ ಚಂದನ ಬಿಂದುವು ಸ್ವಾಂಶಗಳಿಂದ ಸರ್ವದೇಹದಲ್ಲಿ ವ್ಯಾಪಿಸುವಂತೆ ''ಹೃದಿ ಹ್ಯೇಷ ಆತ್ಮಾ'' ಎಂಬ ಶ್ರುತಿಯ ಪ್ರಕಾರ ಹೃದಯದಲ್ಲಿರುವ ಜೀವನು ಸ್ವರೂಪಾಂಶಗಳಿಂದ ಸರ್ವದೇಹ-ವ್ಯಾಪಿಯಾಗಲು ಸಾಧ್ಯವಿರುವುದರಿಂದ ಸ್ಪರ್ಶಾದಿ ಜ್ಞಾನವೂ ಕೂಡುತ್ತದೆ. ನಿರಂಶರಾದ ಜೀವರಿಗೆ ದೀಪದ ಅಂಶಗಳು ವ್ಯಾಪಿಸದಿದ್ದರೂ ಪ್ರಕಾಶ ವ್ಯಾಪಿಸು-ವಂತೆ ಚಿದ್ಗುಣ ವ್ಯಾಪ್ತಿಯನ್ನು ಹೇಳಿ ಸಾರ್ವತ್ರಿಕ ಜ್ಞಾನವನ್ನು ಕೂಡಿಸಬಹುದು. ಸಕಲ ವೇದಸಮನ್ವಯದ ಆಕ್ಷೇಪ ಮತ್ತು ಸಮಾಧಾನಗಳೇ ಇದರ ಫಲ.

## ॥ ಓಂ ವ್ಯತಿರೇಕೋ ಗಂಧವತ್ ತಥಾ ಚ ದರ್ಶಯತಿ ಓಂ ॥
## ೨-೩-೧೩

ಜೀವನು ಅಣುವೇ ಎಂದಾದ ಪಕ್ಷದಲ್ಲಿ ಯೋಗಿ ಜೀವರಿಗೆ ಅನೇಕ ರೂಪಗಳಿರುವುದು ಕೂಡುವುದಿಲ್ಲ. ಎಂದು ಈ ಅಧಿಕರಣದಲ್ಲಿ ಪೂರ್ವಾ-ಧಿಕರಣವನ್ನು ಆಕ್ಷೇಪ ಮಾಡಿದ್ದರಿಂದ ಸಂಗತಿ ಬಂದಂತಾಯಿತು. ಜೀವನು ಏಕರೂಪವುಳ್ಳವನೋ ಅಥವಾ ಅನೇಕರೂಪವುಳ್ಳವನೋ ಎಂದು ಸಂದೇಹ. ಜೀವನು ಏಕರೂಪವುಳ್ಳವನೇ ಎಂದು ಪೂರ್ವಪಕ್ಷ. 'ಸ ಏಕಧಾ ನ ಸಪ್ತಧಾ' ಎಂಬ ಶ್ರುತಿಯು ಅನೇಕರೂಪವನ್ನು ನಿಷೇಧಿಸಿದೆ. ಮತ್ತು ವ್ಯಾಪ್ತನಾದ ಆತ್ಮನಲ್ಲಿ ಅನೇಕ ದೇಹಗಳ ಮೂಲಕವಾಗಿ ಅನೇಕರೂಪಗಳು ಬರಬಹು-ದಾದರೂ ಅಣುವಾದ ಜೀವನಿಗೆ ದೇಹಬಾಹುಲ್ಯವಾಗಲಿ ಬಹುರೂಪತ್ವವಾಗಲಿ ಬರಲಾದರು ಎಂದು ಯುಕ್ತಿಯೂ ಇದೆ.

ಅಣುವಾದ ಜೀವನಿಗೂ ಅಂಶಗಳಿಂದ ಬಹುರೂಪತ್ವನ್ನು ಹೇಳಿದರೆ ಅದು ಜೀವನಿಗೆ ನಿರಂಶತ್ವವನ್ನು ಹೇಳುವ 'ಸ ನಿತ್ಯೋ ನಿರವಯವಃ' ಎಂಬ ಶ್ರುತಿಗೆ ವಿರುದ್ಧವಾಗುತ್ತದೆ. ಸ ಪಂಚಧಾ ಸ ಸಪ್ತಧಾ ಎಂದು ಬಹುರೂಪತ್ವ-ವನ್ನು ಹೇಳುವ ಶ್ರುತಿಯು ಯುಕ್ತಿಸಹಿತವಾದ ಏಕರೂಪಶ್ರುತಿಯಿಂದ ಬಾಧಿತವೆನ್ನಬೇಕು.

**ಸಿದ್ಧಾಂತ** :- ಜೀವನು ಅಣುವೇ ಆಗಿದ್ದಾನೆ ಮತ್ತು ಭಿನ್ನಾಂಶರಹಿತನೂ ಆಗಿದ್ದಾನೆ. ಆದರೂ ಅವನು ಯೋಗಾರಾಧಿತನಾದ ಮತ್ತು ಅಚಿಂತ್ಯಶಕ್ತಿಯುಳ್ಳ ಭಗವಂತನ ಪ್ರಸಾದದಿಂದ ವಿಶೇಷ ಸಾಮರ್ಥ್ಯವನ್ನು ಹೊಂದಿ ಚಂದನ ಬಿಂದುವಂತೆ ಅಂಶವಿಭಾಗವನ್ನು ಹೊಂದಿ ಅನೇಕರೂಪಗಳನ್ನು ಪಡೆಯ-ಬಹುದು. ಏಕರೂಪತ್ವವನ್ನು ಹೇಳುವ ಶ್ರುತಿಯಾದರೋ ಸ್ವರೂಪೈಕ್ಯ-ಪರವಾಗಿದೆ. ನಿರವಯವತ್ವಶ್ರುತಿಯೂ ಕೂಡ ಭಿನ್ನಾಂಶರಾಹಿತ್ಯವನ್ನಷ್ಟೇ ಹೇಳುವುದರಿಂದ ಸ್ವರೂಪಾಂಶಗಳಿಂದ ಅನೇಕರೂಪತ್ವಕ್ಕೆ ಬಾಧಕವಾಗಲಾರದು. ಶ್ರುತಿಸಮನ್ವಯ ಆಕ್ಷೇಪ ಮತ್ತು ಸಮಾಧಾನವೇ ಫಲ.

## ॥ ಓಂ ಪೃಥಗುಪದೇಶಾತ್ ಓಂ ॥ ೨-೩-೧೪

ಈ ಅಧಿಕರಣದಲ್ಲಿ ಜೀವ ಹಾಗೂ ಈಶನಿಗೆ ಐಕ್ಯವಿರುವುದರಿಂದ ಜೀವನ ಸಾಮರ್ಥ್ಯವು ಈಶಪ್ರಸಾದದ ಅಧೀನವಾಗಲಾರದು ಎಂದು ಶಂಕಿಸುವುದ-ರಿಂದ ಸಂಗತಿ ಇದೆ. ಜೀವನು ಈಶನಿಂದ ಭಿನ್ನನೋ ಅಭಿನ್ನನೋ ಎಂದು ಸಂದೇಹ. ಅಭಿನ್ನ ಎಂದು ಪೂರ್ವಪಕ್ಷ. ತತ್ವಮಸಿ ಎಂಬ ಶ್ರುತಿಯಲ್ಲಿ ತತ್ ಹಾಗೂ ತ್ವಂ ಪದಗಳಿಗೆ (ಅವುಗಳು ಸರ್ವಜ್ಞತ್ವವಿಶಿಷ್ಟಚೈತನ್ಯ ಹಾಗೂ ಅಲ್ಪಜ್ಞತ್ವವಿಶಿಷ್ಟ ಚೈತನ್ಯವಾಚಕವಾಗಿದ್ದರೂ) ಸರ್ವಜ್ಞತ್ವ ಅಲ್ಪಜ್ಞತ್ವ ಎಂಬ ಭಾಗ ತ್ಯಾಗ ಲಕ್ಷಣಾದಿಂದ ಕೇವಲ ಚೈತನ್ಯಪರವಾಗಿವೆ. ಹಾಗಾಗಿ ಈ ಶ್ರುತಿಯು ಜೀವ ಮತ್ತು ಪರಮಾತ್ಮರಿಗೆ ಐಕ್ಯವನ್ನು ಭೋಧಿಸುತ್ತದೆ. ಈ ಶ್ರುತಿಗೆ 'ಏಕಮೇವಾದ್ವಿತೀಯಂ' ಎಂದು ಉಪಕ್ರಮ 'ತತ್ವಮಸಿ' ಎಂದು ಉಪಸಂಹಾರ, ಒಂಭತ್ತು ಬಾರಿ ಈ ವಾಕ್ಯ ಬಂದಿರುವುದರಿಂದ ಅಭ್ಯಾಸ. ಐಕ್ಯವು ಪ್ರಮಾಣಾಂತರದಿಂದ ಲಭ್ಯವಾಗದೆ ಇರುವುದರಿಂದ ಅಪೂರ್ವತಾ. ತಸ್ಯ ತಾವದೇವ ಚಿರಂ ಎಂಬುದಾಗಿ ಮೋಕ್ಷರೂಪವಾದ ಫಲ. ಯೇನ ಅಶ್ರುತಂ ಶ್ರುತಂ ಭವತಿ ಎಂಬುದಾಗಿ ಅರ್ಥವಾದ ಮತ್ತು ಮೃಣ್ಮಯಾದಿ ದೃಷ್ಟಾಂತದ ಮೂಲಕವಾಗಿ ಮಾಡಲ್ಪಟ್ಟ ಉಪಪಾದನೆ. ಹೀಗೆ ಆರು ವಿಧ ತಾತ್ಪರ್ಯ ಲಿಂಗಗಳಿರುವುದರಿಂದ ಈ ಐಕ್ಯಶ್ರುತಿಯು ಪ್ರಬಲವಾಗಿದೆ. ಆದ್ದರಿಂದ ಇದಕ್ಕೆ ವಿರುದ್ಧವಾದ ದ್ವಾಸುಪರ್ಣಾ ಎಂಬ ಭೇದ ಶ್ರುತಿಯು

ಅಪ್ರಮಾಣವೆನ್ನಬೇಕು. ಇಲ್ಲದಿದ್ದರೆ ಪ್ರಬಲವಾದ ಐಕ್ಯಶ್ರುತಿಗೆ ವಿಷಯವೇ ಇಲ್ಲದಂತಾಗುತ್ತದೆ.

**ಸಿದ್ಧಾಂತ :-** ''ಭಿನ್ನಃ ಅಚಿಂತ್ಯಃ ಪರಮಃ ಜೀವಸಂಘಾತ್ ಪೂರ್ಣಃ ಪರೋ ಜೀವಸಂಘೋ ಹ್ಯಪೂರ್ಣಃ'' ಎಂಬುದಾಗಿ ಭೇದಶ್ರುತಿಯೂ ಇದೆ. ಈ ಶ್ರುತಿಯು ಪೂರ್ಣತ್ವ ಅಪೂರ್ಣತ್ವಾದಿ ವಿರುದ್ಧ ಧರ್ಮಗಳಿರುವ ಪ್ರಯುಕ್ತ ಭಿನ್ನರಾಗಿದ್ದಾರೆ. ಎಂದು ಪ್ರತಿಪಾದಿಸುತ್ತಿರುವುದರಿಂದ ಯುಕ್ತಿ-ಸಹಿತವಾದಂತಾಗಿ ಪ್ರಬಲವಾಗಿದೆ ಮತ್ತು ''ಶಾಸ್ತ್ರಗಮ್ಯಪರೇಶಾನಾತ್ ಭೇದಃ ಸ್ವಾತ್ಮನ ಈಯತೇ । ಅನುಭೂತಿ ವಿರೋಧೇನ ಕಥಮೇಕತ್ವಮುಚ್ಯತೇ'' (ತತ್ತ್ವಮಸಿ ಶ್ರುತಿಯು ಜೀವಪರಮಾತ್ಮರಿಗೆ ಐಕ್ಯವನ್ನು ಹೇಳಬೇಕಾದರೆ ಮೊದಲು ಜೀವ ಮತ್ತು ಪರಮಾತ್ಮರು ಸಿದ್ಧರಾಗಬೇಕು. ಪರಮಾತ್ಮನು ಭಿನ್ನೋಽಚಿಂತ್ಯಃ ಎಂಬ ಮೇಲ್ಕಂಡ ಶ್ರುತಿಯಿಂದ ಪೂರ್ಣತ್ವೇನ ಸಿದ್ಧ-ನಾಗಿದ್ದಾನೆ. ಜೀವನಾದರೂ ಸ್ವಾನುಭವದಿಂದ ಅಪೂರ್ಣತ್ವೇನ ಸಿದ್ಧನಾಗಿದ್ದಾನೆ. ಇಂತಹ ಅನುಭವ ವಿರೋಧ ಬರುವುದರಿಂದ ತತ್ವಮಸಿ ಎಂಬ ಶ್ರುತಿಯು ಐಕ್ಯವನ್ನು ಹೇಗೆ ಹೇಳಲು ಸಾಧ್ಯ) ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಭಿನ್ನೋಽಚಿಂತ್ಯಃ ಎಂಬ ಶ್ರುತಿಯು ಉಪಜೀವ್ಯತ್ವೇನ ಪ್ರಬಲವೂ ಆಗಿದೆ ಇಂತಹ ಪ್ರಬಲ ಶ್ರುತಿ ವಿರೋಧ ಮತ್ತು ಅನುಭವ ವಿರೋಧವೂ ಬರುವುದ-ರಿಂದ ಮತ್ತು ತತ್ ತ್ವಂ ಎಂಬ ಎರಡು ಪದಗಳಿಗೆ ಲಕ್ಷಣಾಮಾಡುವುದಕ್ಕಿಂತ ತತ್ ಎಂಬ ಒಂದೇ ಪದಕ್ಕೆ ಲಕ್ಷಣಾ ಮಾಡುವುದು ಉಚಿತವಾದ್ದರಿಂದ ತತ್ವಮಸಿ ಎಂಬ ಶ್ರುತಿಗೆ ಜೀವನು ಭಗವಂತನ ಜ್ಞಾನಾನಂದಾದಿ ಗುಣಸದೃಶ ಗುಣಾವುಳ್ಳವನಾದ್ದರಿಂದ ಅವನಿಗೆ ಸದೃಶನು ನೀನಾಗಿದ್ದೀ ಎಂದು ಅರ್ಥೈಸಲು ಬರುವುದರಿಂದ ಐಕ್ಯಪರತ್ವಹೇಳುವುದು ಸರಿಯಲ್ಲ. ಉಪಕ್ರಮಾದಿಲಿಂಗಗಳೂ ತತ್ತ್ವಮಸಿ ಶ್ರುತಿಗೆ ಇದ್ದರೂ ಅವುಗಳು ಅವಿರುದ್ಧಾರ್ಥದಲ್ಲಿಯೇ ತಾತ್ಪರ್ಯಗಮಕವಾಗುತ್ತದೆ ಹೊರತು ವಿರುದ್ಧಾರ್ಥದಲ್ಲಿ ಅಲ್ಲ. ತತ್ತ್ವಮಸಿ ಶ್ರುತಿಗೆ ಮಾನಾಂತರ ಅವಿರುದ್ಧಾರ್ಥವನ್ನು ಗ್ರಂಥಕಾರರು ಬೇರೆ ಕಡೆ ಹೇಳಿದ್ದಾರೆ. ಆದ್ದರಿಂದ ಐಕ್ಯಶ್ರುತಿಗೆ ನಿರ್ವಿಷಯತ್ವ ಪ್ರಸಂಗವಿಲ್ಲದಿರುವು-ದರಿಂದ ಜೀವನು ಈಶನಿಗಿಂತ ಭಿನ್ನನೇ ಆಗಿದ್ದಾನೆ.

## ॥ ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ ॥ ೨-೩-೧೫

''ಬಂಧಾನ್ಮೋಕ್ಷಂ ತತ ಏವಾಭಿವಾಂಛೇತ್'' ಎಂಬುದಾಗಿ ಪೂರ್ವಾದಿ-ಕರಣದಲ್ಲಿ ಉಲ್ಲೇಖಿಸಲ್ಪಟ್ಟ ಅನಾದಿಬಂಧ ಅನಂತಮೋಕ್ಷಗಳನ್ನು ಈ ಅಧಿಕರಣದಲ್ಲಿ ಆಕ್ಷೇಪಿಸುವುದರಿಂದ ಅನಂತರ ಸಂಗತಿಯು. ಜೀವನು ನಿತ್ಯನೋ ಅನಿತ್ಯನೋ ಎಂದು ಸಂದೇಹ. ಅನಿತ್ಯನು ಎಂದು ಪೂರ್ವಪಕ್ಷ. ''ಬ್ರಹ್ಮನ್ ಲಯಮಭ್ಯುಪೈತಿ'' ಎಂಬ ಶ್ರುತಿಯು ಜೀವನಿಗೆ ಬ್ರಹ್ಮನಲ್ಲಿ ಲಯವನ್ನು ಹೇಳುತ್ತದೆ ಮತ್ತು ಜ್ಞೋತ ಏವ ಎಂಬ ಸೂತ್ರದಲ್ಲಿ ಉಪಾಧಿಗೆ ಜನ್ಮಹೇಳಿದ್ದರಿಂದ ಪ್ರತಿಬಿಂಬಭೂತನಾದ ಜೀವನಿಗೂ ಜನ್ಮ ಒಪ್ಪಲೇಬೇಕು. ಜನ್ಮ ಇದ್ದಮೇಲೆ ನಾಶವೂ ಇರಲೇಬೇಕು. ಎಂಬ ಯುಕ್ತಿಯೂ ಇರುವುದರಿಂದ ಜೀವನು ಅನಿತ್ಯನಾಗಿದ್ದಾನೆ. ದೇಹವೆಂಬ ಉಪಾಧಿಗೆ ಜನನವಿದ್ದರೂ ಜೀವನು ಪ್ರತಿಬಿಂಬನೆನಿಸಲು ಬೇರೊಂದು ಅನಾದಿನಿತ್ಯವಾದ ಉಪಾಧಿಯನ್ನು ಒಪ್ಪುತ್ತೇವೆ ಎನ್ನಲು ಆಧಾರವಿಲ್ಲ. ಆದ್ದರಿಂದ ''ಸೋಽನಾದಿನಾ ಪುಣ್ಯೇನ'' ಎಂಬುದಾಗಿ ಜೀವನಿಗೆ ಅನಾದಿಕರ್ಮಸಂಬಂಧ ಮತ್ತು ಆನಂತ್ಯ (ಮೋಕ್ಷ) ಪ್ರಾಪ್ತಿಯನ್ನು ಹೇಳುವುದರ ಮೂಲಕ ಜೀವನ ಅನಾದಿತ್ವವನ್ನು ಬೋಧಿಸುವ ಶ್ರುತಿಯು ಸಯುಕ್ತಿಕವಾದ ಬ್ರಹ್ಮನ್ ಲಯಮಭ್ಯುಪೈತಿ ಎಂಬ ಶ್ರುತಿಯಿಂದ ವಿರುದ್ಧವಾದ್ದರಿಂದ ಅಪ್ರಮಾಣ.

**ಸಿದ್ಧಾಂತ** :- ''ನಿತ್ಯಃ ಪರೋ ನಿತ್ಯೋ ಜೀವಃ ಸುಖದುಃಖೇ ತ್ವನಿತ್ಯೇ'' ಇತ್ಯಾದಿ ಶ್ರುತಿಸ್ಮೃತಿಗಳೂ ಜೀವನಿಗೆ ನಿತ್ಯತ್ವವನ್ನೂ ಹೇಳುವುದರಿಂದ ಇವೆರಡನ್ನೂ ಸರಿಪಡಿಸಲು ಅನಾದಿನಿತ್ಯವಾದ ಒಂದು ಉಪಾಧಿಯನ್ನು ಕಲ್ಪನೆ ಮಾಡಲೇಬೇಕು. ''ಜೀವೋಪಾಧಿಃ ದ್ವಿಧಾ ಪ್ರೋಕ್ತಃ'' ಎಂಬ ವಚನದಿಂದ ಜೀವನಿಗೆ ಬಾಹ್ಯೋಪಾಧಿಅಲ್ಲದೆ ಬೇರೊಂದು ಸ್ವರೂಪೋಪಾಧಿಯು ಮತ್ತು ಅದರ ಅನಾದಿನಿತ್ಯತ್ವವೂ ಸಿದ್ಧವಾಗುವುದರಿಂದ ಮತ್ತು ಸರ್ವಗತನಾದ ಬಿಂಬನಾದ ಈಶ ಹಾಗೂ ಉಪಾಧಿಗಳ ಸಂಭಂಧವು ನಿತ್ಯವಾದುದರಿಂದ ಜೀವನು ಅನಾದಿನಿತ್ಯನೇ ಆಗಿದ್ದಾನೆ. ಜೀವನಿಗೆ ಲಯವನ್ನು ಹೇಳುವ ಶ್ರುತಿಯು ಬಾಹ್ಯೋಪಾಧಿಪರವಾಗಿದೆ.

## ॥ಓಂ ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ಓಂ॥
## ೨-೩-೧೬

ಪೂರ್ವಾಧಿಕರಣದಲ್ಲಿ ಪೃಥಗಧಿಕರಣದ ಆದ್ಯಸೂತ್ರದಲ್ಲಿ ಹೇಳಲ್ಪಟ್ಟ ''ಬಂಧಾನ್ಮೋಕ್ಷಂ ತತ ಏವಾಭಿವಾಂಛೇತ್'' ಎಂಬ ಉಪದೇಶವನ್ನು ಸಮರ್ಥಿಸಲಾಯಿತು. ಈ ಅಧಿಕರಣದಲ್ಲಿಯಾದರೂ ಅದೇ ಪೃಥಗಧಿಕರಣದ ದ್ವಿತೀಯಸೂತ್ರದಲ್ಲಿ ಹೇಳಲ್ಪಟ್ಟ ತದ್ಗುಣಸಾರತ್ವವನ್ನು (ಜೀವನು ಭಗವದ್ಗುಣಸದೃಶ ಗುಣವುಳ್ಳವನು ಎಂಬದನ್ನು) ಸಮರ್ಥಿಸಲಾಗುವುದು. ಇದೇ ಸಂಗತಿ

ಜೀವನು ಜ್ಞಾನಾನಂದಾದಿರೂಪವುಳ್ಳವನೋ ಅಲ್ಲವೋ ಎಂದು ಸಂದೇಹ. ಜೀವನು ಜ್ಞಾನಾನಂದಾದಿಸ್ವರುಪವುಳ್ಳವನಲ್ಲ ಎಂದು ಪೂರ್ವಪಕ್ಷ. ಏಕೆಂದರೆ ''ಸ ದುಃಖಾದ್ವಿಮುಕ್ತಃ ಆನಂದೀ ಭವತಿ'' ಎಂಬ ಶ್ರುತಿಯು ಮುಕ್ತನಾದ ಬಳಿಕ ಆನಂದವನ್ನು ಹೇಳುವುದರಿಂದ ಪೂರ್ವಾವಸ್ಥೆಯಲ್ಲಿ ಆನಂದರೂಪನಲ್ಲ ಎಂದು ಸಿದ್ಧವಾಗುತ್ತದೆ. ಮತ್ತು ಈಗ ಸಂಸಾರಾವಸ್ಥೆಯಲ್ಲಿ ಜ್ಞಾನಾನಂದಾದಿರೂಪತ್ವದ ಅನಭವವೂ ಇಲ್ಲವಾದ್ದರಿಂದ ತದ್ರೂಪನಲ್ಲನೆಂದು ಸಿದ್ಧವಾಗುತ್ತದೆ. ಪ್ರತಿಬಂಧವಿರುವುದರಿಂದ ಆನಂದಾದಿಗಳ ಅನುಭವವು ಈಗ ಆಗುತ್ತಿಲ್ಲ ಎಂಬ ಶಂಕೆಯೂ ಸರಿಯಲ್ಲ. ಏಕೆಂದರೆ ಆನಂದಾದಿಗಳೂ ಜೀವಸ್ವರೂಪಭೂತವಾಗಿವೆ. ಜೀವನಾದರೂ ಈಗ ಅಹಂ ಎಂದು ಭಾಸಮಾನನಾಗಿದ್ದಾನೆ.ಇದರಿಂದ ಅವನ ಜ್ಞಾನವಿದೆ ಎಂದಾಯಿತು. ಹಾಗಾಗಿ ಜ್ಞಾನಾಭಾವರೂಪವಾದ ಅಜ್ಞಾನವು ಪ್ರತಿಬಂಧಕವೆನ್ನಲು ಬರುವುದಿಲ್ಲ. ಜ್ಞಾನಾಭಾವಕ್ಕಿಂತ ಅತಿರಿಕ್ತವಾದ ಭಾವರೂಪ ಅಜ್ಞಾನವೂ ಪ್ರತಿಬಂಧಕವಾಗಲು ಶಕ್ಯವಿಲ್ಲ. ಅದು ಆತ್ಮಜ್ಞಾನಕ್ಕೆ ಪ್ರತಿಬಂಧಕವಾಗಿಲ್ಲ ಎಂದ ಮೇಲೆ ತತ್ ಸ್ವರೂಪವಾದ ಆನಂದಾದಿಗಳಿಗೂ ಪ್ರತಿಬಂಧಕವಾಗಲಾರದು. ದೇಹಾದಿಗಳೇ ಪ್ರತಿಬಂಧಕವಾಗಿವೆ ಎಂದರೆ ಆ ದೇಹಾದಿಗಳು ಸುಖಾದ್ಯನುಭವಸಾಧನವೇ ಆದ್ದರಿಂದ ಪ್ರತಿಬಂಧಕ ಎನ್ನುವುದು ವಿರುದ್ಧವಾಗುತ್ತದೆ ಮತ್ತು ಜೀವನು ಆನಂದಾದಿರೂಪನು ಎಂದರೆ ಮೊಕ್ಷಕ್ಕೆ ಪ್ರಯತ್ನಮಾಡುವುದು ವ್ಯರ್ಥವಾಗುತ್ತದೆ. ಹೀಗಾಗಿ ''ವಿಜ್ಞಾನಾತ್ಮಾ ಸ ಆನಂದಃ'' ಇತ್ಯಾದಿ ಶ್ರುತಿಗಳೂ

ಆನಂದರೂಪತಾಅನುಪಲಬ್ಧಿ ಎಂಬ ಯುಕ್ತಿಸಹಿತವಾದ ಅನಾನಂದಶ್ರುತಿ-ಯಿಂದ ಬಾಧಿತವಾದ ಪ್ರಯುಕ್ತ ಅಪ್ರಮಾಣವಾಗಿದೆ.

**ಸಿದ್ಧಾಂತ** :- ''ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ'' ''ನಿತ್ಯಾನಂದಜ್ಞಾನಬಲಾಃ ದೇವಾಃ'' ಇತ್ಯಾದಿ ಶ್ರುತಿಸ್ಮೃತಿಗಳು ಜೀವನಿಗೆ ಆನಂದಾದಿರೂಪತ್ವವನ್ನೇ ಹೇಳುತ್ತವೆ. ಈಗಿರುವ ಆನಂದಾದಿಗಳು ಬಾಲ್ಯದಲ್ಲಿ ಪುಂಸ್ತ್ವವು ಇದ್ದರೂ ಅಭಿವ್ಯಕ್ತವಾಗದೆ ಕಾಲಾಂತರದಲ್ಲಿ ಅಭಿವ್ಯಕ್ತವಾಗುವಂತೆ ಈಗ ಅಭಿವ್ಯಕ್ತವಾಗದಿದ್ದರೂ ಮೋಕ್ಷದಲ್ಲಿ ಅಭಿವ್ಯಕ್ತವಾಗುವುದರಿಂದ ಅನಂದೀ ಭವತಿ ಎಂದು ಹೇಳಲಾಗಿದೆ ಹೊರತು ಮೊದಲು ಇಲ್ಲದೇ ಇದ್ದ ಆನಂದವು ಅನಂತರ ಹುಟ್ಟುತ್ತದೆ. ಎಂಬ ಅಭಿಪ್ರಾಯದಿಂದಲ್ಲ. ಜೀವನಿಗೆ ಮೊದಲೇ ಇದ್ದ ಆನಂದಾದಿರೂಪಕ್ಕೆ ಆವರಣವನ್ನು ಒಪ್ಪಲೇಬೇಕು. ಅದು ಅಹಂ ಎಂಬ ಜೀವನ ಪ್ರತೀತಿಗೆ ಪ್ರತಿಬಂಧಕವಾಗದೇ ಇದ್ದರೂ ತನ್ನ ವಿಶೇಷಶಕ್ತಿಯಿಂದ ಜೀವನ ಸ್ವರೂಪವೇ ಆದ ಸುಖಾದಿಗಳ ಅಭಿವ್ಯಕ್ತಿಗೆ ಪ್ರತಿಬಂಧಕವಾಗುತ್ತದೆ. ಆದ್ದರಿಂದ ಅನುಪಲಬ್ಧಿ ಎಂಬ ಯುಕ್ತಿಯೂ ಜೀವನ ಆನಂದರೂಪತ್ವಕ್ಕೆ ಪ್ರತಿಬಂಧಕವಾಗುವುದಿಲ್ಲ. ಮತ್ತು ಆನಂದಾದಿರೂಪದ ಸಮ್ಯಗಭಿವ್ಯಕ್ತಿಗಾಗಿ ಜೀವನ ಪ್ರಯತ್ನವೂ ಕೂಡುತ್ತದೆ. ''ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ,ನೈವಮಸುರಾಃ, ಏವಮನೇವಂ ಚ ಮನುಷ್ಯಾಃ'' ಎಂಬ ಶ್ರುತಿ-ಯಲ್ಲಿ ಪರಮಾತ್ಮಾ ಎಂಬ ಶಬ್ದದ ಅನಂತರದಲ್ಲಿ ಏವಂ ಸುರಾಃ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಇದರಿಂದ ಉತ್ತಮಜೀವರಿಗೆ ಆನಂದಾದಿ-ರೂಪತ್ವವು ಸಿದ್ಧವಾಗುತ್ತದೆ.

## ॥ ಓಂ ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಓಂ ॥ ೨-೩-೧೭

ಪೂರ್ವದಲ್ಲೇ ಇದ್ದ ಆನಂದಾದಿಗಳಿಗೆ ಕಾಲಾಂತರದಲ್ಲಿ ಅಭಿವ್ಯಕ್ತಿಯಾಗಲಿ. ಆದರೆ ಕರ್ತೃತ್ವಕ್ಕೆ ಮಾತ್ರ ಅದು ಯಾವ ಕಾಲದಲ್ಲಿಯೂ ಇರುವುದಿಲ್ಲವಾದ್ದರಿಂದ ಅಭಿವ್ಯಕ್ತಿ ಇಲ್ಲ ಎಂದು ಶಂಕಿಸುವುದರಿಂದ ಸಂಗತಿ ಇದೆ. ಜೀವನು ಕರ್ತೃವೋ ಅಲ್ಲವೋ ಎಂದು ಸಂದೇಹ. ಕರ್ತೃ ಅಲ್ಲ ಎಂದು ಪೂರ್ವಪಕ್ಷ ಎಲ್ಲ ದೇಶಕಾಲಗಳಲ್ಲಿಯೂ ಈಶನೊಬ್ಬನೇ ಕರ್ತೃ ಎಂದು ಒಪ್ಪಿದರೆ ಲಾಘವ ಇದೆ ಎಂಬ ಯುಕ್ತಿಸಹಿತವಾದ ನಾನ್ಯಃಕರ್ತಾ ಎಂಬ ಶ್ರುತಿಯು ಜೀವನು

ಕರ್ತೃವಲ್ಲ ಎಂದು ಹೇಳುತ್ತದೆ ಮತ್ತು ಇತರವ್ಯಪದೇಶಾತ್ ಇತ್ಯಾದಿ ಸೂತ್ರಗಳಲ್ಲಿ ಜೀವನು ತನಗೆ ತನ್ನ ಹಿತವನ್ನು ಮಾಡಿಕೊಳ್ಳುತ್ತಿಲ್ಲ. ಎಂಬ ಯುಕ್ತಿಯಿಂದ ಕರ್ತೃತ್ವವನ್ನು ನಿಷೇಧ ಮಾಡಿದ್ದಾರೆ.

ಶ್ರುತಿ ಮತ್ತು ಸೂತ್ರಗಳಲ್ಲಿ ಸ್ವತಂತ್ರಕರ್ತೃತ್ವ ನಿಷೇಧ ಮಾಡಿದ್ದರೂ ಪರತಂತ್ರ ಕರ್ತೃತ್ವವು ಜೀವನಿಗಿರಲಿ. ಎಂದು ಶಂಕಿಸುವುದು ಸರಿಯಲ್ಲ. ಏಕೆಂದರೆ ಮರದ ಕೆಲಸದವನ ಕರ್ತೃತ್ವ ಶಕ್ತಿಯು ಅವನ ಅಧೀನವೇ ಆಗಿದ್ದರೂ ಮನೆಯ ಕಟ್ಟಿಸುವ ಯಜಮಾನನಿಂದ ವೇತನ ಪಡೆಯುವ ಪ್ರಯುಕ್ತ ಯಜಮಾನನ ಅಧೀನವಾಗಿರುವಂತೆ ಜೀವನ ಕರ್ತೃತ್ವವೂ ಕೂಡ ವೇತನಾದಿಗಳ ಮೂಲಕ ಈಶಾಧೀನ ಎನ್ನುವುದಾದರೆ ಆತ್ಮಾನಮಂತರೋ ಯಮಯತಿ (ಪರಮಾತ್ಮನು ಜೀವನ ಒಳಗಿದ್ದು ಪ್ರೇರಿಸುತ್ತಾನೆ) ಎಂಬ ಶ್ರುತಿಯ ವಿರೋಧ ಬರುತ್ತದೆ. ಡೊಂಬರಾಟದವನ ಅಧೀನವಾಗಿ ಗೊಂಬೆಗೆ ಇರುವಂತೆ ಜೀವನ ಕ್ರಿಯೆಯೇ ಈಶಾಧೀನ ಎನ್ನುವುದಾದರೆ ಜೀವನಿಗೆ ಕರ್ತೃತ್ವವಿಲ್ಲ ಎಂದೇ ಪರ್ಯವಸಾನವಾಗಿ ಗೊಂಬೆಯು ಹೇಗೆ ವಿಧಿನಿಷೇಧಯೋಗ್ಯವಲ್ಲವೋ ಅದರಂತೆಯೇ ಜೀವನೂ ವಿಧಿನಿಷೇಧ ಯೋಗ್ಯನಲ್ಲ. ಎಂದು ಹೇಳಬೇಕು. ಆದ್ದರಿಂದಲೇ ಸಯುಕ್ತಿಕ ಶ್ರುತಿವಿರೋಧ ಬರುವುದರಿಂದ ಜೀವನಿಗೆ ಕರ್ತೃತ್ವವನ್ನು ಹೇಳುವ ಯತ್ಕರ್ಮ ಕುರುತೇ ಎಂಬ ಶ್ರುತಿಯು ಅಪ್ರಮಾಣ.

**ಸಿದ್ಧಾಂತ** :- ವಿಧಿನಿಷೇಧ ಶಾಸ್ತ್ರವು ಜಡವನ್ನಾಗಲಿ, ಈಶನನ್ನಾಗಲಿ ಮುಕ್ತನನ್ನಾಗಲಿ ಉದ್ದೇಶಿಸಿಕೊಂಡು ಪ್ರವೃತ್ತವಾಗಿಲ್ಲ. ಸಂಸಾರಿಜೀವರನ್ನೇ ಉದ್ದೇಶ್ಯವಾಗಿಟ್ಟುಕೊಂಡು ಪ್ರವೃತ್ತವಾಗಿದೆ. ಇಂತಹ ಶಾಸ್ತ್ರವು ಸಾರ್ಥಕವಾಗಬೇಕಾದರೆ ಜೀವನಿಗೆ ಕರ್ತೃತ್ವವನ್ನು ಒಪ್ಪಲೇಬೇಕು. ಒಪ್ಪದೇ ಇದ್ದರೆ ಅದಕ್ಕೆ ಸಾರ್ಥಕ್ಯವೇ ಇಲ್ಲದಂತಾದೀತು ಎಂಬ ಯುಕ್ತಿಯಿಂದ ಜೀವನಿಗೆ ಕರ್ತೃತ್ವ ಸಿದ್ಧವಾಗುತ್ತದೆ. ಮೋಕ್ಷಕ್ಕಾಗಿ ಜೀವರು ಸಾಧನೆ ಮಾಡುವುದು ಕಂಡಿದೆ. ಹೀಗೆ ಪ್ರತ್ಯಕ್ಷದಿಂದಲೂ ಕರ್ತೃತ್ವ ಸಿದ್ಧವಾಗುತ್ತದೆ. ''ಆತ್ಮಾನಮೇವ ಲೋಕಮುಪಾಸೀತ'' ಎಂಬ ಶ್ರುತಿಯು ಜೀವಕರ್ತೃಕೋಪಾಸನೆಯನ್ನು ವಿಧಾನಮಾಡಿದ್ದರಿಂದ ಶ್ರುತಿಯಿಂದಲೂ ಸಿದ್ಧವಾಗುತ್ತದೆ. ಅಪೂರ್ಣಶಕ್ತಿತ್ವ ಮತ್ತು ಅಪೂರ್ಣಕಾಮತ್ವ ಹೇತುಗಳಿಂದ ಹಾಗೆಯೇ ''ಕರ್ತೃತ್ವಂ ಕರಣತ್ವಂ

''ಚ'' ಎಂಬ ಶ್ರುತಿಯಿಂದಲೂ ಜೀವನಿಗೆ ಪಾರತಂತ್ರ್ಯ ಇರುವುದರಿಂದ ಗೊಂಬೆಯ ಕ್ರಿಯೆಯು ಡೊಂಬರಾಟದವನ ಅಧೀನವಾದಂತೆ ಜೀವರ ಕ್ರಿಯೆಯೂ ಕೂಡ ಈಶಾಧೀನ ಎಂದು ಒಪ್ಪಿರುವುದರಿಂದ ಜೀವನಿಗೆ ಕರ್ತೃತ್ವ ನಿಷೇಧ ಮಾಡಲು ಶ್ರುತಿಸೂತ್ರಸ್ಮೃತಿಗಳ ವಿರೋಧವೂ ಇಲ್ಲ. ಮತ್ತೂ ಗೊಂಬೆಗಳಿಗೆ ವಿಧಿನಿಷೇಧಯೋಗ್ಯತ್ವ ಇಲ್ಲದಿದ್ದರೂ ಜೀವರಿಗೆ ಈಶಾಧೀನ ಕರ್ತೃತ್ವಶಕ್ತಿ ಇರುವುದರಿಂದ ವಿಧಿನಿಷೇಧಯೋಗ್ಯತ್ವವು ಕೂಡುತ್ತದೆ. ಆದ್ದರಿಂದ ವಿಧಿನಿಷೇಧಶಾಸ್ತ್ರವು ವ್ಯರ್ಥವಲ್ಲ. ಜೀವನಿಗೆ ಅನಾದಿಕರ್ಮಾನುಸಾರವಾಗಿ ಕರ್ತೃತ್ವಶಕ್ತಿಯನ್ನು ಕೊಡುತ್ತಾನೆ. ಆದರೆ ಜಡವಾದ ಗೊಂಬೆಗಳಿಗೆ ಅನಾದಿ-ಕರ್ಮವೇ ಇರುವುದಿಲ್ಲವದ್ದರಿಂದ ಕರ್ತೃತ್ವಶಕ್ತಿಯನ್ನು ಕೊಡುವುದಿಲ್ಲ ಎಂದು ಅಭಿಪ್ರಾಯ. ಹೀಗೆ ಅನ್ವಯವ್ಯತಿಲೇಕದಿಂದ ಇದು ಸಿದ್ಧವಾಗಿದೆ.

## ॥ ಓಂ ಅಂಶೋ ನಾನಾವ್ಯಪದೇಶಾದನ್ಯಥಾಚಾಪಿ ದಾಶಕಿತವಾದಿತ್ವಮಧೀಯತ ಏಕೇ ಓಂ ॥ ೨-೩-೧೮

ಈಶನನ್ನು ಉಪಜೀವ್ಯನೆಂದು ಜೀವನನ್ನು ಉಪಜೀವಕನೆಂದು ಅವರಿಬ್ಬರ ಸಂಬಂಧ ಹೇಳಲಾಗಿದೆ. ಅದನ್ನು ಈ ಅಧಿಕರಣದಲ್ಲಿ ಸಮರ್ಥಿಸುವುದರಿಂದ ಸಂಗತಿ ಇದೆ. ಜೀವನು ಈಶನ ಅಂಶನೆಂದಾಗಲೀ ಅನಂಶನೆಂದಾಗಲೀ ನಿರ್ಣಯಿಸಲು ಸಾಧ್ಯವಿದೆಯೋ ಇಲ್ಲವೋ ಎಂದು ಸಂದೇಹ. ಸಾಧ್ಯವಿಲ್ಲ ಎಂದು ಪೂರ್ವಪಕ್ಷ.

ಏಕೆಂದರೆ ''ಅಂಶಾ ಏವ ಹಿ ಇಮೇ ಜೀವಾಃ'' ಎಂದು ಅಂಶತ್ವಶ್ರುತಿ ಇರುವುದರಿಂದ ಅನಂಶತ್ವ ನಿರ್ಣಯ ಶಕ್ಯವಿಲ್ಲ. ''ನೈವಾಂಶೋ ನ ಸಂಬಂಧಃ ಪರಸ್ಯ'' ಎಂದು ಅನಂಶತ್ವಶ್ರುತಿ ಇರುವುದರಿಂದ ಅಂಶತ್ವ ನಿರ್ಣಯವೂ ಸಾಧ್ಯವಿಲ್ಲ, ಮತ್ತು ಜೀವನು ಪರಮಾತ್ಮನ ಅಂಶನೆಂದಾದರೆ ಮತ್ಸ್ಯಾದಿಗಳ ಸಾಮ್ಯವು ಬರಬೇಕಾಗುತ್ತದೆ. ಎರಡೂ ಶ್ರುತಿಗಳಿರುವುದರಿಂದ ವಿಕಲ್ಪ ಹೇಳೋಣ ಎಂದರೇ ಅದೂ ಸರಿಯಲ್ಲ. 'ವ್ರೀಹಿಭಿರ್ಯಜೇತ', 'ಯವೈ-ರ್ಯಜೇತ', ಎಂಬ ಪ್ರತ್ಯೇಕಶ್ರುತಿಗಳಲ್ಲಿ ಯವ ಮತ್ತು ವ್ರೀಹಿ ಎಂಬ ಎರಡು ದ್ರವ್ಯಗಳನ್ನು ಹೇಳಿರುವುದರಿಂದ ಅಲ್ಲಿ ವಿಕಲ್ಪ ಸಂಭವಿಸಬಹುದಾದರೂ ಪ್ರಕೃತದಲ್ಲಿ ಜೀವನೆಂಬ ಒಂದೇ ವಸ್ತುವಿನಲ್ಲಿ ಅಂಶತ್ವಾನಂಶತ್ವ ವಿಕಲ್ಪವು

ಸರಿಯಾಗುವುದಿಲ್ಲ. ಷೋಡಶಿಗ್ರಹಣ ಅಗ್ರಹಣದಂತೆ (ಅತಿರಾತ್ರೇ ಷೋಡಶಿನಂ ಗೃಹ್ಣಾತಿ ನಾತಿರಾತ್ರೇ ಷೋಡಶಿನಂ ಗೃಹ್ಣಾತಿ ಎಂಬ ವಿರುದ್ಧವಾಕ್ಯಗಳಿದ್ದರೂ ಅಲ್ಲಿ ವ್ಯವಸ್ಥಿತ ವಿಕಲ್ಪ ಎಂದು ವಿರೋಧ ಪರಿಹರಿಸಿದ್ದಾರೆ). ದೇಶಕಾಲಾದಿಭೇದೇನ ಎಂದರೆ ಕೆಲವು ದೇಶದಲ್ಲಿ ಕೆಲವು ಕಾಲದಲ್ಲಿ ಕೆಲವು ಜೀವರು, ಅಂಶರು ಇತರ ದೇಶಕಾಲಗಳಲ್ಲಿ ಇತರ ಜೀವರು ಅನಂಶರು ಎಂಬ ವ್ಯವಸ್ಥಿತ ವಿಕಲ್ಪವನ್ನು ಹೇಳೋಣ ಎಂದರೆ ಹಾಗೆ ಹೇಳಲು ವಿಶೇಷ ಪ್ರಮಾಣವಿಲ್ಲವಾದ್ದರಿಂದ ಹಾಗೆ ಹೇಳಲು ಬರುವುದಿಲ್ಲ ಆದ್ದರಿಂದ ಎರಡೂ ಶ್ರುತಿಗಳು ಅಪ್ರಮಾಣ.

**ಸಿದ್ಧಾಂತ** :- ಮಕ್ಕಳು ತಂದೆ ತಾಯಿಗಳಿಂದ ಪೋಷಿತರಾಗುವ ಪ್ರಯುಕ್ತ ಅವರಿಂದ ಉಪಜೀವಕರಾಗಿದ್ದಾರೆ ಮತ್ತು ತಾಯಿಯ ಗರ್ಭದಲ್ಲಿ ಇದ್ದದ್ದರಿಂದ ತಂದಂತರ್ಭೂತರಾದ ಪ್ರಯುಕ್ತ ಉಪಜೀವಕರಾಗಿದ್ದಾರೆ. ಆದ್ದರಿಂದ ತತ್ಸಂಬಧಿಗಳಾದ್ದರಿಂದ ಅಂಶರಾಗಿದ್ದಾರೆ. ಅದರಂತೆ ಜೀವರು ಈಶನಿಂದ ಪೋಷಿತರಾದ್ದರಿಂದ ಮತ್ತು ತದ್ಗರ್ಭವಾಸಿಗಳಾಗಿ ತದಂತರ್ಭೂತರಾದ ಪ್ರಯುಕ್ತ ಉಪಜೀವಕರಾದ ಪ್ರಯುಕ್ತ ತತ್ಸಂಬಂಧಿಗಳಾದ್ದರಿಂದ ಅಂಶರೇ ಆಗಿದ್ದಾರೆ. ಅಥವಾ ಜೀವರು ಈಶನಿಗಿಂತ ನ್ಯೂನರಾಗಿ ಕಿಂಚಿತ್ ತತ್ಸದೃಶರಾದ್ದರಿಂದ ಅಂಶರೇ ಆಗಿದ್ದಾರೆ, ತತ್ಸಂಬಂಧಿತ್ವರೂಪ ಅಂಶತ್ವಕ್ಕೆ ಅಂಶೋ ಹ್ಯೇಷ ಪರಸ್ಯ ಎಂದು ಉಪಕ್ರಮಿಸಿ ''ನಾನಾ ಹಿ ಏನಂ ವ್ಯಪದಿಶಂತಿ ಪಿತೇತಿ ಪುತ್ರೇತಿ ಭ್ರಾತೇತಿ'' ಎಂದು ನಾನಾಪ್ರಕಾರವಾದ ಸಂಬಂಧವನ್ನು ಹೇಳುವ ಶ್ರುತಿಯೇ ಆಧಾರವಾಗಿದೆ. ಅದೇ ರೀತಿ ''ಅನ್ಯಃ ಪರಃ ಅನ್ಯೋ ಜೀವಃ'' ಎಂಬ ಭೇದ ಶ್ರುತಿ ಹಾಗೂ ''ಬ್ರಹ್ಮದಾಶಾ ಬ್ರಹ್ಮಕಿತವಾಃ'' ಎಂಬ ಅಭೇದಶ್ರುತಿ ಇವುಗಳ ವಿರೋಧವನ್ನು ಪರಿಹರಿಸಲು ಜೀವನು ಪರಮಾತ್ಮನಿಗಿಂತ ನ್ಯೂನ ಮತ್ತು ಸದೃಶ ಎಂದು ಒಪ್ಪಬೇಕಾಗುವುದರಿಂದ ಈ ಎರಡು ಶ್ರುತಿಗಳು ಎರಡನೇ ವಿಧವಾದ ಅಂಶತ್ವಕ್ಕೆ ಪ್ರಮಾಣವಾಗುತ್ತವೆ ''ಪಾದೋಽಸ್ಯ ವಿಶ್ವಾ ಭೂತಾನಿ'' ಎಂಬ ಮತ್ತು ''ಮಮೈವಾಂಶೋ ಜೀವಲೋಕೇ'' ಎಂಬ ಅಂಶತ್ವ ಹೇಳುವ ಶ್ರುತಿ ಇರುವುದರಿಂದ ಅನಂಶತ್ವ ಶ್ರುತಿಯು ಸ್ವರೂಪಾಂಶತ್ವ ನಿಷೇಧಪರವಾಗಿದೆ ಎನ್ನಬೇಕು. ಜೀವರು ಭಗವದಂಶರಾದ ಮತ್ಸ್ಯಾದಿಗಳಿಗೆ ಸಮಾನರಾಗಬೇಕಾದೀತು ಎಂಬ ಆಪತ್ತಿಯೂ ಇಲ್ಲ. ತೇಜೋಽಭಿಮಾನಿ ದೇವತೆಯ

ಅಂಶವಾದ ಕಾಲಾಗ್ನಿದೇವತೆಗೂ, ಖದ್ಯೋತಾಭಿಮಾನಿ ದೇವತೆಗೂ ಅಂಶತ್ವ-ವಿದ್ದರೂ ಸಾಮ್ಯವಿಲ್ಲ. ಏಕೆಂದರೆ ಕಾಲಾಗ್ನಿದೇವತೆಯು ಸ್ವರೂಪಾಂಶವಾಗಿದೆ. ಖದ್ಯೋತಾಭಿಮಾನಿ ದೇವತೆಯು ಭಿನ್ನಾಂಶವಾಗಿದೆ. ಅದರಂತೆ ಪ್ರಕೃತ-ದಲ್ಲಿಯೂ ''ಏತೇ ಸ್ವಾಂಶಕಲಾಃ ಪುಂಸಃ'' ಎಂಬ ಭಾಷ್ಯೋಕ್ತ ಸ್ಮೃತಿಯಂತೆ ಮತ್ಸ್ಯಾದಿಗಳು ಸ್ವರೂಪಾಂಶ ಜೀವರು ಭಿನ್ನಾಂಶ ಎಂದು ವ್ಯತ್ಯಾಸವಿರು-ವುದರಿಂದ ಮತ್ಸ್ಯಾದಿಸಾಮ್ಯಪ್ರಸಂಗವಿಲ್ಲ. ಮತ್ತೂ ಸೂರ್ಯಮಂಡಲಾಭಿ-ಮಾನಿದೇವತೆಯ ಅಂಶವಾದ ಪ್ರಭಾಭಿಮಾನಿದೇವತೆಯು ಹಾಗೂ ನೇತ್ರ-ಗೋಲಕಕ್ಕೆ ಅಭಿಮಾನಿಯಾದ ಒಬ್ಬ ಅಪಭ್ರಷ್ಟದೇವತೆಗೂ ಅಂಶತ್ವವಿದ್ದರೂ ಅಪಭ್ರಷ್ಟದೇವತೆಯ ಪ್ರವೃತ್ತ್ಯಾದಿಗಳು ಅಂಶಿಯಾದ ಸೂರ್ಯನ ಅಧೀನ. ಆದರೆ ಪ್ರಭಾಭಿಮಾನಿಯಾದ ಅಂಶದೇವತೆಯ ಪ್ರವೃತ್ತ್ಯಾದಿಗಳು ಅಂಶಿಯಾದ ಸೂರ್ಯನ ಅಧೀನವಲ್ಲ ಅದರಂತೆ ಪ್ರಕೃತದಲ್ಲಿಯೂ ಮತ್ಸ್ಯಾದಿಗಳ ಪ್ರವೃತ್ತಿಯ ಈಶಾಧೀನವಲ್ಲ. ಜೀವರ ಪ್ರವೃತ್ತಿಯು ಈಶಾಧೀನವಾಗಿದೆ. ಇದರಂತೆ ಮತ್ಸ್ಯಾದಿಗಳಿಗೆ ಪೂರ್ಣ ಶಕ್ತತ್ವ ಇದೆ. ಜೀವರಿಗೆ ಇಲ್ಲ ಮತ್ತು ಮತ್ಸ್ಯಾದಿಗಳಿಗೆ ಸ್ವರೂಪಾಂಶತ್ವವಿದೆ. ಜೀವರಿಗೆ ಪ್ರತಿಬಿಂಬಾಂಶತ್ವವಿದೆ. ಈ ವ್ಯತ್ಯಾಸವಿರುವುದರಿಂದಲೂ ಮತ್ಸ್ಯಾದಿಗಳ ಸಾಮ್ಯವಿಲ್ಲ. ಆದ್ದರಿಂದ ಎರಡೂ ಶ್ರುತಿಗಳು ಪ್ರಮಾಣವೇ ಆಗಿವೆ.

## ।। ಓಂ ಅದೃಷ್ಟಾನಿಯಮಾತ್ ಓಂ ।। ೨-೩-೧೯

ಮತ್ಸ್ಯಾದಿ ಅವತಾರರೂಪಕ್ಕೂ ಜೀವನಿಗೂ ಸಾಮ್ಯವಿಲ್ಲ ಎಂಬುದನ್ನು ಸಮರ್ಥಿಸಲು ಹೇಳಲ್ಪಟ್ಟ ಪ್ರತಿಬಿಂಬತ್ವವನ್ನು ಈ ಅಧಿಕರಣದಲ್ಲಿ ಆಕ್ಷೇಪಿಸು-ವುದರಿಂದ ಸಂಗತಿ. ಜೀವನು ಈಶನ ಪ್ರತಿಬಿಂಬವವೋ ಅಲ್ಲವೋ ಎಂದು ಸಂದೇಹ. ಅಲ್ಲ ಎಂದು ಪೂರ್ವಪಕ್ಷ. ''ನ ಸಂಬಧೋ ನಾಪೇಕ್ಷ್ಯಃ ಜೀವಃ ಪರಸ್ಯ'' ಎಂಬ ಶ್ರುತಿಯು ಈಶಜೀವರಿಗೆ ಬಿಂಬಪ್ರತಿಬಿಂಬಭಾವಸಂಬಂಧವನ್ನು ನಿಷೇಧಿಸಿದೆ ಮತ್ತು ಬಿಂಬನಾದ ಈಶನು ಒಬ್ಬನೇ. ಅವನಿಗೆ ಸುರ-ನರ-ಅಸುರ-ಪಶುಗಳು ಮುಂತಾದ ವೈಚಿತ್ರ್ಯದಿಂದ ಕೂಡಿದ ಜೀವರು (ಘಟಾದಿ-ಗಳು ಈಶನಿಗೆ ಹೇಗೆ ಪ್ರತಿಬಿಂಬವಲ್ಲವೋ ಅದರಂತೆ) ಪ್ರತಿಬಿಂಬವಾಗಲು ಶಕ್ಯವಿಲ್ಲ ಎಂಬುದಾಗಿ ಯುಕ್ತಿಯೂ ಉಪೋದ್ಬಲಕವಾಗಿದೆ. ಆದ್ದರಿಂದ

''ರೂಪಂ ರೂಪಂ ಪ್ರತಿರೂಪೋ ಬಭೂವ'' ಎಂದು ಪ್ರತಿಬಿಂಬತ್ವವನ್ನು ಹೇಳುವ ಶ್ರುತಿಯು ಸಯುಕ್ತಿಕವಾದ ಪೂರ್ವೋಕ್ತ ಶ್ರುತಿ ವಿರೋಧದಿಂದ ಅಪ್ರಮಾಣವಾಗಿದೆ

**ಸಿದ್ಧಾಂತ :-** ಬಿಂಬವು ಏಕರೂಪವಾಗಿದ್ದರೂ ಜೀವರ ಅನಾದಿ ಸ್ವರೂಪೋ-ಪಾಧಿ ಅವಿದ್ಯಾ ಕರ್ಮಾದಿಗಳ ವೈಚಿತ್ರ್ಯದಿಂದಾಗಿ ಪ್ರತಿಬಿಂಬಗಳಲ್ಲಿ ವೈಚಿತ್ರ್ಯ ಬರಬಹುದಾದ್ದರಿಂದ ''ರೂಪಂ ರೂಪಂ'' ಎಂಬ ಶ್ರುತಿಯ ಪ್ರಕಾರ ಜೀವನು ಪ್ರತಿಬಿಂಬನೇ ಆಗಿದ್ದಾನೆ. ''ನ ಸಂಬಂಧಃ'' ಎಂಬ ಶ್ರುತಿಯು ಭಿನ್ನೋಪಾಧಿ ನಿಮಿತ್ತ ಪ್ರತಿಬಿಂಬತ್ವವನ್ನು ನಿಷೇಧಿಸುತ್ತದೆ ಹೊರತು ಸ್ವರೂಪೋಪಾಧಿ ನಿಮಿತ್ತ ಪ್ರತಿಬಿಂಬತ್ವವನ್ನಲ್ಲ. ಈ ಪಾದದ ಪ್ರತಿಅಧಿಕರಣದಲ್ಲಿಯೂ ಸಮನ್ವಯಾಕ್ಷೇಪ ಸಮಾಧಾನಗಳೇ ಫಲ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಎರಡನೆಯ ಅಧ್ಯಾಯದ ಮೂರನೆಯ ಪಾದವು ಸಮಾಪ್ತವಾಯಿತು.**

# ಎರಡನೇ ಅಧ್ಯಾಯದ ನಾಲ್ಕನೆಯ ಪಾದ

**ಪಾದ ಸಂಗತಿ :-** ದುರ್ಬಲ ಭಂಗವಾದ ಬಳಿಕ ಪ್ರಬಲ ಪ್ರವೃತ್ತಿಯಾಗುತ್ತದೆ ಎಂಬ ನ್ಯಾಯದ ಪ್ರಕಾರವಾಗಿ ಈ ಪಾದದಲ್ಲಿ ಯುಕ್ತ್ಯುಪೇತ ಶ್ರುತಿ-ವಿರೋಧವನ್ನು ಪರಿಹರಿಸಲಾಗುತ್ತದೆ.

## ॥ ಓಂ ತಥಾ ಪ್ರಾಣಾಃ ಓಂ ॥ ೨-೪-೧

ಈ ಅಧಿಕರಣದಲ್ಲಿ ಇಂದ್ರಿಯಗಳಿಗೆ ಉತ್ಪತ್ತಿ ಇದೆಯೋ ಇಲ್ಲವೋ ಎಂದು ಸಂದೇಹ. ''ಪ್ರಾಣಾ ಏವ ಇದಮಗ್ರ ಆಸುಃ'' (ಸೃಷ್ಟಿಯ ಆದಿಯಲ್ಲಿ ಇಂದ್ರಿಯಗಳು ಮಾತ್ರ ಇದ್ದವು) ಎಂದು ಶ್ರುತಿಯಿರುವುದರಿಂದ ಇಂದ್ರಿಯ-ಗಳಿಗೆ ಉತ್ಪತ್ತಿ ಇಲ್ಲ ಎಂದು ಸಿದ್ಧಾಂತ. ಯದ್ಯಪಿ ''ಸ ಇದಂ ಸರ್ವಮಸೃಜತ'' ಎಂದು ಎಲ್ಲದಕ್ಕೂ ಉತ್ಪತ್ತಿಯನ್ನು ಹೇಳುವ ಶ್ರುತಿ ಇದೆ. ಆದರೆ ಅದು

ಸಾಮಾನ್ಯವನ್ನು ಬೋಧಿಸಿ ಅದರ ವ್ಯವಧಾನದಿಂದ ಬಳಿಕ ವಿಶೇಷದಲ್ಲಿ ಪರ್ಯವಸಾನವಾಗುತ್ತದೆ. ಆದರೆ ''ಪ್ರಾಣಾ ಏವ'' ಎಂಬ ಶ್ರುತಿಗೆ ಸಾಮಾನ್ಯ ವ್ಯವಧಾನವಿಲ್ಲವಾದ್ದರಿಂದ ಇದು ಸ್ಪಷ್ಟಾರ್ಥಉಳ್ಳದ್ದಾದ್ದರಿಂದ ನಿರವಕಾಶ. ಇದ್ದರಿಂದ ಸಾಮಾನ್ಯ ಶ್ರುತಿಯು ಬಾಧಿತವಾಗುತ್ತದೆ. ''ಏತಸ್ಮಾತ್ ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ'' ಎಂದು ಸ್ಪಷ್ಟಾರ್ಥಕವಾದ ಶ್ರುತಿಯೇ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಹೇಳಿದರೂ 'ನೋಪಾದಾನಂ ಹಿ ಇಂದ್ರಿಯಾಣಾಂ'' ಎಂಬ ಸ್ಮೃತಿಯ ಪ್ರಕಾರ ಇಂದ್ರಿಯಗಳಿಗೆ ಉಪಾದಾನ ಕಾರಣವೇ ಇಲ್ಲವಾದ್ದರಿಂದ ನಿರುಪಾದಾನತ್ವ ಯುಕ್ತಿಯಿಂದ ವಿರೋಧ ಬರುವ ಪ್ರಯುಕ್ತ ಆ ಶ್ರುತಿಯು ಅಪ್ರಮಾಣ

**ಸಿದ್ಧಾಂತ** :- 'ಸ ಇದಂ ಸರ್ವಮಸೃಜತ' ಎಂಬ ಸಾಮಾನ್ಯ ಶ್ರುತಿ-ಸಹಿತವಾದ 'ಸ ಪ್ರಾಣಮಸೃಜತ' 'ಸ ಪ್ರಾಣಾನ್' 'ಏತಸ್ಮಾತ್ ಜಾಯತೇ ಪ್ರಾಣಃ' ಇತ್ಯಾದಿ ವಿಶೇಷ ಶ್ರುತಿಗಳಿಂದ ಹಾಗೂ ವಿಯದಧಿಕರಣದಲ್ಲಿ ಹೇಳಿದ ಅಲ್ಪಶಕ್ತಿತ್ವ ಎಂಬ ಯುಕ್ತಿ ಇಂದಲೂ ಇಂದ್ರಿಯಗಳಿಗೆ ಜನ್ಮ ಸಿದ್ಧವಾಗುತ್ತದೆ. ಅನಾದಿತ್ವಶ್ರುತಿ ಹಾಗೂ ನಿರುಪಾದಾನತ್ವ ಸ್ಮೃತಿಯು 'ನಿತ್ಯಾ-ನ್ಯೇತಾನಿ ಸೌಕ್ಷ್ಮ್ಯೇಣ' ಎಂಬ ಸ್ಮೃತಿಯ ಪ್ರಕಾರ ಸೂಕ್ಷ್ಮರೂಪಕ್ಕೆ ಸಂಬಂ-ಧಿಸಿದ್ದಾಗಿದೆ ಆದ್ದರಿಂದ ಅವು ಸಾವಕಾಶಗಳಾಗಿವೆ. ಸೂಕ್ಷ್ಮರೂಪವಾಗಿದ್ದ ಇಂದ್ರಿಯಗಳಿಗೆ ಸೃಷ್ಟಿಕಾಲದಲ್ಲಿ ಭೂತಾವಯವಗಳಿಂದ ಉಪಚಯರೂಪ ಜನ್ಮ ಹೇಳುವ ಶ್ರುತಿಗಳಿಗೆ ಯಾವ ಬಾಧವಾಗಲೀ ಅಪ್ರಾಮಾಣ್ಯವಾಗಲೀ ಇಲ್ಲ.

ಈ ಪಾದದ ಪ್ರತಿ ಅಧಿಕರಣಕ್ಕೂ ಹಿಂದಿನಂತೆ ಸಮನ್ವಯಾಕ್ಷೇಪ ಮತ್ತು ಸಮಾಧಾನಗಳೇ ಫಲ.

## ॥ ಓಂ ತತ್ಪ್ರಾಕ್ ಶ್ರುತೇಶ್ಚ ಓಂ ॥ ೨-೪-೨

ಪೂರ್ವಾಧಿಕರಣದಲ್ಲಿ ಪ್ರಕೃತವಾದ ಇಂದ್ರಿಯಗಳಲ್ಲಿ ಸೇರಿದ ಮನಸ್ಸಿಗೆ ಈ ಅಧಿಕರಣದಲ್ಲಿ ಜನ್ಮವನ್ನು ಸಮರ್ಥಿಸುವುದರಿಂದ ಸಂಗತಿ ಇದೆ.

ಮನಸ್ಸಿಗೆ ಉತ್ಪತ್ತಿ ಇದೆಯೋ ಇಲ್ಲವೋ ಎಂದು ಸಂದೇಹ- ''ನಿತ್ಯಂ ಮನೋಽನಾದಿತ್ವಾತ್ ನ ಹ್ಯಮನಾಃ ಪುಮಾನ್ ತಷ್ಠತಿ ಅನಿತ್ಯಾನಿ ಅನ್ಯಾನಿ''

ಎಂಬುದಾಗಿ ಬೇರೆ ಇಂದ್ರಿಯಗಳಿಗೆ ಅನಿತ್ಯತ್ವವನ್ನು ಹೇಳಿ ವಿಶೇಷವಾಗಿ ಮನಸ್ಸಿಗೆ ನಿತ್ಯತ್ವವನ್ನು ಹೇಳಿದ್ದರಿಂದ ಇದು ವಿಶೇಷಶ್ರುತಿ ಎನಿಸಿದೆ. ಇದರ ವಿರೋಧ ಬರುವ ಪ್ರಯುಕ್ತ ಮನೋಜನ್ಮಶ್ರುತಿಯನ್ನು ಇಟ್ಟುಕೊಂಡು ಸೂಕ್ಷ್ಮರೂಪದಿಂದ ನಿತ್ಯ - ಸ್ಥೂಲರೂಪದಿಂದ ಅನಿತ್ಯ ಎಂದು ಕೂಡಿಸಲು ಬರುವುದಿಲ್ಲ. ಮತ್ತು ಮನಸ್ಸಿಗೆ ಸಾದಿತ್ವವನ್ನು ಹೇಳಿದರೆ ತನ್ಮೂಲಕವಾದ ಸಂಸಾರಕ್ಕೂ ಸಾದಿತ್ವ ಬಂದು ಅನಾದಿತ್ವಭಂಗ ಬರುತ್ತದೆ ಆದ್ದರಿಂದ ಮನೋಜನ್ಮಶ್ರುತಿಯು ಅಪ್ರಮಾಣ

**ಸಿದ್ಧಾಂತ** :- ಮನಸ್ಸಿಗೂ ಜನ್ಮವಿದೆ. ''ಮನಃ ಸರ್ವೇಂದ್ರಿಯಾಣಿ ಚ'' ಎಂಬುದಾಗಿ ಇಂದ್ರಿಯಗಳಿಗಿಂತ ಪೃಥಕ್ಕಾಗಿ ಮನಸ್ಸಿಗೆ ಜನ್ಮ ಹೇಳುವ ವಿಶೇಷ ಶ್ರುತಿಯಿರುವುದರಿಂದ.

**ಪ್ರಶ್ನೆ**:- ಮನಸ್ಸಿಗೆ ನಿತ್ಯತ್ವವನ್ನು ಹೇಳುವ ''ನಿತ್ಯಂ ಮನಃಅನಾದಿತ್ವಾತ್...'' ಈ ಶ್ರುತಿಯ ವಿರೋಧ ಬರುವುದಿಲ್ಲವೇ?

**ಉತ್ತರ** :- ಇಲ್ಲ. ಮನಸ್ಸು ಅನಾದಿ. ಅದರ ಅನಾದಿತ್ವಕ್ಕೆ ಭಂಗ ಬರದಂತೆ ಇತರ ಇಂದ್ರಿಯಗಳಿಗಿಂತಲೂ ಅಲ್ಪ ಉಪಚಯವಾಗುವುದರಿಂದ ಮನಸ್ಸನ್ನು ನಿತ್ಯ ಎಂದು ಹೇಳಲಾಗಿದೆ. ಮನಸ್ಸನ್ನು ಅನಾದಿ ಎಂದು ಒಪ್ಪಿದ್ದರಿಂದಲೇ, ಮನಸ್ಸು ಸಾದಿಯಾದರೆ ಸಂಸಾರವೂ ಸಾದಿಯಾಗಬೇಕು ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ.

## ॥ ಓಂ ತತ್ಪೂರ್ವಕತ್ವಾದ್ವಾಚಃ ಓಂ ॥ ೨-೪-೩

ಹಿಂದಿನ ಅಧಿಕರಣದಲ್ಲಿ ಮನಸ್ಸಿನ ಉತ್ಪತ್ತಿ ಹೇಳಲ್ಪಟ್ಟಿದೆ. ಇಂದ್ರಿಯ-ಗಳಲ್ಲೊಂದಾದ ಈ ಮನಸ್ಸಿನಿಂದ ವಾಗಿಂದ್ರಿಯಕ್ಕೆ ಜನ್ಮವಿದೆ ಎಂಬುದರ ಆಕ್ಷೇಪಪೂರ್ವಕ ಸಮರ್ಥನವು ಈ ಅಧಿಕರಣದಲ್ಲಿ ಮಾಡಲಾಗುತ್ತಿದೆ-ಯಾದ್ದರಿಂದ ಸಂಗತಿಯಿದೆ.

ವಾಗಿಂದ್ರಿಯಕ್ಕೆ ಉತ್ಪತ್ತಿ ಇದೆಯೋ ಇಲ್ಲವೋ ಎಂಬುದೇ ಸಂದೇಹ. ಉತ್ಪತ್ತಿ ಇಲ್ಲ ಎಂಬುದೇ ಪೂರ್ವಪಕ್ಷ ಏಕೆಂದರೆ, ''ವಾಗ್ವಾವ ನಿತ್ಯಾ

ನಹ್ಯೇಷೋತ್ಪದ್ಯತೇ ಅಸ್ಯಾಂ ಹಿ ಶ್ರುತಿರವತಿಷ್ಠತೇ'' ಎಂಬ ಶ್ರುತಿಯು ವಾಗಿಂದ್ರಿಯಕ್ಕೆ ನಿತ್ಯತ್ವವನ್ನು ಹೇಳುತ್ತಿದೆ.

ಜೊತೆಗೆ ಈ ಶ್ರುತಿಯು ಸಯುಕ್ತಿಕವಾಗಿದೆ. ಅದೇನೆಂದರೆ ಈ ಶ್ರುತಿಯ ವಾಕ್ಯಶೇಷದಲ್ಲಿ ಅಸ್ಯಾಂ ಹಿ ಶ್ರುತಿರವತಿಷ್ಠತೇ ಎಂಬುದಾಗಿ ಸದಾ ವೇದೋ-ಚ್ಚಾರಣಸಾಮರ್ಥ್ಯ ಎಂಬ ವೇದಾಶ್ರಯತ್ವವು ವಾಗಿಂದ್ರಿಯಕ್ಕೆ ಹೇಳಲ್ಪಟ್ಟಿದೆ. ಇದೇ ಯುಕ್ತಿ. ವೇದವು ನಿತ್ಯವಾದ್ದರಿಂದ ಅದಕ್ಕೆ ಆಶ್ರಯವಾದದ್ದೂ (ವಾಗಿಂದ್ರಿಯ) ನಿತ್ಯವೇ ಆಗಬೇಕು.

ಈ ವೇದಾಶ್ರಯತ್ವ ಎಂಬ ಯುಕ್ತಿಯ ವಿರೋಧ ಬರುವುದರಿಂದಲೇ, ಹಿಂದೆ ಹೇಳಿದಂತೆ ಜನ್ಮಶ್ರುತಿಯು ಉಪಚಿತರೂಪಪರ - ಅಜನ್ಮಶ್ರುತಿಯು ಸೂಕ್ಷ್ಮರೂಪಪರ ಎಂದು ವ್ಯವಸ್ಥೆ ಮಾಡಲೂ ಸಾಧ್ಯವಿಲ್ಲ. ವಾಗಿಂದ್ರಿಯಕ್ಕೆ ಉಪಚಯವನ್ನು ಹೇಳುವುದೂ ವೇದೋಚ್ಚಾರಣಸಾಮರ್ಥ್ಯ ಬರಲಿ ಎಂಬ ಉದ್ದೇಶ್ಯದಿಂದಲೇ. ಆದರೆ ಆ ವೇದೋಚ್ಚಾರಣ ಸಾಮರ್ಥ್ಯ ನಿತ್ಯವಾಗಿ ವಾಗಿಂದ್ರಯಕ್ಕೆ ಇರುವುದರಿಂದ ಉಪಚಯವನ್ನು ಹೇಳುವುದೂ ವ್ಯರ್ಥ.

**ಪ್ರಶ್ನೆ:-** ವಾಗ್ವಾವ ನಿತ್ಯಾ ಎಂಬಲ್ಲಿರುವ ವಾಕ್ ಶಬ್ದಕ್ಕೆ ವೇದ ಎಂದು ಅರ್ಥ. ಹಾಗಾಗಿ ಈ ಶ್ರುತಿಯು ವೇದಕ್ಕೆ ನಿತ್ಯತ್ವವನ್ನು ಹೇಳುತ್ತಿದೆ. ಈ ಶ್ರುತಿಯಿಂದ ಇಂದ್ರಿಯ ನಿತ್ಯತ್ವ ಹೇಗೆ ಸಿದ್ಧವಾಗುತ್ತದೆ?

**ಉತ್ತರ :-** ಈ ಶ್ರುತಿಯಲ್ಲಿರುವ ವಾಕ್ ಶಬ್ದಕ್ಕೆ ವೇದ ಎಂದ ಅರ್ಥಮಾಡಲು ಸಾಧ್ಯವಿಲ್ಲ ಏಕೆಂದರೆ ವಾಕ್ಯಶೇಷದಲ್ಲಿ ವಾಕ್ ಗೆ ವೇದಾಶ್ರಯವು ಹೇಳಲ್ಪಟ್ಟಿದೆ. ವಾಕ್ ಶಬ್ದಕ್ಕೆ ವೇದ ಎಂದರ್ಥವಾದರೆ ವೇದವೇ ವೇದಕ್ಕೆ ಆಶ್ರಯ ಎಂದಾ-ಗುತ್ತದೆ. ಅದು ಸರಿಯಲ್ಲ. ಹಾಗಾಗಿ ಇಲ್ಲಿರುವ ವಾಕ್ ಶಬ್ದಕ್ಕೆ ಇಂದ್ರಿಯ ಎಂದೇ ಅರ್ಥ.

ಹೀಗೆ ಪ್ರಬಲವಾದ ನಿತ್ಯತ್ವ ಶ್ರುತಿ ಇರುವುದರಿಂದ ವಾಗಿಂದ್ರಿಯಕ್ಕೆ ಜನ್ಮ ಹೇಳುವ ಶ್ರುತಿ (''ಮನಸ್ಸರ್ವೇಂದ್ರಿಯಾಣಿ ಚ'') ಅಪ್ರಮಾಣ ಎಂದೇ ಹೇಳಬೇಕು.

**ಸಿದ್ಧಾಂತ :-** ವಾಗಿಂದ್ರಿಯಕ್ಕೆ ಮನಸ್ಸಿನಿಂದ ಉತ್ಪತ್ತಿಯಿದೆ. ಏಕೆಂದರೆ ''ಮನ ಏವ ಪೂರ್ವರೂಪಂ'' ವಾಗುತ್ತರರೂಪಂ ಎಂಬ ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಯಿರುವುದರಿಂದ. ಇಲ್ಲಿರುವ ವಾಕ್ ಶಬ್ದಕ್ಕೆ ವ್ಯವಹಾರ ಎಂದರ್ಥ ಮಾಡಬಹುದಲ್ಲಾ? ಎಂದರೆ, ಇಲ್ಲ. ಈ ಶ್ರುತಿಯ ಪೂರ್ವದಲ್ಲಿ ವಾಚಾ ವ್ಯಾಹರತಿ ಎಂಬ ವಾಕ್ಯವಿದೆ. ಹಾಗೇ ಮುಂದೆ ಮನಸೋವಾವವಾಗುತ್ತದ್ಯತೇ ವಾಚಾ ವ್ಯಾಹರಣಂ ಎಂಬ ವಾಕ್ಯವಿದೆ. ವಾಕ್ ಶಬ್ದಕ್ಕೆ ವ್ಯವಹಾರ ಎಂದರ್ಥ ಇಟ್ಟುಕೊಂಡರೆ ಈ ಎರಡೂ ವಾಕ್ಯಗಳ ಅರ್ಥ ಕೂಡುವುದಿಲ್ಲ. ಹಾಗಾಗಿ ಇಂದ್ರಿಯ ಎಂದೇ ಅರ್ಥಮಾಡಬೇಕು. ಆದ್ದರಿಂದಲೇ ಮಧ್ಯದಲ್ಲಿರುವ ಪ್ರಕೃತ ಶ್ರುತಿಯಲ್ಲೂ ವಾಕ್ ಶಬ್ದಕ್ಕೆ ಇಂದ್ರಿಯ ಎಂಬ ಅರ್ಥವೇ ಸಿದ್ಧವಾಗುತ್ತದೆ.

ವಾಗಿಂದ್ರಿಯಕ್ಕೆ ಉತ್ಪತ್ತಿ ಒಪ್ಪಿದರೆ ನಿತ್ಯ ವೇದಾಶ್ರಯತ್ವ ಹೇಗೆ ಕೂಡುತ್ತದೆ ಎಂದರೆ, ''ವಾಗಿಂದ್ರಿಯಸ್ಯ ನಿತ್ಯತ್ವಂ ಶ್ರುತಿಸನ್ನಿಧಿಯೋಗ್ಯತಾ'' ಎಂಬ ಸ್ಮೃತಿಯಲ್ಲಿ ಹೇಳಿದಂತೆ ನಿತ್ಯ ವೇದಾಶ್ರಯತ್ವ ಎಂದರೆ ನಿತ್ಯವೇದಾಶ್ರಯ-ಯೋಗ್ಯತ್ವ ಎಂದರ್ಥ. ಹೀಗೆ ನಿತ್ಯತ್ವ ಶ್ರುತಿಯನ್ನು ಔಪಚಾರಿಕ ಎಂದು ಕೂಡಿಸಬಹುದು. ವಾಗಿಂದ್ರಿಯಕ್ಕೆ ವೇದಾಶ್ರಯಯೋಗ್ಯತಾ ನಿತ್ಯದಲ್ಲಿಯಾ ಇದೆ. ಆದರೂ ಉಚ್ಚಾರಣಶಕ್ತಿ ಬರಬೇಕಾದರೆ ಉಪಚಯವಾಗಬೇಕು. ಹಾಗಾಗಿ ಉಪಚಯ ವ್ಯರ್ಥವಲ್ಲ.

ಹೀಗೆ ಜನ್ಮಶ್ರುತಿಯ ಬಲದಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯಿದೆ ಎಂದು ಸಿದ್ಧವಾಯಿತು.

## ॥ ಓಂ ಸಪ್ತ ಗತೇರ್ವಿಶೇಷಿತತ್ವಾಚ್ಚ ಓಂ ॥ ೨-೪-೪

ಹಿಂದೆ ಇಂದ್ರಿಯಗಳ ಧರ್ಮಿತ್ವವನ್ನು ಆಶ್ರಯಿಸಿ ಉತ್ಪತ್ತಿ ಎಂಬ ಧರ್ಮ ಇದೆಯೋ ಇಲ್ಲವೋ ಎಂಬ ವಿಚಾರ ಮಾಡಲಾಗಿತ್ತು. ಈಗ ಇಂದ್ರಿಯಗಳ ಧರ್ಮವಾದ ಸಂಖ್ಯೆಯನ್ನು ಆಶ್ರಯಿಸಿ ಉತ್ಪತ್ತಿ ವಿಚಾರ ಮಾಡಲಾಗುತ್ತಿದೆ ಹೀಗೆ ಸಂಗತಿಯಿದೆ.

ಇಂದ್ರಿಯಗಳು ಏಳು ಅಥವಾ ಹನ್ನೆರಡು ಎಂದು ನಿರ್ಣಯಿಸಲು ಸಾಧ್ಯವಿಲ್ಲವೋ ಅಥವಾ ಹನ್ನೆರಡು ಎಂದು ನಿರ್ಣಯಿಸಲು ಸಾಧ್ಯವಿದೆಯೊ ಎಂಬುದೇ ಸಂದೇಹ. ನಿರ್ಣಯ ಸಾಧ್ಯವಿಲ್ಲ ಎಂದು ಪೂರ್ವಪಕ್ಷ. ಏಕೆಂದರೆ ''ಸಪ್ತ ಪ್ರಾಣಾಃ ಪ್ರಭವಂತಿ'' ಎಂಬ ಶ್ರುತಿಯು ಇಂದ್ರಿಯಗಳು ಏಳು ಎಂದು ಹೇಳುತ್ತಿದೆ. ''ದ್ವಾದಶ ವಾ ಏತೇ ಪ್ರಾಣಾಃ ದ್ವಾದಶಮಾಸಾಃ ದ್ವಾದಶಾದಿತ್ಯಾ'' ಎಂಬ ಶ್ರುತಿಯು ಇಂದ್ರಿಯಗಳು ಹನ್ನೆರಡು ಎಂದು ಹೇಳುತ್ತಿದೆ. ಹೀಗೆ ಶ್ರುತಿಗಳು ವಿರುದ್ಧಸಂಖ್ಯೆಯನ್ನು ತಿಳಿಸುತ್ತಿರುವುದರಿಂದ ನಿರ್ಣಯ ಸಾಧ್ಯವಿಲ್ಲ.

**ಪ್ರಶ್ನೆ :-** ಇಂದ್ರಿಯಗಳು ಹನ್ನೆರಡೇ. ಶತೇ ಪಂಚಾಶತ್ ನ್ಯಾಯದಿಂದ (ನೂರು ರುಪಾಯಿ ಇದ್ದವನ ಬಳಿ ಐವತ್ತು ರುಪಾಯಿ ಇರಲೇಬೇಕು) ಇಂದ್ರಿಯಗಳು ಏಳು ಎಂಬುದು ಕೂಡುತ್ತದೆ. ಇದರಲ್ಲಿ ಯಾವುದೇ ವಿರೋಧವಿಲ್ಲ.

**ಪರಿಹಾರ :-** ಇಂದ್ರಿಯಗಳು ಏಳು ಎಂದು ಹೇಳಲು ಒಂದು ಅವಚ್ಛೇದಕ (ಪೃಥಕ್ಕರಿಸುವ ಧರ್ಮ) ಬೇಕು. ಅಂತಹದ್ದು ಯಾವುದೂ ಇಲ್ಲ. ಹಾಗಾಗಿ ಏಳು ಎಂದು ಹೇಳಿದ್ದು ಕೂಡುವುದಿಲ್ಲ. ಈ ಏಳು ಇಂದ್ರಿಯಗಳ ಜೊತೆಗೆ ಉಳಿದ ಐದನ್ನು ಹೇಳದೇ ಇರುವುದಕ್ಕೆ ಕಾರಣವಿಲ್ಲವಾದ್ದರಿಂದ ಆ ಐದು ಇಂದ್ರಿಯಗಳು ಇಲ್ಲವೇ ಇಲ್ಲ ಎಂಬ ಬುದ್ಧಿ ಬರುತ್ತದೆ.

ಸಪ್ತತ್ವ ಶ್ರುತಿಯು ಯುಕ್ತಿಸಹಿತವಾಗಿದೆಯಾದ್ದರಿಂದ ಪ್ರಬಲವಾಗಿದೆ. ಹೇಗೆಂದರೆ, ಸಪ್ತೈವ ಮಾರುತಾ ಬಾಹ್ಯೇ ಪ್ರಾಣಾಸ್ಸಪ್ತ ತಥಾತ್ಮನಿ ಎಂಬ ಸ್ಮೃತಿಯಲ್ಲಿ ಇಂದ್ರಿಯಾಭಿಮಾನಿಗಳು ಏಳು ಎಂದು ಹೇಳಿದೆ. ಅಭಿಮಾನಿ-ದೇವತೆಗಳು ಏಳು ಜನ ಆದ್ದರಿಂದ ಅವರಿಂದ ಅಭಿಮನ್ಯಮಾನವಾದ ಇಂದ್ರಿಯ-ಗಳೂ ಏಳೇ ಆಗಬೇಕು. ಅಭಿಮಾನಿ ಹಾಗು ಅಭಿಮನ್ಯಮಾನವಾದ ವಸ್ತು ಇವೆರಡೂ ಯಾವಾಗಲೂ ಸಮಸಂಖ್ಯೆಯಲ್ಲಿರಬೇಕಾದ್ದರಿಂದ. ಇದೇ ಯುಕ್ತಿ.

ಇನ್ನು ಇಂದ್ರಿಯಗಳು ಹನ್ನೆರಡು ಎಂಬ ಶ್ರುತಿಯೂ ಪ್ರಬಲವಾಗಿದೆ. ಅದೂ ಸಯುಕ್ತಿಕವಾದ್ದರಿಂದ. ಹೇಗೆಂದರೆ, ದ್ವಾದಶತ್ವ ಶ್ರುತಿಯ ವಾಕ್ಯ-ಶೇಷದಲ್ಲಿ ದ್ವಾದಶಮಾಸಾ ದ್ವಾದಶಾದಿತ್ಯಾ ಎಂದಿದೆ. ಇಲ್ಲಿ ಇಂದ್ರಿಯಾಭಿ-ಮಾನಿಗಳು ಹನ್ನೆರಡು ಜನ ಎಂದು ಹೇಳಲಾಗಿದೆ. ಹಾಗಾಗಿ ಹಿಂದೆ ಹೇಳಿದಂತೆ ಇಂದ್ರಿಯಗಳೂ ಹನ್ನೆರಡು ಆಗಲೇಬೇಕು.

**ಪ್ರಶ್ನೆ** :- ದ್ವಾದಶ ಮಾಸಾ ದ್ವಾದಶಾದಿತ್ಯಾ ಎಂಬ ವಾಕ್ಯಶೇಷಕ್ಕೆ ಹನ್ನೆರಡು ಮಾಸಗಳು. ಅವಗಳಿಗೆ ಹೆನ್ನರಡು ಜನ ಆದಿತ್ಯರು ದೇವತೆಗಳು. ಎಂದಿಷ್ಟೇ ಅರ್ಥ. ಇದರಿಂದ ಇಂದ್ರಿಯಾಭಿಮಾನಿಗಳು ಹನ್ನೆರಡು ಎಂದು ಹೇಗೆ ಸಿದ್ಧವಾಗುತ್ತದೆ?

**ಪರಿಹಾರ** :- ಮಾಸನಿಯಾಮಕರಾದ ಹನ್ನೆರಡು ಜನ ಆದಿತ್ಯರೇ ಹನ್ನೆರಡು ಇಂದ್ರಿಯಗಳಿಗೂ ದೇವತೆಗಳು ಎಂದು ಹೇಳುವುದೇ ಶ್ರುತಿಯ ಅಭಿಪ್ರಾಯವಾಗಿದೆ. ಹಾಗಲ್ಲದೇ ಹೋದರೆ ''ದ್ವಾದಶ ಮಾಸಾ'' ಎಂದ ಹೇಳಿದ್ದೇ ವ್ಯರ್ಥವಾಗುತ್ತದೆ. ಹೀಗೆ ಎರಡು ಶ್ರುತಿಗಳು ಪ್ರಬಲವಾಗಿದ್ದರಿಂದ ನಿರ್ಣಯ ಸಾಧ್ಯವಿಲ್ಲ.

**ಸಿದ್ಧಾಂತ** :- ಇಂದ್ರಿಯಗಳು ಹನ್ನೆರಡು ಎಂಬ ನಿರ್ಣಯ ಸಾಧ್ಯವಿದೆ. ಇಂದ್ರಿಯಗಳು ಹನ್ನೆರಡಾದರೂ ಏಳು ಎಂದು ಹೇಳಿದ್ದು ಕೂಡುತ್ತದೆ. ಹೇಗೆಂದರೆ, ''ಗುಹಾಶಯಾಂ ನಿಹಿತಾಃ ಸಪ್ತ ಸಪ್ತ'' ಎಂಬ ವಾಕ್ಯಶೇಷದಲ್ಲಿ ಜ್ಞಾನೇಂದ್ರಿಯಗಳು ಸಪ್ತ ಎಂದು ಹೇಳಿದೆ. ಈ ಜ್ಞಾನೇಂದ್ರಿಯತ್ವ ಎಂಬ ಅವಚ್ಛೇದಕವನ್ನು ಇಟ್ಟುಕೊಂಡೇ ಸಪ್ತಪ್ರಾಣಾಃ ಪ್ರಭವಂತಿ ಎಂಬಲ್ಲಿ ಸಪ್ತತ್ವಸಂಖ್ಯೆಯು ಹೇಳಲ್ಪಟ್ಟಿದೆ ಶ್ರೋತ್ರ, ಚಕ್ಷು, ತ್ವಕ್, ರಸನ, ಘ್ರಾಣ, ಮನಸ್ಸು, ಬುದ್ಧಿ ಇವೇ ಏಳು ಜ್ಞಾನೇಂದ್ರಿಯಗಳು.

ಈ ವಾಕ್ಯದಲ್ಲಿ ಜ್ಞಾನೇಂದ್ರಿಯಗಳನ್ನು ಮಾತ್ರ ಹೇಳುವ ವಿವಕ್ಷೆ ಇರುವುದರಿಂದ ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬ ಐದು

ಕರ್ಮೇಂದ್ರಿಯಗಳನ್ನು ಹೇಳಿಲ್ಲ. ಹೀಗೆ ಕರ್ಮೇಂದ್ರಿಯಗಳನ್ನು ಹೇಳದೇ ಇರುವುದಕ್ಕೆ ಕಾರಣವಿರುವುದರಿಂದ, ಕರ್ಮೇಂದ್ರಿಯಗಳನ್ನು ಹೇಳದೇ ಇರುವುದರಿಂದ ಅವು ಇಲ್ಲವೇ ಇಲ್ಲ ಎಂಬ ಶಂಕೆ ಸರಿಯಲ್ಲ.

ಹಾಗಾಗಿ ದ್ವಾದಶತ್ವಶ್ರುತಿಯಿಂದ ಇಂದ್ರಿಯಗಳು ದ್ವಾದಶ ಎಂದು ಸಿದ್ಧವಾಗುತ್ತದೆ.

## ॥ ಓಂ ಅಣವಶ್ಚ ಓಂ ॥ ೨-೪-೫

ಹಿಂದಿನ ಅಧಿಕರಣದಲ್ಲಿ ಇಂದ್ರಿಯಗಳ ಸಂಖ್ಯೆಯ ವಿಚಾರ ಮಾಡಲಾಗಿತ್ತು. ಈ ಅಧಿಕರಣದಲ್ಲಿ ಅವುಗಳ ಪರಿಮಾಣದ ವಿಚಾರ ಮಾಡಲಾಗುತ್ತಿದೆಯಾದ್ದರಿಂದ ಸಂಗತಿಯಿದೆ. ಇಂದ್ರಿಯಗಳು ಅಣುಪರಿಮಾಣವುಳ್ಳವುಗಳೋ ಅಥವಾ ವಾಪ್ತವೋ ಎಂಬುದೇ ಸಂದೇಹ. ವ್ಯಾಪ್ತ ಎಂಬುದೇ ಪೂರ್ವಪಕ್ಷ. ಏಕೆಂದರೆ, ''ದಿವೀವ ಚಕ್ಷುರಾತತಂ'' ಎಂದು ಇಂದ್ರಿಯಗಳಿಗೆ ವ್ಯಾಪ್ತತ್ವವನ್ನು ಹೇಳುವ ಶ್ರುತಿಯಿರುವುದರಿಂದ. ಈ ಶ್ರುತಿಯಲ್ಲಿ ವಿಷ್ಣುವು ವ್ಯಾಪ್ತ ಎಂದು ಹೇಳಿ ಅದಕ್ಕೆ ಚಕ್ಷುಸ್ಸಿನ ವ್ಯಾಪ್ತಿಯನ್ನು ದೃಷ್ಟಾಂತವಾಗಿ ಕೊಡಲಾಗಿದೆ. ಸುದೃಢವಾದದ್ದನ್ನೇ, ದೃಷ್ಟಾಂತವಾಗಿ ಕೊಡುವುದರಿಂದ ಈ ಶ್ರುತಿ ಪ್ರಬಲ. ಜೊತೆಗೆ ಈ ಶ್ರುತಿಯು ಯುಕ್ತಿಸಹಿತವೂ ಆಗಿದೆ ದೂರದಲ್ಲಿರುವುದರ ದರ್ಶನ, ಶ್ರವಣ, ಸ್ಮರಣಾದಿಗಳು ಅನುಭವಸಿದ್ಧ. ಈ ಕಾರಣದಿಂದಲೂ ಇಂದ್ರಿಯಗಳು ವ್ಯಾಪ್ತ ಎಂದು ಒಪ್ಪಬೇಕು. ಇದೇ ಯುಕ್ತಿ. ಯುಕ್ತಿಸಹಿತವಾದ್ದರಿಂದಲೂ ಶ್ರುತಿಯು ಪ್ರಬಲ. ''ಅಣುಭಿಃ ಪಶ್ಯತಿ'' ಎಂಬ ಶ್ರುತಿಯು ಇಂದ್ರಿಯಗಳಿಗೆ ಅಣುತ್ವವನ್ನು ಹೇಳುತ್ತಿದೆ. ಇದರ ವಿರೋಧ ಬರುವುದಿಲ್ಲವೇ? ಎಂದರೆ, ಇಲ್ಲ ವ್ಯಾಪ್ತತ್ವಶ್ರುತಿಯು ಪ್ರಬಲ. ಪ್ರಬಲವಾದ ವ್ಯಾಪ್ತತ್ವಶ್ರುತಿಯಿಂದ ದುರ್ಬಲವಾದ ಅಣುತ್ವಶ್ರುತಿಗೆ ಬಾಧವನ್ನು ಹೇಳಬೇಕು. ಹಾಗಾಗಿ ಅಣುತ್ವಶ್ರುತಿಯು ಅಪ್ರಮಾಣ ಎಂದಾಗುವುದು.

**ಸಿದ್ಧಾಂತ** :- ಇಂದ್ರಿಯಗಳು ಅಣುಪರಿಮಾಣವುಳ್ಳವುಗಳೇ, ಹೇಗೆಂದರೆ, ''ತಧ್ಯಥಾ ಹ್ಯಣು ಶ್ಚಕ್ಷಸಃ ಪ್ರಕಾಶೋ ವ್ಯಾತತ ಏವಮೇವಾಸ್ಯ ಪುರುಷಸ್ಯ

ಪ್ರಕಾಶೋ ವ್ಯಾತತಃ ಅಣುರ್ಹ್ಯೇವೈಷ ಪುರುಷೋ ಭವತಿ'' ಎಂಬ ಶ್ರುತಿಯಲ್ಲಿ ಆತ್ಮಾ ಅಣು ಎಂಬ ವಿಷಯದಲ್ಲಿ ಚಕ್ಷುಸ್ಸಿನ ದೃಷ್ಟಾಂತವನ್ನು ಕೊಡಲಾಗಿದೆ. ಸುದೃಢವಾದದನ್ನೇ ದೃಷ್ಟಾಂತವಾಗಿ ಕೊಡುವುದರಿಂದ ಈ ಶ್ರುತಿ ಪ್ರಬಲ. ಪ್ರಕಾಶೋ ವ್ಯಾತತಃ ಎಂಬುದಾಗಿ ಈ ಶ್ರುತಿಯಲ್ಲಿ ವಿಸ್ಪಷ್ಟವಾಗಿ ಇಂದ್ರಿಯವು ಸ್ವರೂಪತ ಅಣು ಪ್ರಕಾಶತಃ ವ್ಯಾಪ್ತ ಎಂದು ಹೇಳಿದ್ದರಿಂದ ಇದು ವಿಶೇಷಶ್ರುತಿ. ವಿಶೇಷ ಶ್ರುತಿಯಾದ್ದರಿಂದಲೂ ಇದು ಪ್ರಬಲ. ಹಿಂದೆ ಹೇಳಿದ ಯುಕ್ತಿ ವಿರೋಧವೂ ಇಲ್ಲ. ಏಕೆಂದರೆ, ಇಂದ್ರಿಯಗಳು ಸ್ವರೂಪತಃ ಅಣುವಾದರೂ ಪ್ರಕಾಶತಃ ವ್ಯಾಪ್ತವಾದ್ದರಿಂದ ದೂರಶ್ರವಣದರ್ಶನಾದಿಗಳು ಕೂಡುತ್ತವೆ.

''ದಿವೀವ ಚಕ್ಷುರಾತತಂ'' ಎಂಬುದು ಸಾಮಾನ್ಯವಾಗಿ ವ್ಯಾಪ್ತಿಯನ್ನು ಹೇಳುತ್ತಿದೆ. ಪ್ರಕಾಶವ್ಯಾಪ್ತಿಯೇ ಶ್ರುತಿಯ ಅಭಿಪ್ರಾಯ ಎಂದಿಟ್ಟುಕೊಂಡಾಗ ಈ ಶ್ರುತಿಯು ಸಾವಕಾಶವಾಯಿತು. ಇಂದ್ರಿಯಗಳು ಸ್ವರೂಪತಃ ವ್ಯಾಪ್ತ ಎಂದರೆ ಸದಾ ಸರ್ವಾಪರೋಕ್ಷವನ್ನು ಒಪ್ಪಬೇಕಾಗುತ್ತದೆ (ಸಮನಸ್ಕ ಇಂದ್ರಿಯಾರ್ಥ ಸನ್ನಿಕರ್ಷ ಸದಾ ಸರ್ವತ್ರ ಇರುವುದರಿಂದ) ಜೊತೆಗೆ ಸುಪ್ತಿಯೂ ಇಲ್ಲ ಎಂದಾಗಬೇಕಾಗುತ್ತದೆ. ಹಾಗಾಗಿ ಇಂದ್ರಿಯಗಳನ್ನು ಸ್ವರೂಪತಃ ವ್ಯಾಪ್ತ ಎನ್ನಬಾರದು. ಇಂದ್ರಿಯಗಳು ಅಣುಗಳೇ ಎಂದು ಸಿದ್ಧವಾಯಿತು.

## ॥ ಓಂ ಶ್ರೇಷ್ಠಶ್ಚ ಓಂ ॥ ೨-೪-೬

ಇಲ್ಲಿಯವರೆಗೆ ಇಂದ್ರಿಯಗಳ ವಿಚಾರಮಾಡಿ ಈ ಅಧಿಕರಣದಲ್ಲಿ ಇಂದ್ರಿಯಗಳಿಗೆ ಪ್ರೇರಕರಾದ ಮುಖ್ಯಪ್ರಾಣರ ವಿಚಾರ ಮಾಡುತ್ತಿರುವುದರಿಂದ ಸಂಗತಿಯಿದೆ. ಮುಖ್ಯಪ್ರಾಣನಿಗೆ ಜನ್ಮ ಇದೆಯೇ ಇಲ್ಲವೋ ಎಂಬುದೇ ಸಂದೇಹ. ಇಲ್ಲ ಎಂದು ಪೂರ್ವಪಕ್ಷ ''ನೈಷ ಪ್ರಾಣ ಉದೇತಿ'' ಎಂಬ ಶ್ರುತಿಯು ಮುಖ್ಯಪ್ರಾಣನಿಗೆ ಜನ್ಮವಿಲ್ಲ ಎಂದು ಹೇಳುತ್ತಿದೆಯಾದ್ದರಿಂದ. ಈ ಶ್ರುತಿಯು ಯುಕ್ತಿಸಹಿತವಾದ್ದರಿಂದ, ''ಸ ಪ್ರಾಣಮಸೃಜತ'' ಎಂಬ ಕೇವಲ ಜನ್ಮಶ್ರುತಿಗಿಂತ ಪ್ರಬಲ. ಯುಕ್ತಿಯಾವುದೆಂದರೆ, ''ಯತ್ಪ್ರಾಪ್ತಿರ್ಯತ್ಪರಿತ್ಯಾಗಃ

ಉತ್ಪತ್ತಿರ್ಮರಣಂ ತಥಾ'' ಎಂಬ ಸ್ಮತಿಯಲ್ಲಿ ಮುಖ್ಯಪ್ರಾಣನು ಎಲ್ಲ ಜೀವರ ಉತ್ಪತ್ತಿ ಹಾಗು ಮರಣಕ್ಕೆ ಕಾರಣನಾಗಿದ್ದಾನಾದ್ದರಿಂದ ಅವನಿಗೆ ಉತ್ಪತ್ತ್ಯಾದಿ-ಗಳಿಲ್ಲ ಎಂದು ಹೇಳಿದೆ ಇದೇ ಯುಕ್ತಿ.

''ಸ ಪ್ರಾಣಮಸೃಜತ'' ಎಂಬ ಜನ್ಮಶ್ರುತಿಯು ಸಾವಕಾಶವಾಗಿದೆ. ಏಕೆಂದರೆ ಇಲ್ಲಿರುವ ಪ್ರಾಣಶಬ್ದಕ್ಕೆ ಚೇಷ್ಟಾಯಾಂ ಬಾಹ್ಯವಾಯೌ ಚ ಎಂಬ ಪ್ರಮಾಣಕ್ಕನುಸಾರವಾಗಿ ''ಚೇಷ್ಟಾ'' ಎಂದರ್ಥ. ಹಾಗಾಗಿ ಇದು ಪ್ರಾಣಜನ್ಮಕ್ಕೆ ಸಾಧಕವಾಗುವುದಿಲ್ಲ.

**ಪ್ರಶ್ನೆ** :- ಮುಖ್ಯಪ್ರಾಣನಿಗೆ ಜನ್ಮ ಇದೆಯೇ ಇಲ್ಲವೋ ಎಂಬ ವಿಚಾರ ''ಏತೇನ ಮಾತರಿಶಾ ವ್ಯಾಖ್ಯಾತಃ'' ಎಂಬ ಸೂತ್ರದಲ್ಲೇ ಮಾಡಿಯಾಗಿದೆ. ಹಾಗಾಗಿ ಈ ಅಧಿಕರಣ ಆರಂಭ ಮಾಡಿದ್ದು ವ್ಯರ್ಥವಲ್ಲವೇ?

**ಪರಿಹಾರ** :- ಇಲ್ಲ. ಏತೇನ ಮಾತರಿಶ್ವಾ ವ್ಯಾಖ್ಯಾತಃ ಎಂಬಲ್ಲಿ ಬಾಹ್ಯಮುಖ್ಯವಾಯುವಿಗೆ ಜನ್ಮವಿದೆ ಎಂದು ಹೇಳಲಾಗಿದೆ. ಹಾಗಿದ್ದರೂ ಆಧ್ಯಾತ್ಮಿಕ ಪ್ರಾಣರೂಪಕ್ಕೆ (ದೇಹದಲ್ಲಿರುವ) ಜನ್ಮವಿಲ್ಲ ಎಂದು ಇಲ್ಲಿ ಶಂಕೆ ಮಾಡುತ್ತಿದ್ದಾರೆ. ಹಾಗಾಗಿ ವೈಯರ್ಥ್ಯ ಎಂಬ ದೋಷವಿಲ್ಲ. ಆಧ್ಯಾತ್ಮಿಕ ಪ್ರಾಣರೂಪವು ಎಲ್ಲರ ಜನ್ಮಮರಣಕ್ಕೆ ಕಾರಣವಾಗಿದೆಯಾದ್ದರಿಂದ ಅದಕ್ಕೆ ಉತ್ಪತ್ತಿನಾಶ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಎಲ್ಲರ ಜನ್ಮಮರಣಕಾರಣ-ನಾದವನು ದುಃಖಕಾರಣವಾದ ಜನ್ಮವನ್ನು ತನಗೆ ತಾನೇ ತಂದುಕೊಳ್ಳುತ್ತಾನೆ ಎಂಬುದು ಕೂಡುವುದಿಲ್ಲ. ಈ ಅಧಿಕಶಂಕೆ ಇರುವುದರಿಂದ ಈ ಅಧಿಕರಣಕ್ಕೆ ಗತಾರ್ಥತಾ ಎಂಬುದು ಇಲ್ಲ.

**ಸಿದ್ಧಾಂತ** :- ಆಧ್ಯಾತ್ಮಿಕ ಪ್ರಾಣರೂಪಕ್ಕೂ ಉತ್ಪತ್ತಿಯಿದೆ. ಹೇಗೆಂದರೆ ''ಸೌಕ್ಷ್ಮ್ಯೇಣ ಹ ವಾ ಏಷೋವತಿಷ್ಠತೇ ಸ್ಥೂಲತ್ವೇನೋದೇತಿ'' ಎಂಬ ಶ್ರುತಿಯಲ್ಲಿ ಪ್ರಾಣನಿಗೆ ಸ್ವರೂಪತಃ ಉತ್ಪತ್ತಿಯಿಲ್ಲ ದೇಹದಿಂದ ಉತ್ಪತ್ತಿಯಿದೆ ಎಂದು ಹೇಳಿದೆ. ಅದರಂತೆ ಇಲ್ಲಿರುವ ಜನ್ಮ ಅಜನ್ಮ ಶ್ರುತಿಗಳಿಗೂ ಇದೇ ರೀತಿ

ಅರ್ಥಮಾಡಿದಾಗ ಯಾವುದೇ ವಿರೋಧವಿಲ್ಲ. ''ಸ ಪ್ರಾಣಮಸೃಜತ'' ಎಂಬಲ್ಲಿರುವ ಪ್ರಾಣ ಶಬ್ದಕ್ಕೆ ಚೇಷ್ಟಾ ಎಂಬರ್ಥ ಸರಿಯಲ್ಲ. ಏಕೆಂದರೆ, ವಾಕ್ಯಶೇಷದಲ್ಲಿ ''ಪ್ರಾಣಾತ್‌ಶ್ರದ್ಧಾ ಖಂ ವಾಯುರ್ಜ್ಯೋತಿರಾಪಃ ಪೃಥಿವೀ ಇಂದ್ರಿಯಂ ಮನೋನ್ನಂ ಅನ್ನಾತ್ ವೀರ್ಯಂ ತಪೋ ಮಂತ್ರಾಃ ಕರ್ಮ'' ಎಂಬುದಾಗಿ ಕರ್ಮಶಬ್ದದಿಂದ ಚೇಷ್ಟಾವನ್ನು ಪೃಥಕ್ಕಾಗಿ ಹೇಳಿದೆ. ಹಾಗಾಗಿ ಇಲ್ಲಿರುವ ಪ್ರಾಣಶಬ್ದಕ್ಕೆ ಮುಖ್ಯಪ್ರಾಣ ಎಂದೇ ಅರ್ಥ. ಈ ಜನ್ಮಶ್ರುತಿಯಿಂದ ಮುಖ್ಯಪ್ರಾಣನಿಗೆ ಜನ್ಮ ಸಿದ್ಧವಾಯಿತು. ಹಿಂದೆ ಹೇಳಿದ ಯುಕ್ತಿವಿರೋಧವೂ ಇಲ್ಲ. ಏಕೆಂದರೆ, ಮುಖ್ಯಪ್ರಾಣನು ತನಗೆ ತಾನೇ ಜನ್ಮ ತಂದುಕೊಳ್ಳದೇ ಹೋದರೂ ಪ್ರಾಣನಿಗಿಂತ ಅತಿಮಾಹಾತ್ಮ್ಯವುಳ್ಳ ವಿಷ್ಣುವಿನಿಂದ ಪ್ರಾಣನಿಗೆ ಜನ್ಮ ಇದ್ದೇ ಇದೆ. ಇದನ್ನೇ ಸ ಪ್ರಾಣಮಸೃಜತ ಎಂಬಲ್ಲಿ ಹೇಳಿದ್ದಾರೆ. ಹಾಗಾಗಿ ಪ್ರಾಣನಿಗೂ ಜನ್ಮವಿದೆ ಎಂದು ಸಿದ್ಧವಾಯಿತು.

## ।। ಓಂ ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ಓಂ ।। ೨-೪-೭

ಹಿಂದೆ ಮುಖ್ಯಪ್ರಾಣನಿಗೂ ಜನ್ಮವಿದೆ ಎಂದು ಹೇಳಲಾಗಿದೆ ಮುಖ್ಯಪ್ರಾಣ ಸ್ವತಂತ್ರನಾದ್ದರಿಂದ ಅವನಿಗೆ ಜನ್ಮವಿಲ್ಲ ಎಂದು ಇಲ್ಲಿ ಆಕ್ಷೇಪಮಾಡುತ್ತಿರುವುದರಿಂದ ಸಂಗತಿಯಿದೆ. ಮುಖ್ಯಪ್ರಾಣನು ಸ್ವತಂತ್ರನೋ ಪರತಂತ್ರನೋ ಎಂಬುದೇ ಸಂದೇಹ. ಸ್ವತಂತ್ರ ಎಂದು ಪೂರ್ವಪಕ್ಷ. ಏಕೆಂದರೆ, ''ನ ಪ್ರಾಣಃ ಕಿಂಚಿದಾಶ್ರಿತಃ'' ಎಂಬ ಶ್ರುತಿಯು ಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುತ್ತಿದೆ. ಆದ್ದರಿಂದ ಪ್ರಾಣನು ಸ್ವತಂತ್ರ. ಈ ಶ್ರುತಿಯು ಯುಕ್ತಿಸಹಿತವೂ ಆಗಿದೆ. ಹೇಗೆಂದರೆ, ಯದಾಶ್ರಯಾದಸ್ಯ ಚೇಷ್ಟಾ ಎಂಬ ಸ್ಮೃತಿಯಲ್ಲಿ ಪ್ರಾಣನು ಅಖಿಲಜಗಚ್ಚೇಷ್ಟಕತ್ವ ಎಂಬ ಮಾಹಾತ್ಮ್ಯವುಳ್ಳವನಾದ್ದರಿಂದ ಅನನ್ಯಾಶ್ರಯ ಎಂದು ಹೇಳಿದೆ. ಇದೇ ಯುಕ್ತಿ. ಯುಕ್ತಿಸಹಿತವಾದ್ದರಿಂದ ಸ್ವಾತಂತ್ರ್ಯಶ್ರುತಿ ಪ್ರಬಲವಾಯಿತು. ''ಪ್ರಾಣಃ ಪರವಶೇ ಸ್ಥಿತಃ'' ಎಂದು ಪ್ರಾಣನಿಗೆ ಪಾರತಂತ್ರ್ಯವನ್ನು ಹೇಳುವ ಶ್ರುತಿಯು ಸ್ವಾತಂತ್ರ್ಯಶ್ರುತಿಗಿಂತ ದುರ್ಬಲವಾದ್ದರಿಂದ ಅಪ್ರಮಾಣವೇ ಆಗಿದೆ.

ಸ್ವಾತಂತ್ರ್ಯಶ್ರುತಿಯುಕ್ತಿಗಳ ವಿರೋಧ ಬರುವುದರಿಂದಲೇ ಹಿಂದೆ ಹೇಳಿದ ಜನ್ಮಶ್ರುತಿಗಳಿಗೂ ಅಪ್ರಾಮಾಣ್ಯವನ್ನು ಹೇಳಬೇಕು. ಸ್ಥೂಲತ್ವೇನೋದೇತಿ ಎಂಬ ಜನ್ಮಶ್ರುತಿಯೂ ಕೂಡ ಲೀಲಾವಿಗ್ರಹಧಾರಣಪರ ಎಂದಿಟ್ಟುಕೊಂಡಾಗ ಸಾವಕಾಶ-ವಾಗಿದೆ. ಹಾಗಾಗಿ ಪ್ರಾಣನಿಗೆ ಜನ್ಮವಿದೆ ಎಂದು ಹಿಂದೆ ಹೇಳಿದ್ದು ಸರಿಯಲ್ಲ.

**ಸಿದ್ಧಾಂತ :-** ಮುಖ್ಯಪ್ರಾಣನೂ ಪರತಂತ್ರನೇ. ಏಕೆಂದರೆ, ''ಸರ್ವಂ ಹ್ಯೇವೈತತ್ಪರಮೇ ಅವತಿಷ್ಠತೇ ಪ್ರಾಣಶ್ಚ ಪ್ರಾಣಾಶ್ಚ'' ಎಂಬ ಶ್ರುತಿಯು ಚಕ್ಷುರಾದಿ ಇಂದ್ರಿಯಗಳ ಜೊತೆ ಅವುಗಳಂತೆ ಪ್ರಾಣನಿಗೂ ಈಶ್ವರವಶತ್ವವನ್ನು ಹೇಳುತ್ತಿದೆಯಾದ್ದರಿಂದ. ಈ ಶ್ರುತಿಯು ಯುಕ್ತಿಸಹಿತವಾಗಿದೆಯಾದ್ದರಿಂದ ಪ್ರಬಲ. ಅದೇನೆಂದರೆ, ''ಯತೋ ನೈವೇಶ್ವರದ್ವಯಂ'' ಎಂಬಲ್ಲಿ ಇಬ್ಬರು ಈಶ್ವರರು ಇರಲು ಸಾಧ್ಯವಿಲ್ಲ ಎಂದು ಹೇಳಿದೆ. ಈ ಈಶ್ವರದ್ವಯ ಅಯೋಗ ಎಂಬುದೇ ಯುಕ್ತಿ. ಹಾಗಾಗಿ ಪಾರತಂತ್ರ್ಯಶ್ರುತಿ ಪ್ರಬಲವಾಯಿತು. ''ಪಾಣ-ಸ್ಯೈತದ್ವಶೇ ಸರ್ವಂ ಪ್ರಾಣಃ ಪರವಶೇ ಸ್ಥಿತಃ'' ಎಂಬ ವಿಶೇಷ ಶ್ರುತಿಯೂ ಇದೆ. ಆದ್ದರಿಂದಲೂ ಪಾರತಂತ್ರ್ಯಶ್ರುತಿ ಪ್ರಬಲ. ಹೀಗೆ ಪ್ರಬಲವಾದ ಪಾರತಂತ್ರ್ಯ ಶ್ರುತಿವಿರೋಧ ಬರುವುದರಿಂದ ''ಅವಾಂತರೇಶ್ವರತ್ವೇನ ತಸ್ಯೇಶ್ವರವಚೋ ಭವೇತ್'' ಎಂದು ಹೇಳಿದಂತೆ ಸ್ವಾತಂತ್ರ್ಯಶ್ರುತಿಯುಕ್ತಿಗಳಿಗೆ ತದನನ್ಯೇಶ್ವರತ್ವ-ವನ್ನು ಅಥವಾ (ಪರಮಾತ್ಮನನ್ನು ಹೊರತುಪಡಿಸಿ ಬೇರೆ ಈಶ್ವರರಿಲ್ಲ) ಅವಾಂತರೇಶ್ವರತ್ವ (ಅಪ್ರಧಾನ ಈಶ್ವರ) ವನ್ನು ಹೇಳಬೇಕು.

**ಪ್ರಶ್ನೆ :-** ಚಕ್ಷುರಾದಿಗಳಂತೆ ಮುಖ್ಯಪ್ರಾಣನೂ ಈಶ್ವರವಶ ಎಂದರೆ ಅವನಿಗೆ ಅವಾಂತರೇಶ್ವರತ್ವ ಹೇಗೆ ಬರುತ್ತದೆ? ಅವಾಂತರೇಶ್ವರತ್ವ ಸಿದ್ಧವಾಗದೇ ಹೋದರೆ ಸ್ವಾತಂತ್ರ್ಯಶ್ರುತಿ ವ್ಯರ್ಥವಾಗುತ್ತದೆ?

**ಉತ್ತರ :-** ನಿಜ, ಚಕ್ಷುರಾದಿಗಳಿಗೂ ಪ್ರಾಣನಿಗೂ ಈಶ್ವರವಶತ್ವದಲ್ಲಿ ಸಾಮ್ಯವಿದೆ. ಆದರೆ ಮುಖ್ಯಪ್ರಾಣನಲ್ಲಿ ವಿಶೇಷವಿದೆ. ಸುಷುಪ್ತಿಕಾಲದಲ್ಲಿ ಮತ್ತು ಜೀವಪ್ರಯತ್ನವಿಲ್ಲದೇ ಇರುವಾಗಲೂ ಮೂಖ್ಯಪ್ರಾಣನ ವ್ಯಾಪಾರ ಕಂಡಿದೆ. ಚಕ್ಷುರಾದಿಗಳ ವ್ಯಾಪಾರ ಕಂಡಿಲ್ಲ. ಹಾಗಾಗಿ ಚಕ್ಷುರಾದಿಗಳು

ಕರ್ತೃಪ್ರಯೇಜ್ಯ ಮುಖ್ಯಪ್ರಾಣ ಕರ್ತೃಪ್ರಯೋಜ್ಯನಲ್ಲ ಜೊತೆಗೆ, ''ತಾನಿ ಹ ವಾ ಏತಾನಿ ಸರ್ವಾಣಿ ಕರಣಾನಿ'' ಎಂಬ ಶ್ರುತಿಯಲ್ಲಿ ಹೇಳಿದಂತೆ ಚಕ್ಷುರಾದಿಗಳು ಜೀವನ ಕರಣ ಆದರೆ ಮುಖ್ಯಪ್ರಾಣ ಜೀವಕರಣವಲ್ಲ. ಚಕ್ಷುರಾದಿಗಳಿಗೂ ಮುಖ್ಯಪ್ರಾಣನಿಗೂ 'ಕರಣತ್ವ' 'ಅಕರಣತ್ವ' ಎಂಬ ವ್ಯತ್ಯಾಸವಿದೆ. ಹೀಗಾಗಿ ಮುಖ್ಯಪ್ರಾಣನಿಗೆ ಅವಾಂತರೇಶ್ವರತ್ವ ಕೂಡುತ್ತದೆ. ಈ ಅಧಿಕರಣವು 'ಸೋಽಧ್ಯಕ್ಷೇ' ಎಂಬ ಸೂತ್ರದಿಂದ ಗತಾರ್ಥವಾಗಿದೆ ಎಂಬ ಪ್ರಶ್ನೆಗೆ ಉತ್ತರವನ್ನು 'ಸೋಧ್ಯಕ್ಷೇ' ಎಂಬ ಅಧಿಕರಣದಲ್ಲೇ ಹೇಳುತ್ತೇವೆ.

## ।। ಓಂ ಪಞ್ಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ ।। ೨-೪-೮

ಹಿಂದೆ ಮುಖ್ಯಪ್ರಾಣನ ವಿಚಾರ ಮಾಡಲಾಗಿದೆ. ಅದಕ್ಕೆ ಸಂಬಂಧಪಟ್ಟ ಪ್ರಾಣಾದಿಗಳ ವಿಚಾರ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ. ಪ್ರಾಣಾದಿ ಐವರು ಮುಖ್ಯಪ್ರಾಣನದಾಸರು ಅಥವಾ ಮುಖ್ಯ ಪ್ರಾಣ ಸ್ವರೂಪವೇ ಎಂದು ನಿರ್ಣಯ ಮಾಡಲು ಸಾಧ್ಯವಿದೆಯೋ ಇಲ್ಲವೋ ಎಂಬುದೇ ಸಂದೇಹ ಸಾಧ್ಯವಿಲ್ಲ ಎಂದು ಪೂರ್ವಪಕ್ಷ. ಏಕೆಂದರೆ, ''ಸರ್ವೇ ವಾ ಏತೇ ಮುಖ್ಯದಾಸಾಃ'' ಎಂದು ಪ್ರಾಣಾದಿಗಳು ಮುಖ್ಯಪ್ರಾಣನ ದಾಸರು ಎಂದು ಹೇಳುವ ಶ್ರುತಿಯಿದೆ. ಈ ಶ್ರುತಿಯು ಯುಕ್ತಿಸಹಿತವಾದ್ದರಿಂದ ಪ್ರಬಲವಾಗಿದೆ. ''ಏಷ ಪ್ರಾಣಃ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ'' ಎಂಬ ಶ್ರುತಿಯಲ್ಲಿ ಹಾಗು ಪ್ರಾಣಾಪಾನಾದಯಸ್ಸರ್ವೇ ಎಂಬ ಸ್ಮೃತಿಯಲ್ಲಿ ಮುಖ್ಯಪ್ರಾಣನ ಆಜ್ಞೆಯಿಂದ ಕರ್ಮಕಾರಿತ್ವ ಉಕ್ತವಾಗಿದೆ. ಇದೇ ಯುಕ್ತಿ.

ಇನ್ನು ಪ್ರಾಣಾದಿಗಳು ಮುಖ್ಯಪ್ರಾಣನ ಸ್ವರೂಪವೇ ಎಂಬುದಕ್ಕೂ ''ಸ್ವರೂಪಾಣಿ ಪ್ರಾಣಾದ್ಯಾಃ'' ಎಂಬ ಶ್ರುತಿಯಿದೆ. ಈ ಶ್ರುತಿಯೂ ಕೂಡ ಸ್ವರೂಪತ್ವ ಸಾಧಕವಾದ ವ್ಯಕ್ತಸದ್ಗುಣತ್ವ ಎಂಬ ಯುಕ್ತಿವುಳ್ಳದಾಗಿದೆ. ಹಾಗಾಗಿಯೇ ಪ್ರಬಲವಾಗಿದೆ. ಈ ವ್ಯಕ್ತಸದ್ಗುಣತ್ವ ಎಂಬುದು ''ಪಾಯೂಪ-

ಸ್ಥೇಪಾನಂ ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿಷ್ಠತೇ'' ಎಂಬಲ್ಲಿ ಶ್ರುತವಾಗಿದೆ. ಈ ವ್ಯಕ್ತಸದ್ಗುಣತ್ವ ದಾಸರಲ್ಲಿರಲು ಸಾಧ್ಯವಿಲ್ಲ. ಏಕೆಂದರೆ ಇಬ್ಬರಲ್ಲೂ ವ್ಯಕ್ತಸದ್ಗುಣತ್ವ ಒಪ್ಪಿದರೆ ಸಾಮಿಭೃತ್ಯಭಾವವೇ ಕೂಡುವುದಿಲ್ಲ. ಹಾಗಾಗಿ ವ್ಯಕ್ತಸದ್ಗುಣತ್ವ ಶ್ರುತವಾದ್ದರಿಂದ ಪ್ರಾಣಾದಿಗಳು ಮುಖ್ಯಪ್ರಾಣನಸ್ವರೂಪವೇ.

ಶ್ರುತಿಗಳು ಪರಸ್ಪರವಿರುದ್ಧವಾದ್ದರಿಂದ ಅಪ್ರಮಾಣವಾಗಿವೆ. ಪರಸ್ಪರ ವಿರುದ್ಧವಾದ ಶ್ರುತಿಗಳಿಗೂ ಪ್ರಾಮಾಣ್ಯ ಒಪ್ಪಿದರೆ ವಸ್ತುವಿನಲ್ಲಿ ವಿಕಲ್ಪ ಒಪ್ಪಿ-ದಂತಾಗುತ್ತದೆ. ಅದು ಯುಕ್ತವಲ್ಲ. ಪ್ರಾಣಾದಿಗಳು ದಾಸರೂ ಆಗಿದ್ದಾರೆ ಸ್ವರೂಪವೂ ಆಗಿದ್ದಾರೆ ಎಂದರೆ ಅದೇ ವಸ್ತುವಿಕಲ್ಪ. ಇದು ವಿರುದ್ಧವಾದ್ದ-ರಿಂದ ಅಯುಕ್ತ.

**ಸಿದ್ಧಾಂತ :-** ಪ್ರಾಣಾದಿಗಳನ್ನು ಮುಖ್ಯಪ್ರಾಣನ ದಾಸರು ಎಂದು ಹಾಗು ಮುಖ್ಯಪ್ರಾಣನ ಸ್ವರೂಪ ಎಂದೂ ನಿರ್ಣಯ ಮಾಡಲು ಸಾಧ್ಯವಿದೆ. ಹೇಗೆಂದರೆ, ಅಥ ''ಪಞ್ಚವೃತ್ತೈತತ್ತ್ರವರ್ತತೇ'' ಎಂಬ ಶ್ರುತಿಯಲ್ಲಿ, ಮನಸ್ಸಿನ ದೃಷ್ಟಾಂತವನ್ನು ಕೊಟ್ಟು ಅದರಂತೆ ಮುಖ್ಯಪ್ರಾಣನೂ ಕೂಡ ಪ್ರಾಣಾದಿ ಐದುಜನ ದಾಸರನ್ನು ಹೊಂದಿದ್ದಾನೆ ಹಾಗೂ ಪ್ರಾಣಾದಿ ಐದು ಸ್ವರೂಪವುಳ್ಳವನೂ ಆಗಿದ್ದಾನೆ ಎಂದು ಹೇಳಿದೆ. ಹೀಗೆ, ಮುಖ್ಯಪ್ರಾಣನ ದಾಸರಾದ ಪ್ರಾಣಾದಿಗಳು ಬೇರೆ. ಮುಖ್ಯಪ್ರಾಣನ ಸ್ವರೂಪವಾದ ಪ್ರಾಣಾದಿಗಳು ಬೇರೆ ಎಂದು ಉಭಯವಿಧತ್ವವನ್ನು ಒಪ್ಪಿದ್ದರಿಂದ ಯುಕ್ತಿ-ಸಹಿತವಾದ ಎರಡೂ ಶ್ರುತಿಗಳಿಗೆ ವಿರೋಧವಿಲ್ಲದ್ದರಿಂದ ಅಪ್ರಾಮಾಣ್ಯ ಹೇಳಬೇಕಿಲ್ಲ.

**ಪ್ರಶ್ನೆ :-** ಇತರಾನ್ ಪ್ರಾಣಾನ್ ಎಂಬಲ್ಲಿ ದಾಸರ ವಿಷಯವನ್ನು ಪ್ರಸ್ತಾಪಿಸಿ ''ಪಾಯೂಪಸ್ಥೇಪಾನಂ....'' ಎಂಬುದಾಗಿ ವ್ಯಕ್ತಸದ್ಗುಣತ್ವವನ್ನು

ಹೇಳಿದ್ದಾರೆ. ಪ್ರಾಣಾದಿಗಳು ಮುಖ್ಯಪ್ರಾಣದಾಸರೂ ಇದ್ದಾರೆ ಎಂದರೆ ಇದು ಹೇಗೆ ಕೂಡುತ್ತದೆ. ವ್ಯಕ್ತಸದ್ಗುಣತ್ವ ದಾಸರಲ್ಲಿ ಇರಲು ಸಾಧ್ಯವಿಲ್ಲವಾದ್ದರಿಂದ?

**ಉತ್ತರ** :- ಅಶೇಷಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ । ತದ್ದಾಸಾಃ ಪಂಚ ಚಾನ್ಯೇಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ ಎಂಬಲ್ಲಿ ಹೇಳಿದಂತೆ ವ್ಯಕ್ತಸದ್ಗುಣತ್ವ ಎಂಬುದು ತಾರತಮ್ಯದಿಂದ ಸ್ವರೂಪದಲ್ಲಿ ಹಾಗು ದಾಸರಲ್ಲಿ ಇದೆ. ಹಾಗಾಗಿ ಯಾವುದೇ ಅನುಪಪತ್ತಿ ಇಲ್ಲ. ಹೀಗೆ ವ್ಯಕ್ತಸದ್ಗುಣತ್ವ-ವನ್ನು ತಾರತಮ್ಯದಿಂದ ಇದೆ ಎಂದು ಒಪ್ಪಿದ್ದರಿಂದಲೇ ಸ್ವಾಮಿಭೃತ್ಯಭಾವವೂ ಕೂಡುತ್ತದೆ. ಮುಖ್ಯಪ್ರಾಣನ ಸ್ವರೂಪರಾದ ಪ್ರಾಣಾದಿಗಳಲ್ಲಿ ವ್ಯಕ್ತಸದ್ಗುಣತ್ವ ಅಧಿಕವಾಗಿದೆ. ದಾಸರಲ್ಲಿ ಅಲ್ಪಪ್ರಮಾಣದಲ್ಲಿದೆ ಎಂದು ಅಭಿಪ್ರಾಯ. ಹೀಗೆ ಪ್ರಾಣಾದಿಗಳನ್ನು ಎರಡು ವಿಧವಾಗಿದೆ ಎಂದು ನಿರ್ಣಯಿಸಲು ಸಾಧ್ಯವಿದೆ.

## ॥ ಓಂ ಅಣುಶ್ಚ ಓಂ ॥ ೨-೪-೯

ಹಿಂದೆ ಮುಖ್ಯಪ್ರಾಣನಿಗೆ ಪ್ರಾಣಾದಿ (ದಾಸ) ಪ್ರೇರಕತ್ವ ಎಂಬ ಅಧಿಕಸದ್ಗುಣತ್ವ ಹೇಳಲ್ಪಟ್ಟಿದೆ. ಅಂತಹ ಮುಖ್ಯಪ್ರಾಣನಿಗೆ ವಿಭುತ್ವವೂ ಇದೆ ಎಂದು ಶಂಕೆ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಹಿಂದಿನಿಂದ ಸಂಗತಿಯಿದೆ. ಮುಖ್ಯಪ್ರಾಣನು ವ್ಯಾಪ್ತನೋ ಅಥವಾ ಅಣುವೋ ಎಂಬುದೇ ಸಂದೇಹ. ವ್ಯಾಪ್ತ ಎಂದು ಪೂರ್ವಪಕ್ಷ. ಏಕೆಂದರೆ, ''ಪ್ರಾಣ ಏವಾಧಸ್ತಾತ್'' ಎಂಬ ಶ್ರುತಿಯು ಪ್ರಾಣನಿಗೆ ವ್ಯಾಪ್ತತ್ವವನ್ನು ಹೇಳುತ್ತದೆ. ಈ ಶ್ರುತಿಯು ಯುಕ್ತಿಸಹಿತವೂ ಆಗಿದೆ. ಅದೇನೆಂದರೆ, ''ಯತಸ್ಸರ್ವಂ ಜಗದ್ವ್ಯಾಪ್ಯ ತಿಷ್ಠತಿ ಪ್ರಾಣ'' ಎಂಬ ಸ್ಮೃತಿಯಲ್ಲಿ ಸರ್ವಜಗದ್ಧಾರಕತ್ವವು ಪ್ರಾಣನಿಗೆ ಹೇಳಲ್ಪಟ್ಟಿದೆ. ಇದೇ ಯುಕ್ತಿ.ಸರ್ವಜಗದ್ಧಾರಕನಾದ್ದರಿಂದ ಸರ್ವತ್ರವ್ಯಾಪ್ತ. ಹೀಗೆ ವಿಭುತ್ವ-ಶ್ರುತಿಯು ಯುಕ್ತಿಸಹಿತವಾಗಿ ಪ್ರಬಲವಾಗಿದೆ. ಈ ರೀತಿ ಪ್ರಬಲವಾದ ವ್ಯಾಪ್ತತ್ವಶ್ರುತಿಯಿಂದ ''ಪ್ರಾಣೋವಾಣುಃ'' ಎಂದು ಪ್ರಾಣನಿಗೆ ಅಣುತ್ವ-ವನ್ನು ಹೇಳುವ ಶ್ರುತಿಗೆ ಬಾಧವನ್ನು ಹೇಳಬೇಕು.

**ಪ್ರಶ್ನೆ** :- ವ್ಯಾಪ್ತತ್ವಶ್ರುತಿಯನ್ನು ವಿಷ್ಣುಪರ ಎಂದು ಏಕೆ ಹೇಳಬಾರದು? ಅಲ್ಲಿರುವ ಪ್ರಾಣಶಬ್ದಕ್ಕೆ ವಿಷ್ಣು ಎಂದರ್ಥ ಹೇಳಬೇಕು.

**ಉತ್ತರ** :- ''ಮಹಾನ್ ವೈ ಮುಖ್ಯಪ್ರಾಣಃ ಯೇನ ವ್ಯಾಪ್ತಂ ಚರಾಚರಮ್ ಎಂಬ ಇನ್ನೊಂದು ಶ್ರುತಿಯು ಸ್ಪಷ್ಟವಾಗಿ ಮುಖ್ಯಪ್ರಾಣನಿಗೆ ವ್ಯಾಪ್ತತ್ವವನ್ನು ಹೇಳುತ್ತಿದೆ. ಹಾಗಾಗಿ ಪ್ರಕೃತಶ್ರುತಿಯಲ್ಲೂ ಪ್ರಾಣಶಬ್ದಕ್ಕೆ ಮುಖ್ಯಪ್ರಾಣ ಎಂದು ಅರ್ಥ ಮಾಡಿದರೆ ಯಾವುದೇ ಬಾಧಕವಿಲ್ಲ.

**ಸಿದ್ಧಾಂತ** :- ಪ್ರಾಣನು ಅಣುವೇ ಆಗಿದ್ದಾನೆ. ''ಸ ವಾ ಏಷ ಪ್ರಾಣೋಣುರ್ಮಹಾನ್ನಾಮ'' ಎಂಬಿತ್ಯಾದಿ ಶ್ರುತಿಗಳಲ್ಲಿ ದೇಹದೊಳಗಿರುವ ಪ್ರಾಣಶಬ್ದವಾಚ್ಯನಾದವನು ಅಣು. ದೇಹದ ಹೊರಗಿರುವ ವಾಯು-ಶಬ್ದವಾಚ್ಯನಾದವನು ವ್ಯಾಪ್ತ ಎಂದು ಹೀಗೆ ವ್ಯವಸ್ಥೆಯು ಹೇಳಲ್ಪಟ್ಟಿದೆ. ಹಾಗಾಗಿ ದೇಹದ ಒಳಗಿರುವ ಪ್ರಾಣ ಅಣುವೇ ಆಗಿದ್ದಾನೆ. ಅಣುತ್ವಶ್ರುತಿಯೂ ಯುಕ್ತಿಯುಕ್ತವಾಗಿದೆ. ''ಅಣುರ್ವೈ ಮುಖ್ಯಪ್ರಾಣಃ ಯದುತ್ಕ್ರಾಮತಿ ನಾಡೀಭಿಃ'' ಎಂಬಲ್ಲಿ ನಾಡೀಸಂಚಾರಿತ್ವವು ಪ್ರಾಣನಿಗೆ ಹೇಳಲ್ಪಟ್ಟಿದೆ. ಇದೇ ಯುಕ್ತಿ. ಆದ್ದರಿಂದ ಅಣುತ್ವಶ್ರುತಿಯೂ ಪ್ರಬಲವೇ ಆಗಿದೆ.

## ।। ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ ।। ೨-೪-೧೦

ಇಂದ್ರಿಯಗಳ ಹಾಗು ಮುಖ್ಯಪ್ರಾಣನ ವಿಚಾರವನ್ನು ಮಾಡಿ ಈ ಅಧಿ-ಕರಣದಲ್ಲಿ ಇಂದ್ರಿಯಗಳು ಯಾರನ್ನು ಕುರಿತು ಕರಣವಾಗಿದೆ ಎಂದು ವಿಚಾರಮಾಡುತ್ತಿರುವುದರಿಂದ ಸಂಗತಿಯಿದೆ. ಚಕ್ಷುರಾದಿ ಇಂದ್ರಿಯಗಳು ಜೀವನ ಕರಣಗಳೋ ಅಥವಾ ಬ್ರಹ್ಮನ ಕರಣಗಳೋ ಎಂಬುದೇ ಸಂದೇಹ. ಜೀವನ ಕರಣಗಳು ಎಂದು ಪೂರ್ವಪಕ್ಷ. ಏಕೆಂದರೆ, ಜೀವಸ್ಯ ಕರಣಾನ್ಯಾಹುಃ ಪ್ರಾಣಾನ್ ಎಂಬ ಶ್ರುತಿಯು ಇಂದ್ರಿಯಗಳಿಗೆ ಜೀವಕರಣತ್ವವನ್ನು ಹೇಳುತ್ತಿದೆ. ಈ ಶ್ರುತಿಯು ಯುಕ್ತಿಯುಕ್ತವೂ ಆಗಿದೆ. ಅದೇನೆಂದರೆ, ಇಂದ್ರಿಯಗಳು

ಜೀವವಶ ಎಂದು ಅನುಭವವಿದೆ. ಜೀವವಶವಾಗಿ ಅನುಭೂಯಮಾನತ್ವ ಎಂಬುದೇ ಯುಕ್ತಿ. ಹೀಗೆ ಯುಕ್ತಿಯುಕ್ತವಾಗಿ ಪ್ರಬಲವಾಗಿದೆ. ಜೀವಕರಣತ್ವ ಶ್ರುತಿ. ಈ ಶ್ರುತಿಯಿಂದ 'ಬ್ರಹ್ಮಣೋ ವಾ ಏತಾನಿ ಕರಣಾನಿ' ಎಂದು ಬ್ರಹ್ಮಕರಣತ್ವವನ್ನು ಹೇಳುವ ಶ್ರುತಿಗೆ ಬಾಧವನ್ನು ಹೇಳಬೇಕು. ಬ್ರಹ್ಮಕರಣತ್ವ ಶ್ರುತಿಯು ದುರ್ಬಲವಾದ್ದರಿಂದ.

**ಸಿದ್ಧಾಂತ** :- ಇಂದ್ರಿಯಗಳು ಬ್ರಹ್ಮಕರಣಗಳೇ. ಹೇಗೆಂದರೆ, ಯಶ್ಚಕ್ಷುಷಿ ತಿಷ್ಠನ್ ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮನು ಚಕ್ಷುರಾದೀಂದ್ರಿಯಗಳಲ್ಲಿ ಇದ್ದು ಅವುಗಳನ್ನು ಪ್ರೇರಿಸುತ್ತಾನೆ ಎಂದು ಹೇಳಿದೆ. ಹಾಗಾಗಿ ಇಂದ್ರಿಯಗಳು ಬ್ರಹ್ಮಕರಣಗಳೇ. ಜೊತೆಗೆ, ಯಸ್ತೇಜಸಿ ತಿಷ್ಠನ್ ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮನಿಗೆ ತೇಜಸ್ಸೇ ಮೊದಲಾದ ಭೂತಪ್ರೇರಕತ್ವ ಹೇಳಲ್ಪಟ್ಟಿದೆ. ತೇಜಸ್ಸೇ ಮೊದಲಾದ ಭೂತಗಳ ಅಂಶವೇ ಚಕ್ಷುರಾದಿಗಳು. ಹಾಗಾಗಿ ಚಕ್ಷುರಾದಿಗಳೂ ಬ್ರಹ್ಮಪ್ರಯೋಜ್ಯವೇ ಆಗಬೇಕು. ಚಕ್ಷುರಾದಿಗಳು ಬ್ರಹ್ಮಕರಣ ಎನ್ನುವುದಕ್ಕೆ ಈ ಯುಕ್ತಿಯೂ ಇದೆ. ಜೊತೆಗೆ, ಯಃ ಪ್ರಾಣೇ ತಿಷ್ಠನ್ ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮನಿಗೆ ಸರ್ವೇಂದ್ರಿಯಪ್ರೇರಕಪ್ರಾಣಪ್ರೇರಕತ್ವವೂ ಹೇಳಲ್ಪಟ್ಟಿದೆ. ಈ ಯುಕ್ತಿಯೂ ಇದೆ.ಬ್ರಹ್ಮನು ಸರ್ವೇಂದ್ರಿಯ ಪ್ರೇರಕನಾದ ಪ್ರಾಣನಿಗೂ ಪ್ರೇರಕನಾದ್ದರಿಂದ ಸರ್ವೇಂದ್ರಿಯ ಪ್ರೇರಕನಾಗಲೇಬೇಕು ಎಂಬುದೇ ಯುಕ್ತಿ.

**ಪ್ರಶ್ನೆ** :- ಇಂದ್ರಿಯಗಳು ಜೀವಕರಣ ಎನ್ನುವ ಶ್ರುತಿಗೆ ಏನು ಅರ್ಥ?

**ಉತ್ತರ** :- ಏಷ ಹ್ಯನೇನಾತ್ಮನಾ ಚಕ್ಷುಷಾ ದರ್ಶಯತಿ ಎಂಬ ಶ್ರುತಿಯಲ್ಲಿ ಹಾಗು ಕರಣೈಃ ಕಾರಣಂ ಬ್ರಹ್ಮ ಎಂಬ ಸ್ಮೃತಿಯಲ್ಲಿ ಬ್ರಹ್ಮನು ತನ್ನ ಕರಣಗಳೇ ಆದ ಚಕ್ಷುರಾದಿಗಳಿಂದ ಜೀವನಿಗೆ ದರ್ಶನಾದಿಗಳನ್ನು ಮಾಡಿಸುತ್ತಾನೆ ಎಂದು ಹೇಳಿದೆ. ಆದ್ದರಿಂದ ಇಂದ್ರಿಯಗಳು ಜೀವಕರಣ ಎಂಬ ಶ್ರುತಿಗೆ ಇಂದ್ರಿಯ-ಗಳು ಜೀವನಿಗೆ ಕ್ರಿಯಾಸಾಧನವಾಗಿದ್ದಾವೆ ಎಂದಷ್ಟೇ ಅಭಿಪ್ರಾಯ. ಹೇಗೆ

ಚೈತ್ರನ ಕುಠಾರವನ್ನು ಮೈತ್ರನು ಪಡೆದು ಉಪಯೊಗಿಸುತ್ತಾನೋ ಹಾಗೇ ಬ್ರಹ್ಮನಕರಣಗಳಾದ ಚಕ್ಷುರಾದಿಗಳ್ನು ಜೀವನು ದರ್ಶನಾದಿಕ್ರಿಯೆಯಲ್ಲಿ ಉಪಯೋಗಿಸುತ್ತಾನೆ ಎಂದರ್ಥ.

**ಪ್ರಶ್ನೆ** :- ಚಕ್ಷುರಾದಿ ಇಂದ್ರಿಯಗಳು ಈಶಪ್ರಯೋಜ್ಯವಾದ್ದರಿಂದ ಮುಖ್ಯವಾಗಿ ಜೀವಕರಣಗಳಲ್ಲದೇ ಹೋದರೂ ಕ್ರಿಯಾಸಾಧನವಾದಂತೆ ಮುಖ್ಯಪ್ರಾಣನೂ ಜೀವನಿಗೆ ಕ್ರಿಯಸಾಧನವಾಗಿದ್ದಾನೋ ಇಲ್ಲವೋ?

**ಉತ್ತರ** :- ಇಲ್ಲ, ಈಶಪ್ರಯೋಜ್ಯತ್ವ ಎಂಬುದು ಇಂದ್ರಿಯಗಳಲ್ಲಿ ಹಾಗು ಮುಖ್ಯಪ್ರಾಣನಲ್ಲಿ ಸಮವಾಗಿದ್ದರೂ ''ನ ಜೀವಾಪೇಕ್ಷಯಾ ಮುಖ್ಯಂ'' ಎಂಬ ಸ್ಮೃತಿಯಲ್ಲಿ ಹೇಳಿದಂತೆ ಮುಖ್ಯಪ್ರಾಣನಿಗೆ ಜೀವಕರಣತ್ವವೇ ಇಲ್ಲ.

ಇಂದ್ರಿಯಗಳು ಜೀವಕರಣಗಳು ಎಂಬುದನ್ನು ಇನ್ನೊಂದು ರೀತಿಯಲ್ಲೂ ಕೂಡಿಸಬಹುದು. ಹೇಗೆಂದರೆ, ''ಕರಣೈರ್ಜಾವ ನ ವಿಯುಜ್ಯತೇ'' ಎಂಬಲ್ಲಿ ಜೀವನ ಹಾಗು ಕರಣಗಳ ಸಂಬಂಧ ಅನಾದಿನಿತ್ಯ ಎಂದು ಹೇಳಲಾಗಿದೆ. ಹೇಗೆ ಚೈತ್ರನ ಕುಠಾರವನ್ನು ಮೈತ್ರನು ಬಹುಕಾಲದವರೆಗೆ ಹೊಂದಿದ್ದರೆ ಅದನ್ನು ಮೈತ್ರನ ಕುಠಾರ ಎಂದೇ ವ್ಯವಹರಿಸುತ್ತಾರೋ ಹಾಗೇ ಜೀವಕರಣಸಂಬಂಧ ಅನಾದಿನಿತ್ಯವಾದ್ದರಿಂದ ಔಪಚಾರಿಕವಾಗಿ ಜೀವನ ಕರಣಗಳು ಎಂದು ಹೇಳಲಾಗಿದೆ. ಇಂದ್ರಿಯಗಳು ಜೀವವಶ ಎಂದು ಅನುಭವವಿದೆಯಲ್ಲಾ? ಎಂದರೆ ಆ ಅನುಭವವು ಅಭಿಮಾನದಿಂದ ಬಂದದ್ದು. ವಸ್ತುಸ್ಥಿತಿಯಲ್ಲ ಎಂದು ಅಭಿಪ್ರಾಯ.

## ।। ಓಂ ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ಓಂ ।। ೨-೪-೧೧

ಹಿಂದಿನ ಅಧಿಕರಣದಲ್ಲಿ ಮುಖ್ಯಪ್ರಾಣನು ಜೀವನನ್ನು ಕುರಿತು ಕರಣನಲ್ಲ ಎಂದು ಹೇಳಿದ್ದು ಸರಿಯಲ್ಲ. ಮುಖ್ಯಪ್ರಾಣನೂ ಇಂದ್ರಿಯನೇ ಆದ್ದರಿಂದ

ಆವನಿಗೂ ಕರಣತ್ವವನ್ನು ಹೇಳಬೇಕು ಎಂದು ಶಂಕಾಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಸಂಗತಿಯಿದೆ. ಹಿಂದೆ ಹೇಳಲ್ಪಟ್ಟ ಇಂದ್ರಿಯತ್ವ ಎಲ್ಲಾ ಪ್ರಾಣಗಳಿಗೂ ಇದೆಯೇ ಅಥವಾ ಮುಖ್ಯಪ್ರಾಣನನ್ನು ಹೊರತುಪಡಿಸಿ ಉಳಿದ ಹನ್ನರಡಕ್ಕೆ ಮಾತ್ರವೋ ಎಂಬುದೇ ಸಂದೇಹ. ಎಲ್ಲಾ ಪ್ರಾಣಗಳಿಗೂ ಇಂದ್ರಿಯತ್ವವನ್ನು ಒಪ್ಪಬೇಕು ಎಂದು ಪೂರ್ವಪಕ್ಷ. ಏಕೆಂದರೆ, ''ಪ್ರಾಣಾ ವಾ ಇಂದ್ರಿಯಾಣಿ'' ಎಂಬ ಶ್ರುತಿಯು ಎಲ್ಲಾ ಪ್ರಾಣಗಳಿಗೂ ಇಂದ್ರಿಯತ್ವವನ್ನು ಹೇಳುತ್ತಿದೆಯಾದ್ದರಿಂದ.

**ಪ್ರಶ್ನೆ** :- ''ಪ್ರಾಣಾ ವಾ ಇಂದ್ರಿಯಾಣಿ'' ಎಂಬುದು ಸಾಮಾನ್ಯಶ್ರುತಿ. ''ದ್ವಾದಶೈವೇಂದ್ರಿಯಾಣ್ಯಾಹುಃ'' ಎಂಬುದು ವಿಶೇಷಶ್ರುತಿ. ಹಾಗಾಗಿ ವಿಶೇಷಶ್ರುತಿಗೆ ಅನುಸಾರವಾಗಿ ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಹನ್ನೆರಡಕ್ಕೆ ಮಾತ್ರ ಇಂದ್ರಿಯತ್ವವನ್ನು ಹೇಳಬೇಕು?

**ಪರಿಹಾರ** :- ''ಪ್ರಾಣಾ ವಾ ಇಂದ್ರಿಯಾಣಿ'' ಎಂಬುದು ಸಾಮಾನ್ಯ ಶ್ರುತಿ ಆಗಿರಬಹುದು ಆದರೆ ಈ ಶ್ರುತಿಯು ಯುಕ್ತಿಯುಕ್ತವಾಗಿದೆ. ಹಾಗಾಗಿ ಪ್ರಬಲವಾಗಿದೆ. ಇದಂದ್ರವಣತ್ವ (ವಿಷಯಗಳತ್ತ ಹರಿಯುವುದು) ಎಂಬುದೇ ಯುಕ್ತಿ. ಇದು ಎಲ್ಲಾ ಇಂದ್ರಿಯಗಳಿಗೂ ಇದೆ. ಹೀಗೆ ಪ್ರಬಲವಾದ ಸಾಮಾನ್ಯಶ್ರುತಿಯಿಂದ ವಿಶೇಷಶ್ರುತಿಗೆ ಬಾಧ ಹೇಳಬೇಕು. ಹನ್ನೆರಡಕ್ಕೆ ಮಾತ್ರ ಇಂದ್ರಿಯತ್ವ ಎಂದು ನಿಶ್ಚಯ ಮಾಡುವುದೂ ಕಷ್ಟ. ಏಕೆಂದರೆ, ಹದಿಮೂರು ಪ್ರಾಣಗಳಿಗೆ ಒಂದಕ್ಕೆ ಇಂದ್ರಿಯತ್ವ ಇಲ್ಲ ಎಂದು ಹೇಳಬೇಕು. ಅದು ಸಾಧ್ಯವಿಲ್ಲ ಏಕೆಂದರೆ ಎಲ್ಲಾ ಹದಿಮೂರು ಪ್ರಾಣರೂ ಈಶ್ವರವಶರೇ ಆದ್ದರಿಂದ. ಹೀಗಾಗಿ ಮುಖ್ಯಪ್ರಾಣನನ್ನೂ ಇಂದ್ರಿಯಕೋಟಿಯಲ್ಲಿ ಸೇರಿಸಬೇಕು.

**ಸಿದ್ಧಾಂತ** :- ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಹನ್ನೆರಡು ಪ್ರಾಣಗಳಿಗೆ ಮಾತ್ರ ಇಂದ್ರಿಯತ್ವ ಇರುವುದು. ಏಕೆಂದರೆ, ''ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯಮ್'' ಎಂಬ ವಿಶೇಷ ಶ್ರುತಿಯಿರುವುದರಿಂದ. ಇದಂದ್ರವಣ ಎಂಬ ಯುಕ್ತಿಯುಕ್ತವಾದ ಸಾಮಾನ್ಯಶ್ರುತಿಯು ಮುಖ್ಯ-

ಪ್ರಾಣನನ್ನು ಹೊರತುಪಡಿಸಿ ಉಳಿದ ಪ್ರಾಣವಿಷಯ ಎಂದು ಹೇಳಬಹು-ದಾದ್ದರಿಂದ ಅದರ ವಿರೋಧವಿಲ್ಲ.

ಚಕ್ಷುರಾದಿ ಇಂದ್ರಿಯಗಳಿಗೂ ಮುಖ್ಯಪ್ರಾಣನಿಗೂ ಈಶ್ವರವಶತ್ವ ಎಂಬ ಅಂಶದಲ್ಲಿ ಸಾಮ್ಯವಿದ್ದರೂ ಪ್ರಾಣನಲ್ಲಿ ಈಶ್ವರಸಾಮ್ಯ ಎಂಬ ವಿಶೇಷವಿದೆ. ಅದು ಚಕ್ಷುರಾದಿಗಳಲ್ಲಿಲ್ಲ. ಹೇಗೆಂದರೆ, ಮುಖ್ಯಪ್ರಾಣನು ಇದಂದ್ರವಣ-ಯುಕ್ತವಾದ ಸರ್ವಪ್ರಾಣನಿಯಂತೃ ಆಗಿದ್ದಾನೆ ಹಾಗೇ ಸರ್ವಕರ್ತೃ ಸರ್ವಕಾರಯಿತೃ ಆಗಿದ್ದಾನೆ. ಇದೇ ಪ್ರಾಣನಲ್ಲಿರುವ ಈಶ್ವರಸಾಮ್ಯ. ಈ ವಿಷಯವು ''ದ್ರವತಾಂ ಹೀಂದ್ರಿಯಾಣಾಂತು'' ಎಂಬ ಶ್ರುತಿಯಿಂದಲೂ ''ಸ್ಥಿತ ಏವ ಹೀದಂ ಮುಖ್ಯಃ ಪ್ರಾಣಃ ಕರೋತಿ ಕಾರಯತಿ'' (ಇದ್ದಲ್ಲೇ ಇದ್ದುಕೊಂಡು ಮುಖ್ಯಪ್ರಾಣನು ಎಲ್ಲ ವ್ಯಾಪಾರವನ್ನು ಮಾಡಿ, ಮಾಡಿಸು-ತ್ತಾನೆ ಎಂದರ್ಥ) ಎಂಬ ಸ್ಮೃತಿಯಿಂದಲ್ಲೂ ಸಿದ್ಧಾವಾಗಿದೆ.

ಇತರ ಇಂದ್ರಿಯಗಳಂತೆ ಪ್ರಾಣನೂ ಈಶ್ವರವಶನೇ ಆದರೂ ಇತರ ಇಂದ್ರಿಯಗಳು ಹೇಗೆ ಜೀವಪ್ರಯತ್ನವನ್ನು ಅಪೇಕ್ಷಿಸಿ (ಅನುಸರಿಸಿ) ಈಶ್ವರವಶವಾಗಿದ್ದಾವೋ ಹಾಗೆ ಮುಖ್ಯಪ್ರಾಣ ಜೀವಪ್ರಯತ್ನವನ್ನು ಅಪೇಕ್ಷಿಸಿ ಈಶ್ವರವಶನಾಗಿಲ್ಲ. ಈ ವ್ಯತ್ಯಾಸ ಮುಖ್ಯಪ್ರಾಣನಲ್ಲಿದೆ. ಹಾಗಾಗಿ ಮುಖ್ಯಪ್ರಾಣ ಇಂದ್ರಿಯಗಳಲ್ಲಿ ಸೇರುವುದಿಲ್ಲ.

## ॥ ಓಂ ಸಂಜ್ಞಾಮೂರ್ತಿಕ್ಲಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್ ಓಂ ॥ ೨-೪-೧೨

ಮುಖ್ಯಪ್ರಾಣನ ವಿಚಾರ ಮಾಡಿದ ನಂತರ, ಮುಖ್ಯಪ್ರಾಣನೇ ವಿರಿಂಚನಾದ್ದರಿಂದ, ಈ ಅಧಿಕರಣದಲ್ಲಿ ವಿರಿಂಚ ವಿಚಾರ ಮಾಡಲಾಗುತ್ತಿದೆ. ಹೀಗೆ ಸಂಗತಿಯಿದೆ. ಹಿಂದೆ ವಿಚಾರಮಾಡಲ್ಪಟ್ಟ ಇಂದ್ರಿಯಗಳಿಗೆ ಆಶ್ರಯ-ವಾದ್ದರಿಂದ ಬುದ್ಧಿಯಲ್ಲಿ ಉಪಸ್ಥಿತವಾದ (ಸ್ಮೃತವಾದ) ಶರೀರ, ಹಾಗು ಶರೀರವೇ ಮೊದಲಾದ ಸಮಸ್ತವಸ್ತುಗಳು ವಿರಿಂಚನಿಂದ ಸೃಷ್ಟವಾಗಿದೆಯೋ ಅಥವಾ ಪರಮಾತ್ಮನಿಂದಲೋ ಎಂಬುದೇ ಸಂದೇಹ. ವಿರಿಂಚನಿಂದಲೂ ಈ ಶರೀರವೇ ಮೊದಲಾದ ವಸ್ತುಗಳು ಹುಟ್ಟಿದೆ ಎಂದು ಪೂರ್ವಪಕ್ಷ. ಏಕೆಂದರೆ

'ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ' ಎಂಬ ಶ್ರುತಿಯು ವಿರಿಂಚನಿಂದಲೇ ಶರೀರಾದಿಗಳ ಸೃಷ್ಟಿಯಾಗಿದೆ ಎಂದು ಹೇಳುತ್ತಿದೆ. ಈ ಶ್ರುತಿಯು ಯುಕ್ತಿಯುಕ್ತವೂ ಆಗಿದೆ. ಆದ್ದರಿಂದಲೇ ಪ್ರಬಲವೂ ಆಗಿದೆ. ''ಯಸ್ಮಾದ್ವಿರೇಚಯೇತ್ ಸರ್ವಂ ವಿರಿಂಚಸ್ತೇನ ಭಣ್ಯತೇ'' ಎಂಬ ಸ್ಮೃತಿಯಲ್ಲಿ ವಿರಿಂಚತ್ವ ಎಂಬುದು ವಿರಿಂಚ ಶಬ್ದದ ಪ್ರವೃತ್ತಿನಿಮಿತ್ತ ಎಂದು ಹೇಳಲಾಗಿದೆ ಇದೇ ಯುಕ್ತಿ. ವಿರಿಂಚತ್ವ ಎಂದರೆ ವಿರೇಚಕತ್ವ, ಅಂದರೆ ಶರೀರಾದಿಸ್ರಷ್ಟೃತ್ವ (ಅಂದರೆ ಸೃಷ್ಟಿಕರ್ತೃತ್ವ) ಹೀಗೆ ಪ್ರಬಲವಾದ ''ವಿರಿಂಚೋ ವಾ...'' ಎಂಬ ಶ್ರುತಿಯಿಂದ ದುರ್ಬಲವಾದ ''ಪರಮಾಧ್ಯೇತೇ ನಾಮರೂಪೇ ವ್ಯಾಕ್ರಿಯೇತೇ'' ಎಂದು ಪರಮಾತ್ಮನಿಂದ ಶರೀರಾದಿಗಳ ಸೃಷ್ಟಿಯಾಗಿದೆ ಎಂದು ಹೇಳುವ ಶ್ರುತಿಗೆ ಬಾಧವನ್ನು ಹೇಳಬೇಕು.

**ಪ್ರಶ್ನೆ** :- ''ವಿರಿಂಚೋ ವಾ ಇದಂ ಸರ್ವಂ'' ಎಂಬ ಶ್ರುತಿಯಲ್ಲಿ ವಿರಿಂಚನಿಗೆ ಸ್ರಷ್ಟೃತ್ವವನ್ನು ಹೇಳಿದ್ದರೂ ವಿಯದಧಿಕರಣದಲ್ಲಿ ಹೇಳಿದಂತೆ ಪರಮಾತ್ಮನಿಂದ ಆಗುವ ಶರೀರಾದಿ ಸೃಷ್ಟಿಯಲ್ಲಿ ವಿರಿಂಚನು ದ್ವಾರಮಾತ್ರ ಎಂದೇಕೆ ಹೇಳಬಾರದು?

**ಪರಿಹಾರ** :- ಮುಖ್ಯಾರ್ಥವನ್ನೇ ಇಟ್ಟುಕೊಳ್ಳಲು ಬರುವಾಗ ದ್ವಾರತ್ವಕಲ್ಪನೆಯನ್ನು ಮಾಡುವುದು ಸರಿಯಲ್ಲ.

**ಸಿದ್ಧಾಂತ** :- ವಿಷ್ಣುವೇ ದೇಹಾದಿನಾಮರೂಪಾತ್ಮಕ ಪ್ರಪಂಚದ ಸೃಷ್ಟಿಕರ್ತಾ, ವಿರಿಂಚನಲ್ಲ ಹೇಗೆಂದರೆ, ಶರೀರಾದಿವಸ್ತುಗಳ ಸೃಷ್ಟಿಯಾಗಬೇಕಾದರೆ ಪೃಥಿವ್ಯಾದಿಭೂತತ್ರಯ ಮಿಶ್ರೀಕರಣವಾಗಬೇಕು. ಇದೇ ತ್ರಿವೃತ್ಕರಣ. ಈ ತ್ರಿವೃತ್ಕರ್ತೃತ್ವ ಎಂಬುದು ''ಸೇಯಂ ದೇವತೇಮಾಸ್ತಿಸ್ರೋ ದೇವತಾ'' ಎಂಬ ಶ್ರುತಿಯಿಂದ ವಿಷ್ಣುಧರ್ಮ ಎಂದು ತಿಳಿಯುತ್ತಿದೆ. ಹಾಗಾಗಿ ಶರೀರಾದಿಗಳ ಸೃಷ್ಟಿಯೂ ವಿಷ್ಣುವಿನಿಂದಲೇ ಎಂದು ಒಪ್ಪಬೇಕು. ಹೀಗೆ ವಿಷ್ಣುವಿಗೆ ಶರೀರಾದಿಸೃಷ್ಟಿಕರ್ತೃತ್ವವನ್ನು ಹೇಳುವ ಶ್ರುತಿಯೂ ಮೇಲೆ ಹೇಳಿದ ಯುಕ್ತಿಯುಕ್ತವಾದ್ದರಿಂದ ಪ್ರಬಲವಾಯಿತು. ಹಿಂದೆ ವಿರಿಂಚನೇ ಶರೀರಾದಿಸ್ರಷ್ಟಾ ಎಂದು ಹೇಳುವ 'ವಿರಿಂಚೋ ವಾ' ಎಂಬ ಯುಕ್ತಿಯುಕ್ತವಾದ ಶ್ರುತಿಗೆ ಅವಾಂತರಸೃಷ್ಟಿಪರತ್ವವನ್ನು ಹೇಳಬೇಕು. (ಅಂದರೆ ವಿರಿಂಚನಿಗೆ ನಾಮರೂಪ-

ಸೃಷ್ಟಿಯಲ್ಲಿ ದ್ವಾರತ್ವವನ್ನು ಹೇಳಬೇಕು. ಮುಖ್ಯವಾಗಿ ವಿಷ್ಣುವೇ ಸೃಷ್ಟಿಕರ್ತಾ) ಹೀಗೆ ಆ ಶ್ರುತಿಯು ಸಾವಕಾಶವಾಯಿತು.

## ।।ಓಂ ಮಾಂಸಾದಿಭೌಮಂ ಯಥಾಶಬ್ದಮಿತರಯೋಶ್ಚ ಓಂ।।
## ೨-೪-೧೩

ಹಿಂದಿನ ಅಧಿಕರಣದಲ್ಲಿ ದೇಹಾದಿಗಳ ಕರ್ತಾ ವಿಷ್ಣು ಎಂದು ಹೇಳಿಯಾಯಿತು. ಈ ಅಧಿಕರಣದಲ್ಲಿ ದೇಹದ ಉಪಾದಾನ ಕಾರಣ ಯಾವುದು ಎಂದು ವಿಚಾರಮಾಡುವುದರಿಂದ ಸಂಗತಿಯಿದೆ. 'ಸಂಜ್ಞಾ-ಮೂರ್ತಿ' ಎಂದು ಹಿಂದೆ ಮೂರ್ತಿಪದದಿಂದ ಪ್ರಕೃತವಾದ ದೇಹವು ಆಪ್ಯವೋ (ಅಪ್(ಜಲ)ನ ವಿಕಾರವೋ), ಪಾರ್ಥಿವವೋ (ಪೃಥಿವೀ-ವಿಕಾರವೋ) ತೈಜಸವೋ (ತೇಜಸ್ಸಿನ ವಿಕಾರವೋ) ಅಥವಾ ಭೂತತ್ರ-ಯಾತ್ಮಕವೋ ಎಂಬುದೇ ಸಂದೇಹ.

**ಪೂರ್ವಪಕ್ಷ** :- ದೇಹವು ಆಪ್ಯ ಎಂದು ಮೊದಲನೇ ಪೂರ್ವಪಕ್ಷ. ಏಕೆಂದರೆ, ''ಆಪಃ ಶರೀರಂ'' ಎಂಬ ಶ್ರುತಿಯು ಶರೀರವು ಆಪ್ಯ ಎಂದು ಹೇಳುತ್ತಿದೆ. ಈ ಶ್ರುತಿಯು ಯುಕ್ತಿಯುಕ್ತವೂ ಆಗಿದೆ. ಅದೇನೆಂದರೆ, ಮಾಂಸಭಕ್ಷಣದಿಂದ ತೃಪ್ತಿಯಾಗುವುದು ಕಂಡಿದೆ. ಹೀಗಾಗಿ ತರ್ಪಕತ್ವ ಎಂಬುದೇ ಯುಕ್ತಿ. ತರ್ಪಕತ್ವ ಎಂಬುದು ಅಪ್‌ನ ಧರ್ಮ. ಅದು ಶರಿರದಲ್ಲೂ ಕಂಡಿರುವುದರಿಂದ ದೇಹವೂ ಆಪ್ಯ ಆಗಬೇಕು

ದೇಹವು ಪಾರ್ಥಿವ ಎಂದು ಎರಡನೇ ಪೂರ್ವಪಕ್ಷ. ಏಕೆಂದರೆ, ''ಪೃಥಿವೀ ಶರೀರಂ'' ಎಂಬ ಶ್ರುತಿಯು ಶರೀರವು ಪಾರ್ಥಿವ ಎಂದು ಹೇಳುತ್ತಿದೆ. ಈ ಶ್ರುತಿಯೂ ಯುಕ್ತಿಸಹಿತವಾಗಿದೆ. ಶರೀರದಲ್ಲಿ ಕಾಠಿನ್ಯ, ಗಂಧವತ್ವ ಇತ್ಯಾದಿಗಳು ಕಂಡಿವೆ. ಇದು ಪೃಥಿವೀ ಧರ್ಮ ಹಾಗಾಗಿ ಶರೀರವೂ ಪಾರ್ಥಿವ ಆಗಬೇಕು. ಇದೇ ಯುಕ್ತಿ.

ದೇಹವು ತೈಜಸ ಎಂದು ಮೂರನೇ ಪೂರ್ವಪಕ್ಷ. ಏಕೆಂದರೆ, ''ಸೋಗ್ನೇ-ರ್ದೇವಯೋನ್ಯಾ ಆಹುತಿಭ್ಯಃ ಸಂಭೂಯ ಹಿರಣ್ಯಶರೀರ'' ಎಂಬ ಶ್ರುತಿಯು ಹಿರಣ್ಯಶರೀರ ಎಂಬ ಪದದಿಂದ ಶರೀರವು ತೈಜಸ ಎಂದು ಹೇಳುತ್ತಿದೆ. ಈ

ಶ್ರುತಿಯೂ ಯುಕ್ತಿಯುಕ್ತವಾಗಿದೆ. ಶರೀರದಲ್ಲಿ ಉಷ್ಣತೆ ಕಂಡಿದೆ. ಇದು ತೇಜಸ್ಸಿನ ಧರ್ಮ. ಹಾಗಾಗಿ ಶರೀರವೂ ತೈಜಸವಾಗಬೇಕು ಎಂಬುದೇ ಯುಕ್ತಿ.

**ಪ್ರಶ್ನೆ** :- ''ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ'' ಎಂಬ ಶ್ರುತಿಯು ದೇಹವು ಭೂತತ್ರಯಾತ್ಮಕ ಎಂದು ಹೇಳುತ್ತಿದೆ. ಹಾಗಾಗಿ ಹಿಂದೆ ಹೇಳಿದ ಆಪ್ಯ ಮೊದಲಾದವು ಹೇಗೆ ಕೂಡುತ್ತದೆ?

**ಪರಿಹಾರ** :- ''ಆಪ ಏವ ಶರೀರಂ'' ಇತ್ಯಾದಿ ವಿಶೇಷೋಕ್ತಿಗಳು ಕೂಡುವುದಿಲ್ಲವಾದ್ದರಿಂದ ಭೂತತ್ರಯಾತ್ಮಕತ್ವ ಪಕ್ಷವು ಯುಕ್ತವಲ್ಲ.

**ಸಿದ್ಧಾಂತ** :- ದೇಹವು ಭೂತತ್ರಯಾತ್ಮಕವೇ ಆಗಿದೆ. ವಿಶೇಷಶ್ರುತಿಗಳ ಅನುಪಪತ್ತಿ ಇಲ್ಲ. ಏಕೆಂದರೆ, ದೇಹವು ಅನೇಕಭೂತಾತ್ಮಕವಾಗಿದ್ದರೂ ತತ್ತದ್ಭೂತವಿಶೇಷಗಳ ಸಂಯೋಗವನ್ನು ವಿವಕ್ಷೆಯಲ್ಲಿ ಇಟ್ಟುಕೊಂಡು ವಿಶೇಷಶ್ರುತಿ ಹೊರಟಿದೆ ಎಂದು ಅರ್ಥಮಾಡಬಹುದು ಹೀಗೆ ವಿಶೇಷಶ್ರುತಿಗಳು ಸಾವಕಾಶವಾಗಿವೆ. ''ಯತ್ಕಠಿನಂ ಸಾ ಪೃಥಿವೀ ಯದ್ದ್ರವಂ ತದಾಪಃ ಯದುಷ್ಣಂ ತತ್ತೇಜಃ'' ದೇಹದಲ್ಲಿರುವ ಕಠಿನ ಅಂಶ ಪಾರ್ಥಿವ, ದ್ರವಾಂಶ ಅಪ್, ಉಷ್ಣಾಂಶ ತೇಜಸ್ಸು ಎಂದು ಭೂತತ್ರಯಾತ್ಮಕತ್ವವನ್ನು ಹೇಳುವ ಶ್ರುತಿ ಇರುವುದರಿಂದ ದೇಹವು ಅನೇಕಭೂತಗಳನ್ನು ಉಪಾದಾನವಾಗಿ ಹೊಂದಿದೆ ಎಂಬುದೇ ಯುಕ್ತವಾಗಿದೆ.

**ಶ್ರೀರಾಘವೇಂದ್ರಸ್ವಾಮಿಗಳು ಬರೆದಿರುವ ಶ್ರೀಮನ್ನ್ಯಾಯಮುಕ್ತಾವಲಿ ಗ್ರಂಥದ ಎರಡನೆಯ ಅಧ್ಯಾಯದ ನಾಲ್ಕನೆಯ ಪಾದವು ಸಮಾಪ್ತವಾಯಿತು.**

**॥ ಶ್ರೀ ಕೃಷ್ಣಾರ್ಪಣಮಸ್ತು ॥**

